ವಿಷಯಾನುಕ್ರಮಣಿಕೆ

ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ನಂ—೧೬

ಶ್ರೀ ವ್ಯಾಸಮಹರ್ಷಿಪ್ರಣೀತಂ

# ಶ್ರೀ

# ಪದ್ಮಮಹಾಪುರಾಣಂ

(ಸಂಸ್ಕೃತಮೂಲ, ಕನ್ನಡ ಅರ್ಥಾನುವಾದ ವಿವರಣೆಗಳೊಡನೆ)

ಉತ್ತರಖಂಡ — [illegible] ಭಾಗ

[illegible]

ಅನುವಾದಕ

**ಬೇಲದಕೆರೆ ಸೂರ್ಯನಾರಾಯಣಶಾಸ್ತ್ರೀ**

ಸಾಹಿತ್ಯ ವಿದ್ವಾನ್

ಕನ್ನಡ ಪಂಡಿತ (ಮೈಸೂರು) ಕನ್ನಡ ವಿದ್ವಾನ್ (ಮದ್ರಾಸು)

ಮೈಸೂರು :

ಶ್ರೀ ಹನುಮಾನ್ ಪ್ರೆಸ್

[illegible]

|| ಶ್ರೀಃ ||

-X-

# ಮುನ್ನುಡಿ



ಇದು ಪದ್ಮಮಹಾಪುರಾಣದ ಉತ್ತರಖಂಡದ ಎರಡನೆಯ ಭಾಗದ ಪ್ರಕಟಣವಾಗಿರುತ್ತದೆ. ಇದರಲ್ಲಿ ಇಪ್ಪತ್ತಾರನೆಯ ಅಧ್ಯಾಯದಿಂದ ಮೊದಲಾಗಿ ಅರವತ್ತೈದನೆಯ ಅಧ್ಯಾಯವು ಪೂರ್ತಿಯಾಗಿರುವುದು.

ಅನ್ನದಾನವು ಬಹು ಶ್ರೇಷ್ಠವಾದುದೆಂದೂ, ಅದರಿಂದ ಸಂತೋಷಪಡಿಸುವುದಕ್ಕಾಗುವಂತೆ ಮತ್ತಾವುದರಿಂದಲೂ ಆಗುವುದಿಲ್ಲವೆಂದೂ ಸ್ಪಷ್ಟವಾಗಿ ತಿಳಿಸಿ, ಅದಕ್ಕೋಸ್ಕರ ಒಬ್ಬ ರಾಜನ ಇತಿಹಾಸವನ್ನು ಹೇಳಿ, ಅವನು ಅನ್ನದಾನವು ತುಚ್ಛವೆಂದೆಣಿಸಿ ಉತ್ತಮೋತ್ತಮ ದಾನಗಳನ್ನು ಮಾಡಿ ಅದರಿಂದ ಸ್ವರ್ಗಸೌಖ್ಯ ಹೊಂದಿದ್ದರೂ, ಅನ್ನದಾನ ಮಾಡದಿದ್ದುದರಿಂದ ತನ್ನ ದೇಹವನ್ನೇ ತಾನು ತಿನ್ನುತ್ತಿದ್ದನೆಂಬುದನ್ನು ವರ್ಣಿಸಿ, ಅನ್ನದಾನದ ಮಹಿಮೆಯು ವಿಸ್ತಾರವಾಗಿ ವಿವರಿಸಲ್ಪಟ್ಟಿದೆ.

ಪುರಾಣವನ್ನು ಹೇಳುವುದು, ಹೇಳಿಸುವುದು, ಅದನ್ನು ಶ್ರದ್ಧೆಯಿಂದ ಕೇಳುವುದು, ಇವುಗಳಿಂದ ಬರತಕ್ಕ ಫಲ ಇವು ಇತಿಹಾಸದೊಡನೆ ಮನೋಹರವಾಗಿ ವರ್ಣಿತವಾಗಿದೆ.

ಗೋಪಿಚಂದನ ಮಹಿಮೆ, ಅದರ ಧಾರಣ ವಿಧಿ, ದೀಪವ್ರತ. ಇವು ಮನೋಹರವಾಗಿ ವಿವೃತವಾಗಿರುವುದಲ್ಲದೆ, ಜನ್ಮಾಷ್ಟಮಿಯ ವಿಧಾನವನ್ನೂ, ಶಾಸ್ತ್ರಾಧಾರದಿಂದ ಇದನ್ನು ಮಾಡತಕ್ಕ ದಿನವನ್ನೂ, ಪೂಜಾವಿಧಾನಮೊಡನೆ ವಿಮರ್ಶಿಸಲಾಗಿದೆ.

ಮೂವತ್ತನಾಲ್ಕನೆಯ ಅಧ್ಯಾಯದಲ್ಲಿ ದಶರಥನು ಶನೈಶ್ಚರನಮೇಲೆ ಯುದ್ಧಕ್ಕೆ ಹೋಗಿ ಅವನಿಂದ ವರ ಪಡೆದಿರುವುದನ್ನು ನೋಡಿದರೆ ಮನುಷ್ಯ ಶಕ್ತಿಯು ಸರಿಯಾದ ನಡತೆಯುಳ್ಳವನಿಗೆ ಅತ್ಯಮೂಲ್ಯವಾದುದೆಂದು ತಿಳಿಯಲು ಉತ್ತಮ ನಿದರ್ಶನವಾಗಿದೆ.

ಅನಂತರ ಏಕಾದಶಿಯ ವಿಷಯವನ್ನು ವಿವರಿಸುತ್ತಾ ಅದನ್ನು ಯಾರು ಯಾರು ಯಾವ ಯಾವ ಕಾಲದಲ್ಲಿ ಹೇಗೆ ಆಚರಿಸಬೇಕೆಂಬುದನ್ನು ವಿವರಿಸಿ ತ್ರಿಸ್ಪೃಶೈಕಾದಶಿಯು ಅತ್ಯಮೂಲ್ಯವಾದುದೆಂದು ವರ್ಣಿಸಲ್ಪಟ್ಟಿದೆ. ಅಂತೆಯೇ ಹನ್ನೆರಡು ತಿಂಗಳುಗಳಲ್ಲಿಯೂ ಬರುವ ಶುಕ್ಲ ಕೃಷ್ಣ ಪಕ್ಷಗಳ ಇಪ್ಪತ್ತನಾಲ್ಕು ಏಕಾದಶಿಗಳನ್ನು ವಿವರಿಸುತ್ತಾ ಅಧಿಕಮಾಸದ ಎರಡು ಏಕಾದಶಿಗಳನ್ನೂ ವರ್ಣಿಸಿ ಅವಕ್ಕೆ ದೇವತೆಗಳನ್ನು ಹೇಳಿ ಅದರಿಂದ ಅವಕ್ಕೆ ಬಂದಿರುವ ಹೆಸರುಗಳನ್ನೂ ವಿವರಿಸಿದೆ. ಕೊನೆಗೆ ಏಕಾದಶಿಯು ಬಹುವಾದ ಫಲವುಳ್ಳದ್ದು ಸರ್ವಪ್ರಕಾರವಾಗಿ ಅನುಸರಿಸಬೇಕೆಂಬುದೇ ಈ ವಿವರಣೆಯ ಮುಖ್ಯೋದ್ದೇಶವಾಗಿದೆ.

ಪಂಡಿತರುಗಳಿಗೆ ಉದಾರಾಶ್ರಯವನ್ನಿತ್ತು ಇಂತಹ ಉತ್ತಮ ಗ್ರಂಥಗಳ ಪ್ರಚಾರಕಾರ್ಯವನ್ನು ಕನ್ನಡಿಗರ ಮಾತೃಭಾಷೆಯಾದ ಕನ್ನಡದಲ್ಲಿ ಸುಲಭವಾಗಿ ತಿಳಿಯುವ ಹಾಗೆ ಉಪಕರಿಸುತ್ತಿರುವ ನಮ್ಮನ್ನಾಳುವ ಮಹಾಸ್ವಾಮಿಯವರಾದ **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ. ಸಿ. ಎಸ್. ಐ.** ಮಹಾಪ್ರಭುಗಳವರಿಗೆ ಸರ್ವೇಶ್ವರನು ಸಕಲ ಸೌಭಾಗ್ಯ, ಸಂಪತ್ತು, ಸತ್ಪುತ್ರಾದಿ ಸನ್ಮಂಗಳವನ್ನು ಕರುಣಿಸಲೆಂದು ಪ್ರಾರ್ಥಿಸಿ, ಮಹಾಸ್ವಾಮಿಯವರಿಗೆ ನನ್ನ ಹೃತ್ಪೂರ್ವಕವಾದ ಧನ್ಯವಾದಗಳನ್ನು ಅರ್ಪಿಸುತ್ತೇನೆ.

ಮೈಸೂರು,<br>6—9—1945

ಅನುವಾದಕ,<br>**ಬೇಲದಕೆರೆ ಸೂರ್ಯನಾರಾಯಣಶಾಸ್ತ್ರಿ.**



# ಪದ್ಮಮಹಾಪುರಾಣದ ಉತ್ತರಖಂಡದಲ್ಲಿ ಎರಡನೆಯ ಭಾಗದ
# ವಿಷಯಾನುಕ್ರಮಣಿಕೆ



|| ಶ್ರೀ ||

-X-

ಮಹಾಮುನಿ ಶ್ರೀ ವ್ಯಾಸಪ್ರಣೀತಂ

# ಪದ್ಮಮಹಾಪುರಾಣಂ

## ತತ್ರ ಷಷ್ಠಮುತ್ತರಖಂಡಂ



### || ಅಥ ಷಡ್ವಿಂಶೋಽಧ್ಯಾಯಃ ||



**|| ನಾರದ ಉವಾಚ ||**

**ಏವಂ ತುಳಸ್ಯಾ ಮಾಹಾತ್ಮ್ಯಂ ತ್ವತ್ಪ್ರಸಾದಾ ಚ್ಛ್ರುತಂ ಮಯಾ |**
**ಸಾಂಪ್ರತಂ ತು ಸಮಾಚಕ್ಷ್ವ ತ್ರಿರಾತ್ರಂ ತುಳಸೀವ್ರತಂ || ೧ ||**

**|| ಸದಾಶಿವ ಉವಾಚ ||**

**ಶೃಣು ವಿದ್ವನ್ಮಹಾಬುದ್ಧೇ ವ್ರತಮೇತತ್ಪುರಾತನಂ |**
**ಯಚ್ಛ್ರುತ್ವಾ ಸರ್ವಪಾಪೇಭ್ಯೋ ಮುಚ್ಯತೇ ನಾತ್ರ ಸಂಶಯಃ || ೨ ||**

---

### ಇಪ್ಪತ್ತಾರನೆಯ ಅಧ್ಯಾಯವು



೧. ನಾರದನು ಹೇಳಿದನು– ಎಲೈ ಮಹೇಶನೇ ! ನಿನ್ನ ಅನುಗ್ರಹದಿಂದ ತುಳಸಿಯ ಮಹಿಮೆಯನ್ನು ಕೇಳಿ ತಿಳಿದುಕೊಂಡೆನು. ಈಗ ಮೂರುರಾತ್ರಿ ಮಾಡುವ ತುಳಸಿಯ ವ್ರತವನ್ನು ಹೇಳು.

೨. ಸದಾಶಿವನು ಹೇಳಿದನು– ಎಲೈ ಮಹಾಬುದ್ಧಿಯುಳ್ಳವನೇ ! ಈ ಪುರಾತನವಾದ ವ್ರತವನ್ನು ಕೇಳು. ಇದನ್ನು ಕೇಳಿದರೆ ಎಲ್ಲಾ ಪಾಪವೂ ನಾಶವಾಗುತ್ತದೆ. ಸಂಶಯವಿಲ್ಲ.

ಪುರಾ ರಥಂತರೇ ಕಲ್ಪೇ ರಾಜಾ ಹ್ಯಾಸೀತ್ ಪ್ರಜಾಪತಿಃ ।
ತಸ್ಯ ಭಾರ್ಯಾ ತು ವಿಖ್ಯಾತಾ ಚಂದ್ರರೂಪಾ ಮಹಾಸತೀ ॥ ೩ ॥

ಸಾ ವೈ ವ್ರತಮಿದಂ ಚಕ್ರೇ ಸರ್ವಕಾಮಫಲಪ್ರದಂ ।
ತ್ರಿರಾತ್ರಂ ತು ವ್ರತಂ ತಸ್ಯ ಧರ್ಮಕಾಮಾರ್ಥಮೋಕ್ಷದಂ ॥ ೪ ॥

ಸಫಲಂ ಜೀವಿತಂ ತೇಷಾಂ ಯೈಃ ಶ್ರುತಂ ತುಳಸೀವ್ರತಂ ।
ಕಾರ್ತಿಕೇ ಶುಕ್ಲಪಕ್ಷೇ ತು ನವಮ್ಯಾಂ ಚೈವ ನಾರದ ॥ ೫ ॥

ನಿಯಮಸ್ಥೋವ್ರತೀ ತಿಷ್ಠೇತ್ ಭೂಮಿಶಾಯೀ ಜಿತೇಂದ್ರಿಯಃ ।
ವ್ರತಂ ತ್ರಿರಾತ್ರಮುದ್ದಿಶ್ಯ ಶುಚಿಃ ಸಂಯತಮಾನಸಃ ॥ ೬ ॥

ಸ್ವಪ್ನೇ ನಿಯಮಪೂರ್ವಂ ತು ತುಳಸೀವನ ಸನ್ನಿಧೌ ।
ತತೋ ಮಧ್ಯಾಹ್ನ ಸಮಯೇ ನದ್ಯಾದೌ ವಿಮಲೇ ಜಲೇ ॥ ೭ ॥

ಸ್ನಾನಂ ಕೃತ್ವಾ ಪಿತೄನ್ ದೇವಾಂಸ್ತರ್ಪಯೇದ್ವಿಧಿಪೂರ್ವಕಂ ।
ಸೌವರ್ಣಂ ಕಾರಯೇದ್ದೇವಂ ಲಕ್ಷ್ಮ್ಯಾ ಸಹ ಜನಾರ್ದನಂ ॥ ೮ ॥

---

೩. ಪೂರ್ವದಲ್ಲಿ ರಥಂತರ ಕಲ್ಪದಲ್ಲಿ ಪ್ರಜಾಪತಿಯೆಂಬ ರಾಜನಿದ್ದನು. ಅವನಿಗೆ ಚಂದ್ರರೂಪಳೆಂಬ ಹೆಂಡತಿಯಿದ್ದಳು. ಅವಳು ಬಹು ಪತಿವ್ರತೆಯಾಗಿ ಇದ್ದಳು.

೪. ಆಕೆಯು ಈ ತ್ರಿರಾತ್ರಿ ತುಳಸೀವ್ರತವನ್ನು ಮಾಡಿದಳು. ಆ ವ್ರತವು ಧರ್ಮಕಾಮಾರ್ಥಮೋಕ್ಷಗಳನ್ನು ಕೊಡುತ್ತದೆ.

೫–೮. ಈ ತುಳಸಿಯ ವ್ರತವನ್ನು ಕೇಳಿದವರ ಜೀವಿತವು ಸಫಲವಾಗುವುದು. ಕಾರ್ತಿಕಮಾಸದ ಶುಕ್ಲಪಕ್ಷದ ನವಮಿಯ ದಿನ ನಿಯಮದಿಂದ ವ್ರತವನ್ನು ಹೊಂದಿ ಜಿತೇಂದ್ರಿಯನಾಗಿ ನೆಲದಮೇಲೆ ಮಲಗಬೇಕು. ಮೂರು ದಿನದ ವ್ರತವನ್ನುದ್ದೇಶಿಸಿಕೊಂಡು ನಿಯಮವಂತನಾಗಿ ಹಿಂದಿನ ದಿನದ ರಾತ್ರಿಯಲ್ಲಿ ತುಳಸಿಯ ವನದ ಹತ್ತಿರ ಮಲಗಿರಬೇಕು. ಅನಂತರ ಮಧ್ಯಾಹ್ನದಲ್ಲಿ ನದಿ ಮುಂತಾದುವುಗಳಲ್ಲಿ ಸ್ನಾನಮಾಡಿ ಶಾಸ್ತ್ರದಲ್ಲಿ ಹೇಳಿರುವಂತೆ ದೇವತೆಗಳಿಗೂ ಪಿತೃಗಳಿಗೂ ತರ್ಪಣಮಾಡಬೇಕು. ಚಿನ್ನದಿಂದ ಲಕ್ಷ್ಮಿಯ ಮತ್ತು ವಿಷ್ಣುವಿನ ವಿಗ್ರಹವನ್ನು ಮಾಡಿಸಬೇಕು.

**ವಿತ್ತಶಾಠ್ಯಂ ನ ಕರ್ತವ್ಯಮಾತ್ಮನಃ ಶ್ರೇಯಮಿಚ್ಛತಾ ।
ವಸ್ತ್ರಯುಗ್ಮಂ ತತಃ ಕಾರ್ಯಂ ಪೀತೇ ಶುಕ್ಲೇಪಿ ವಾಸಸೀ ॥ ೯ ॥**

**ನವಗ್ರಹಾಣಾಮಾರಂಭೇ ಶಾಂತಿಕಂ ವಿಧಿಪೂರ್ವಕಂ ।
ಶ್ರಾಪಯಿತ್ವಾ ಚರುಂ ತತ್ರ ವೈಷ್ಣವಂ ಹೋಮಮಾಚರೇತ್ ॥ ೧೦ ॥**

**ದ್ವಾದಶ್ಯಾಂ ದೇವದೇವೇಶಂ ಪೂಜಯಿತ್ವಾ ಪ್ರಯತ್ನತಃ ।
ಅವ್ರಣಂ ಶುದ್ಧಕಲಶಂ ಸ್ಥಾಪಯೇದ್ವಿಧಿಪೂರ್ವಕಂ ॥ ೧೧ ॥**

**ಪಂಚರತ್ನಸಮೋಪೇತಂ ಪಲ್ಲವೈಶ್ಚೌಷಧೀಯುತಂ ।
ತಸ್ಯೋಪರಿ ನ್ಯಸೇತ್ಪಾತ್ರಂ ಲಕ್ಷ್ಮ್ಯಾ ಸಹ ಜನಾರ್ದನಂ ॥ ೧೨ ॥**

**ಸ್ಥಾಪಯೇತ್ತುಳಸೀಮೂಲೇ ಮಂತ್ರೈರ್ವೇದಪುರಾಣಕೈಃ ।
ಪಯಸಾ ಕೇವಲೇನೈವ ಸಿಂಚೇತ್ತು ತುಳಸೀವನಂ ॥
ಪಂಚಾಮೃತೇನ ಸಂಸ್ಥಾಪ್ಯ ದೇವದೇವಂ ಜಗದ್ಗುರುಂ ॥ ೧೩ ॥**

---

೯. ಹಣದಲ್ಲಿ ಲೋಭಮಾಡಬಾರದು. ಹಾಗೆ ಲೋಭತನಮಾಡಿದರೆ ತನಗೆ ಶ್ರೇಯಸ್ಸು ಉಂಟಾಗುವುದಿಲ್ಲ. ಅನಂತರ ಹೊಂಬಣ್ಣ ಮತ್ತು ಬೆಳ್ಳಗಿರುವ ಎರಡು ಬಟ್ಟೆಗಳನ್ನು ತರಬೇಕು.

೧೦. ಶಾಂತಿ ಕರ್ಮವನ್ನು ಮಾಡಿಕೊಂಡು ನವಗ್ರಹಗಳ ಆರಾಧನೆಯನ್ನು ಮಾಡಬೇಕು. ಅನಂತರ ಚರುವನ್ನು ಮಾಡಿಕೊಂಡು ವಿಷ್ಣುವಿಗೆ ಹೋಮವನ್ನು ಮಾಡಬೇಕು.

೧೧. ದ್ವಾದಶಿಯ ದಿನ ದೇವದೇವನಾದ ವಿಷ್ಣುವನ್ನು ಪೂಜಿಸಿ ಒಡಕು ತಗ್ಗುಗಳಿಲ್ಲದ ಕುಂಭದಲ್ಲಿ ಶಾಸ್ತ್ರದ ರೀತಿಯಿಂದ ಕಲಶಸ್ಥಾಪನೆಮಾಡಬೇಕು.

೧೨. ಆ ಕಲಶಕ್ಕೆ ಪಂಚರತ್ನಗಳನ್ನು ಹಾಕಬೇಕು. ಔಷಧಿಗಳನ್ನು ಹಾಕಬೇಕು. ಚಿಗುರನ್ನು ಮೇಲಿಡಬೇಕು. ಆ ಕಲಶದ ಮೇಲೆ ಲಕ್ಷ್ಮಿಯ ಸಹಿತವಾದ ಜನಾರ್ದನನ ಪ್ರತಿಮೆಯನ್ನಿಡಬೇಕು.

೧೩. ಅನಂತರ ಆ ಕಲಶವನ್ನು ವೇದ ಮತ್ತು ಪುರಾಣ ಮಂತ್ರಗಳಿಂದ ತುಳಸಿಯ ಬುಡದಲ್ಲಿ ಇಡಬೇಕು. ಆ ತುಳಸಿ ಗಿಡಗಳಿಗೆ ಹಾಲನ್ನು ಹಾಕಬೇಕು. ಅನಂತರ ಪಂಚಾಮೃತಗಳಿಂದ ಜನಾರ್ದನ ಲಕ್ಷ್ಮಿಯರಿಗೆ ಅಭಿಷೇಕಮಾಡಬೇಕು.

॥ ಪ್ರಾರ್ಥನಾ ಮಂತ್ರಃ ॥

ಯೋಽನಂತರೂಪೋಽಖಿಲವಿಶ್ವರೂಪೋ
ಗರ್ಭೋದಕೇ ಲೋಕವಿಧಿಂ ಬಿಭರ್ತಿ ।
ಪ್ರಸೀದತಾಮೇಷ ಸ ದೇವದೇವೋ
ಯೋ ಮಾಯಯಾ ವಿಶ್ವಕೃದೇವ ರೂಪೀ ॥ ೧೪ ॥

॥ ಆವಾಹನಮಂತ್ರಃ ॥

ಆಗಚ್ಛಾಚ್ಯುತ ದೇವೇಶ ತೇಜೋರಾಶೇ ಜಗತ್ಪತೇ ।
ಸದೈವ ತಿಮಿರಧ್ವಂಸಿಂಸ್ತ್ರಾಹಿ ಮಾಂ ಭಯಸಾಗರಾತ್ ॥ ೧೫ ॥

॥ ಸ್ನಾನಮಂತ್ರಃ ॥

ಪಂಚಾಮೃತೇನ ಸುಸ್ನಾತಃ ತಥಾ ಗಂಧೋದಕೇನ ಚ ।
ಗಂಗಾದೀನಾಂ ಚ ತೋಯೇನ ಸ್ನಾತೋಽನಂತಃ ಪ್ರಸೀದತು ॥ ೧೬ ॥

---

೧೪. ಪ್ರಾರ್ಥನೆಯ ಮಂತ್ರವು– ಅನಂತ ರೂಪನೂ ಜಗತ್ಸ್ವರೂಪನೂ ಆದ, ಗರ್ಭದ ನೀರಿನಲ್ಲಿ ಲೋಕವಿಧಿಯನ್ನೂ ( ಲೋಕ ನಿರ್ಮಾಣವನ್ನೂ ) ಮಾಡುತ್ತಿರುವ ಮಾಯಾರೂಪನೂ ವಿಶ್ವನಿರ್ಮಾಪಕನೂ ಆದ, ಆ ದೇವದೇವನು ನನಗೆ ಪ್ರಸನ್ನನಾಗಲಿ.

೧೫. ಎಲೈ ದೇವತೆಗಳ ಒಡೆಯನೇ! ತೇಜಸ್ಸಿನ ರಾಶಿಯೆ! ಜಗತ್ತಿಗೆ ಒಡೆಯನೇ! ಬಾ. ಕತ್ತಲೆ ಮತ್ತು ಪಾಪಗಳನ್ನು ನಾಶಮಾಡುವ ನೀನು ನನ್ನನ್ನು ಈ ಭಯವೆಂಬ ಸಮುದ್ರದ ದೆಸೆಯಿಂದ ಕಾಪಾಡು.

೧೬. ಸ್ನಾನಮಂತ್ರವು– ಪಂಚಾಮೃತಗಳಿಂದ ಚೆನ್ನಾಗಿ ಸ್ನಾನಮಾಡಿ ಅನಂತರ ಗಂಧದ ಸುವಾಸನೆಯುಳ್ಳ ನೀರಿನಿಂದ ಸ್ನಾನಮಾಡಿ, ಆ ಮೇಲೆ ಗಂಗೆ ಮುಂತಾದವುಗಳ ಒಳ್ಳೆಯ ನೀರಿನಿಂದ ಸ್ನಾನಮಾಡಿ ನನಗೆ ಪ್ರಸನ್ನನಾಗು.

|| ವಿಲೇಪನ ಮಂತ್ರಃ ||

**ಶ್ರೀಖಂಡಾಗುರುಕರ್ಪೂರಕುಂಕುಮಾದಿವಿಲೇಪನಂ ।**
**ಭಕ್ತ್ಯಾ ದತ್ತಂ ಮಯಾಶ್ರೇಯಂ ಲಕ್ಷ್ಮ್ಯಾ ಸಹ ಗೃಹಾಣ ವೈ || ೧೭ ||**

|| ವಸ್ತ್ರಮಂತ್ರಃ ||

**ನಾರಾಯಣ ನಮಸ್ತೇಽಸ್ತು ನರಕಾರ್ಣವತಾರಕ ।**
**ತ್ರೈಲೋಕ್ಯಾಧಿಪತೇ ತುಭ್ಯಂ ದದಾಮಿ ವಸನಂ ಶುಭಂ || ೧೮ ||**

|| ಉಪವೀತ ಮಂತ್ರಃ ||

**ದಾಮೋದರ ನಮಸ್ತೇಽಸ್ತು ತ್ರಾಹಿ ಮಾಂ ಭವ ಸಾಗರಾತ್ ।**
**ಬ್ರಹ್ಮಸೂತ್ರಂ ಮಯಾ ದತ್ತಂ ಗ್ರಹಾಣ ಪುರುಷೋತ್ತಮ || ೧೯ ||**

|| ಪುಷ್ಪ ಮಂತ್ರವು ||

**ಪುಷ್ಪಾಣಿ ಚ ಸುಗಂಧೀನಿ ಮಾಲತ್ಯಾದೀನಿ ವೈಪ್ರಭೋ ।**
**ಮಯಾ ದತ್ತಾನಿ ದೇವೇಶ ಪ್ರೀತಿತಃ ಪ್ರತಿಗೃಹ್ಯತಾಂ || ೨೦ ||**

---

೧೭. ಗಂಧಾದಿಗಳನ್ನು ತೊಡೆಯುವ ಮಂತ್ರವು– ಶ್ರೀಗಂಧ, ಅಗುರು, ಪಚ್ಚಕರ್ಪೂರ, ಕುಂಕುಮಕೇಸರಿ ಮೊದಲಾದವುಗಳಿಂದ ಕೂಡಿದ ಗಂಧವನ್ನು ಭಕ್ತಿಯಿಂದ ಕೊಡುತ್ತೇನೆ. ಒಳ್ಳೆಯ ಸುವಾಸನೆಯಾಗಿರುವುದು. ಇದನ್ನು ಲಕ್ಷ್ಮಿಯೊಡನೆ ಸ್ವೀಕರಿಸು.

೧೮. ವಸ್ತ್ರವನ್ನು ಕೊಡುವ ಮಂತ್ರವು–ಎಲೈ ನಾರಾಯಣನೇ! ನಿನಗೆ ನಮಸ್ಕಾರವು. ನರಕವೆಂಬ ಸಮುದ್ರವನ್ನು ದಾಟಿಸುವವನೇ! ನಿನಗೆ ನಮಸ್ಕಾರವು. ಎಲೈ ತ್ರೈಲೋಕ್ಯಾಧಿಪತಿಯೆ! ನಿನಗೆ ಶುಚಿಯಾದ ವಸ್ತ್ರವನ್ನು ಕೊಡುತ್ತೇನೆ, ಧರಿಸು.

೧೯. ಯಜ್ಞೋಪವೀತ ಮಂತ್ರವು– ಎಲೈ ದಾಮೋದರನೇ! ನಿನಗೆ ನಮಸ್ಕಾರವು. ನನ್ನನ್ನು ಈ ಸಂಸಾರವೆಂಬ ಸಮುದ್ರದಿಂದ ದಾಟಿಸಿ ಕಾಪಾಡು. ಈ ಯಜ್ಞೋಪವೀತವನ್ನು ಭಕ್ತಿಯಿಂದ ಸಮರ್ಪಿಸಿದ್ದೇನೆ. ಎಲೈ ಪುರುಷೋತ್ತಮನೇ! ಇದನ್ನು ಧರಿಸು.

೨೦. ಹೂ ಸಮರ್ಪಣೆಯ ಮಂತ್ರವು–ಜಾಜಿಯೇ ಮುಂತಾದ ಸುವಾಸನೆಯುಳ್ಳ ಹೂಗಳನ್ನು ಕೊಟ್ಟಿದ್ದೇನೆ. ಅವನ್ನು ಪ್ರೀತಿಯಿಂದ ಸ್ವೀಕರಿಸು.

## ॥ ನೈವೇದ್ಯ ಮಂತ್ರಃ ॥

ನೈವೇದ್ಯಂ ಗೃಹ್ಯತಾಂ ನಾಥ ಭಕ್ಷ್ಯಭೋಜ್ಯೈಃ ಸಮನ್ವಿತಂ ।
ಸರ್ವೈರಸೈಸ್ಸುಸಂಪನ್ನಂ ಗೃಹಾಣ ಪರಮೇಶ್ವರ ॥ ೨೧ ॥

## ॥ ತಾಂಬೂಲ ಮಂತ್ರಃ ॥

ಪೂಗಾನಿ ನಾಗಪತ್ರಾಣಿ ಕರ್ಪೂರರಸಹಿತಾನಿ ಚ ।
ಮಯಾ ದತ್ತಾನಿ ದೇವೇಶ ತಾಂಬೂಲಂ ಪ್ರತಿಗೃಹ್ಯತಾಂ ॥ ೨೨ ॥

ಧೂಪಂ ದತ್ವಾ ಗುರುಂ ಭಕ್ತ್ಯಾ ಗುಗ್ಗುಳಂ ಘೃತಮಿಶ್ರಿತಂ ।
ಏವಂ ಪೂಜಾ ಪ್ರಕರ್ತವ್ಯಾ ಘೃತೇನ ದೀಪಮಾಚರೇತ್ ॥ ೨೩ ॥

ವಿವಿಧಂ ಮುನಿಶಾರ್ದೂಲ ದೀಪಂ ಕೃತ್ವಾ ಸಮಾಹಿತಃ ।
ಲಕ್ಷ್ಮೀನಾರಾಯಣಸ್ಯಾಗ್ರೇ ತುಳಸೀವನಸನ್ನಿಧೌ ॥ ೨೪ ॥

---

೨೧. ನೈವೇದ್ಯ ಮಂತ್ರವು– ಭಕ್ಷ್ಯ ಭೋಜ್ಯಗಳಿಂದ ಕೂಡಿರುವ ಈ ನೈವೇದ್ಯವನ್ನು ಸ್ವೀಕರಿಸು. ಇದರಲ್ಲಿ ಷಡ್ರಸಗಳೂ ಇವೆ. ಚೆನ್ನಾಗಿ ಕೂಡಿಸಿ ಪಕ್ವಮಾಡಿದ್ದೇನೆ.

೨೨. ತಾಂಬೂಲದ ಮಂತ್ರವು– ಅಡಿಕೆ, ವೀಳ್ಯದ ಎಲೆ, ಪಚ್ಚಕರ್ಪೂರ ಮುಂತಾದುವುಗಳಿಂದ ಕೂಡಿದ ತಾಂಬೂಲವನ್ನು ಕೊಟ್ಟಿದ್ದೇನೆ. ಸ್ವೀಕರಿಸು.

೨೩. ಧೂಪವನ್ನು ಕೊಟ್ಟು ಅಗುರನ್ನು ವಾಸನೆಗೋಸ್ಕರ ಹಾಕಿ ತುಪ್ಪ ದಿಂದ ಕಲಸಿರುವ ಗುಗ್ಗುಳವನ್ನು ಹೊಗೆಕೊಟ್ಟು ಪೂಜಿಸಬೇಕು. ಈ ರೀತಿ ಧೂಪವಾದ ಮೇಲೆ ತುಪ್ಪದಿಂದ ದೀಪಗಳನ್ನು ಹಚ್ಚಬೇಕು.

೨೪–೨೬. ಈ ರೀತಿಯಾಗಿ ಏಕಾರತಿ, ಮೂರು ಆರತಿ, ಐದು ಆರತಿಗಳೆಂಬ ಅನೇಕ ಬಗೆಯ ದೀಪಗಳನ್ನು ಕೊಟ್ಟು ಅನಂತರ ತುಲಸಿಯ ವನದಲ್ಲಿರುವ

ಅರ್ಘ್ಯಂ ತತ್ರ ಪ್ರದಾತವ್ಯಂ ದೇವದೇವಾಯ ಚಕ್ರಿಣೇ ।
ನವಮ್ಯಾಂ ನಾರಿಕಾಳೇನ ಪುತ್ರಾರ್ಥಮರ್ಘ್ಯಮುತ್ತಮಂ　　|| ೨೫ ||

ದಶಮ್ಯಾಂ ಬೀಜಪೂರಂ ತು ಧರ್ಮಕಾಮಾರ್ಥಸಿದ್ಧಯೇ ||
ಏಕಾದಶ್ಯಾಂ ದಾಡಿಮೇನ ದಾರಿದ್ರ್ಯಂ ನಾಶಯೇತ್ಸದಾ　　|| ೨೬ ||

ಸಪ್ತಧಾನ್ಯೇನ ಸಂಯುಕ್ತಂ ವಂಶಪಾತ್ರೇಣ ನಾರದ ।
ಫಲಸಪ್ತಕ ಸಂಯುಕ್ತಂ ಪತ್ರಪೂಗಸಮನ್ವಿತಂ　　|| ೨೭ ||

ವಸ್ತ್ರೇಣಾಚ್ಛಾದಿತಂ ಕೃತ್ವಾ ದೇವಸ್ಯಾಗ್ರೇ ನಿವೇದಯೇತ್ ।
ಮಂತ್ರೇಣಾನೇನ ವಿಪ್ರೇಂದ್ರ ಶೃಣುಷ್ವೈಕಾಗ್ರಮಾನಸಃ　　|| ೨೮ ||

|| ಅರ್ಘ್ಯ ಮಂತ್ರಃ ||

ತುಳಸೀಸಹಿತೋ ದೇವ ಸದಾ ಶಂಖೇನ ಸಂಯುತಂ ।
ಗೃಹಾಣಾರ್ಘ್ಯಂ ಮಯಾ ದತ್ತಂ ದೇವ ದೇವ ನಮೋಽಸ್ತು ತೇ　　|| ೨೯ ||

---

ಲಕ್ಷ್ಮೀನಾರಾಯಣರ ಎದುರಿಗೆ ಅರ್ಘ್ಯವನ್ನು ಕೊಡಬೇಕು. ನವಮಿಯದಿನ ಎಳನೀರಿನಲ್ಲಿ ಅರ್ಘ್ಯವನ್ನು ಕೊಟ್ಟರೆ ಮಕ್ಕಳಾಗುತ್ತವೆ. ದಶಮಿಯದಿನ ಮಾದಳದ ಹಣ್ಣಿನ ರಸದಿಂದ ಕೊಟ್ಟರೆ ಧರ್ಮ ಕಾಮಾರ್ಥಗಳು ಸಿದ್ಧಿಸುತ್ತವೆ. ಏಕಾದಶಿಯದಿನ ದಾಡಿಂಬೆಯರಸದಿಂದ ಅರ್ಘ್ಯವನ್ನು ಕೊಟ್ಟರೆ ದಾರಿದ್ರ್ಯವು ಉಂಟಾಗುವುದಿಲ್ಲ.

೨೭–೨೮. ಒಂದು ಜೊತೆ ಮೊರವನ್ನು ತಂದು ಅದರಲ್ಲಿ ಏಳು ಬಗೆಯ ಧಾನ್ಯಗಳನ್ನೂ ಏಳು ಬಗೆಯ ಫಲಗಳನ್ನೂ ವೀಳ್ಯದೆಲೆ ಅಡಿಕೆಗಳನ್ನೂ ಇಡಬೇಕು. ಅದನ್ನು ಹೊಸಬಟ್ಟೆಯಿಂದ ಸುತ್ತಿ ದೇವರ ಮುಂದೆ ಇಡಬೇಕು. ಅನಂತರ ಮಂತ್ರವನ್ನು ಹೇಳಬೇಕು.

೨೯. ಅರ್ಘ್ಯವನ್ನು ಕೊಡುವ ಮಂತ್ರವು– ಎಲೈ ದೇವನೇ! ಶಂಖದಲ್ಲಿ ತುಳಸಿಯ ದಳವನ್ನೂ ಅರ್ಘ್ಯದ ನೀರನ್ನೂ ಇಟ್ಟಿದ್ದೇನೆ. ಇದರಿಂದ ಕೊಟ್ಟ ಅರ್ಘ್ಯವನ್ನು ಸ್ವೀಕರಿಸು. ನಿನಗೆ ನಮಸ್ಕಾರವು.

ಏವಂ ಸಂಪೂಜ್ಯ ದೇವೇಶಂ ಲಕ್ಷ್ಮ್ಯಾ ಸಹ ಜನಾರ್ದನಂ ।
ಪ್ರಾರ್ಥಯೇದ್ದೇವದೇವೇಶಂ ವ್ರತಸಂಪೂರ್ಣಸಿದ್ಧಯೇ ॥ ೩೦ ॥

ಉಪೋಷಿತೋಽಹಂ ದೇವೇಶ ಕಾಮಕ್ರೋಧವಿವರ್ಜಿತಃ ।
ವ್ರತೇನಾನೇನ ದೇವೇಶ ತ್ವಮೇವ ಶರಣಂ ಮಮ ॥ ೩೧ ॥

ಗೃಹೀತೇಽಸ್ಮಿನ್ ವ್ರತೇ ದೇವ ಯದಪೂರ್ಣಂ ಕೃತಂ ಮಯಾ ।
ಸರ್ವಂ ತದಸ್ತು ಸಂಪೂರ್ಣಂ ತ್ವತ್ಪ್ರಸಾದಾಜ್ಜನಾರ್ದನ ॥ ೩೨ ॥

ನಮಃ ಕಮಲಪತ್ರಾಕ್ಷ ನಮಸ್ತೇ ಜಲಶಾಯಿನೇ ।
ಇದಂ ವ್ರತಂ ಮಯಾ ಚೀರ್ಣಂ ಪ್ರಸಾದಾತ್ತವ ಕೇಶವ ॥ ೩೩ ॥

ಅಜ್ಞಾನತಿಮಿರಧ್ವಂಸಿನ್ವ್ರತೇನಾನೇನ ಕೇಶವ ।
ಪ್ರಸಾದಸುಮುಖೋ ಭೂತ್ವಾ ಜ್ಞಾನದೃಷ್ಟಿಪ್ರದೋ ಭವ ॥ ೩೪ ॥

---

೩೦. ಈ ರೀತಿಯಾಗಿ ಲಕ್ಷ್ಮಿಯೊಡಗೂಡಿದ ಜನಾರ್ದನನನ್ನು ಪೂಜಿಸಿ ವ್ರತದ ಪೂರ್ತಿಗೂ ಸಿದ್ಧಿಗೂ ಕೂಡಾ ಆ ಸ್ವಾಮಿಯನ್ನು ಪ್ರಾರ್ಥಿಸಬೇಕು.

೩೧. ಎಲೈ ದೇವದೇವನೇ! ಕಾಮ, ಕ್ರೋಧ, ಲೋಭ, ಮೋಹಗಳನ್ನು ಬಿಟ್ಟು ಉಪವಾಸದಿಂದಿದ್ದು ಈ ವ್ರತವನ್ನು ಮಾಡಿದ್ದೇನೆ. ಈ ವ್ರತದಿಂದ ತುಷ್ಟನಾಗು. ನೀನೇ ನನಗೆ ಶರಣನು.

೩೨. ಎಲೈ ಸ್ವಾಮಿಯೇ! ಈ ವ್ರತವನ್ನು ಹಿಡಿದಾಗಿನಿಂದಲೂ ಯಾವ ಭಾಗವನ್ನು ನಾನು ಪೂರ್ತಿಯಾಗಿ ಮಾಡಿಲ್ಲವೋ ಅವೆಲ್ಲವೂ ನಿನ್ನ ಅನುಗ್ರಹ ದಿಂದ ಪೂರ್ತಿಯಾದಂತೆ ಆಗಲಿ.

೩೩. ಕಮಲದ ದಳದಂತೆ ಕಣ್ಣುಳ್ಳವನೇ! ನಿನಗೆ ನಮಸ್ಕಾರವು. ಎಲೈ ಕೇಶವನೇ ನಿನ್ನ ಅನುಗ್ರಹದಿಂದ ಈ ವ್ರತವನ್ನು ಮಾಡಿದೆನು.

೩೪. ಅಜ್ಞಾನವೆಂಬ ಕತ್ತಲೆಯನ್ನು ನಾಶಮಾಡುವ ಎಲೈ ಕೇಶವನೇ! ನನಗೆ ಅನುಗ್ರಹ ಮಾಡುವುದರಲ್ಲಿ ಸಂತೋಷವುಳ್ಳವನಾಗಿ ಜ್ಞಾನವೆಂಬ ದೃಷ್ಟಿ ಯನ್ನು ದಯಪಾಲಿಸು.

ತತೋ ಜಾಗರಣಂ ರಾತ್ರೌ ಗೀತಂ ಪುಸ್ತಕವಾಚನಂ ।
ನಾದ ನೃತ್ಯಕಲಾಭಿಜ್ಞೈಃ ಪುಣ್ಯಾಖ್ಯಾನೈಸ್ಸುಶೋಭನೈಃ ॥ ೩೫ ॥

ವಿಭಾತಾಯಾಂ ತು ಶರ್ವರ್ಯಾಮುದಿತೇ ವಿಮಲೇ ರವೌ ।
ನಿಮಂತ್ರ್ಯ ಬ್ರಾಹ್ಮಣಾನ್ ಭಕ್ತ್ಯಾ ಶ್ರಾದ್ಧಂ ಕುರ್ಯಾಚ್ಚ ವೈಷ್ಣವಂ ॥೩೬॥

ಭೋಜಯಿತ್ವಾ ಯಥಾ ಕಾಮಂ ಪಾಯಸೇನ ಘೃತೇನ ಚ ।
ತಾಂಬೂಲಪುಷ್ಪಗಂಧಾದಿ ದಕ್ಷಿಣಾಭಿಃ ಸಮನ್ವಿತಂ ॥ ೩೭ ॥

ಉಪವೀತಾನಿ ವಾಸಾಂಸಿ ದತ್ವಾ ಮಾಲಾಂ ಚ ಚಂದನಂ ।
ದಾಂಪತ್ಯ ತ್ರಿತಯಂ ಭೋಜ್ಯಂ ವಸ್ತ್ರಭೂಷಣಕುಂಕುಮೈಃ ॥ ೩೮ ॥

---

೩೫. ಅನಂತರ ರಾತ್ರಿಯಲ್ಲಿ ನಿದ್ದೆ ಮಾಡದೆ ಜಾಗರಣೆ ಮಾಡುತ್ತಾ ಹಾಡುತ್ತಿರಬೇಕು. ದೇವರ ಸಂಬಂಧವಾದ ವಿಷಯಗಳುಳ್ಳ ಪುಸ್ತಕಗಳನ್ನು ಓದುತ್ತಿರಬೇಕು. ಸಂಗೀತ ಕುಣಿತ ಇನ್ನೂ ಅನೇಕ ಕಲೆಯನ್ನು ಬಲ್ಲವರೊಡನೆಯೂ ಒಳ್ಳೆಯ ಪುಣ್ಯಪ್ರದವಾದ ಕಥೆಗಳನ್ನೂ ಬಲ್ಲವರೊಡನೆಯೂ ಹೇಳಿಸುತ್ತಾ ಕೇಳಿಸುತ್ತಾ ಕೇಳುತ್ತಾ ರಾತ್ರಿಯನ್ನು ಕಳೆಯಬೇಕು

೩೬, ಬೆಳಗಾಗುತ್ತಲೇ ಸೂರ್ಯನು ಹುಟ್ಟಿದಮೇಲೆ ಬ್ರಾಹ್ಮಣರನ್ನು ಕರೆದು ಭಕ್ತಿಯಿಂದ ವೈಷ್ಣವ ಶ್ರಾದ್ಧವನ್ನು ಮಾಡಬೇಕು

೩೭–೩೮. ಆ ಬ್ರಾಹ್ಮಣರನ್ನು ಪಾಯಸ ತುಪ್ಪ ಮುಂತಾದವುಗಳಿಂದಲೂ ಉತ್ತಮವಾದ ಅನ್ನಭಕ್ಷ್ಯಗಳಿಂದಲೂ ಸುಖವಾಗಿ ಊಟಮಾಡಿಸಬೇಕು ಅನಂತರ ತಾಂಬೂಲ ಹೂವು ಗಂಧ ದಕ್ಷಿಣೆಗಳನ್ನೂ ಉಡುವ ಹೊದೆಯುವ ಬಟ್ಟೆಗಳು ಹೂವು ಗಂಧಗಳನ್ನೂ ಶಕ್ತ್ಯನುಗುಣವಾಗಿ ಕೊಡಬೇಕು ಅನಂತರ ಮೂರುಜನ ದಂಪತಿಗಳಿಗೆ ಭೋಜನಕ್ಕೆ ಹೇಳಿ ಬಟ್ಟೆ ಒಡವೆ ಕುಂಕುಮಗಳಿಂದ ಪೂಜಿಸಬೇಕು ಸುಖಭೋಜನವನ್ನು ಮಾಡಿಸಬೇಕು.

ವಂಶಪಾತ್ರಾಣಿ ಶಕ್ತ್ಯಾ ಚ ವಿರೂಢೈಃ ಪರಿಪೂರಯೇತ್ ।
ನಾರಿಕೇಳೈಶ್ಚ ಪಕ್ವಾನ್ನೈರ್ವಸ್ತ್ರೈಶ್ಚ ವಿವಿಧೈಃ ಫಲೈಃ ॥ ೩೯ ॥

ಸಪತ್ನೀಕಂ ಗುರುಂ ತತ್ರ ವಸ್ತ್ರಾಣಿ ಪರಿಧಾಪಯೇತ್ ।
ವಿಭೂಷಾಣಿ ಚ ದಿವ್ಯಾನಿ ಗಂಧಮಾಲ್ಯೈಃ ಪ್ರಪೂಜಯೇತ್ ॥ ೪೦ ॥

ಸರ್ವೋಪಸ್ಕಾರಸಂಯುಕ್ತಾಂ ಗಾಂ ದದ್ಯಾಚ್ಚ ಪಯಸ್ವಿನೀಂ ।
ಸದಕ್ಷಿಣಾಂ ಸವಸ್ತ್ರಾಂ ಚ ವಸ್ತ್ರಾಲಂಕಾರಭೂಷಿತಾಂ ॥ ೪೧ ॥

ಸೋಪಸ್ಕಾರಾಂ ಸಕುಂಭಾಂ ಚ ಲಕ್ಷ್ಮೀನಾರಾಯಣಂ ಶುಭಂ ।
ಕರ್ತಾ ಯತ್ಫಲಮಾಪ್ನೋತಿ ತನ್ಮೇ ನಿಗದತ ಶೃಣು ॥ ೪೨ ॥

ಸರ್ವತೀರ್ಥೇಷು ಯತ್ಪುಣ್ಯಂ ಸ್ನಾತಾನಾಂ ಜಾಯತೇ ನೃಣಾಂ ।
ತತ್ಫಲಂ ಲಭತೇ ಸರ್ವಂ ದೇವದೇವಪ್ರಸಾದತಃ ॥ ೪೩ ॥

---

೩೯. ಅವರಿಗೆ ಮೊರದ ಬಾಗಿನವನ್ನು ಕೊಡಬೇಕು ಆ ಮೊರದೊಳಕ್ಕೆ ಆ ಕಾಲದಲ್ಲಿ ಸಿಕ್ಕಬಹುದಾದ ಹಣ್ಣುಗಳನ್ನೂ ತೆಂಗಿನಕಾಯಿ ಅನೇಕಬಗೆಯಾದ ಅನ್ನಗಳು ವಸ್ತ್ರಗಳು ಇವನ್ನು ಹಾಕಿ ತುಂಬಿರಬೇಕು

೪೦-೪೩. ಗುರುವನ್ನೂ ಅವನ ಹೆಂಡತಿಯನ್ನೂ ಪೂಜಿಸಬೇಕು ಅವರಿಗೆ ಬಟ್ಟೆಯನ್ನೂ ಒಡವೆಗಳನ್ನೂ ಗಂಧ ಹೂವುಗಳನ್ನೂ ಕೊಟ್ಟು ಗೌರವಿಸಿ ಪೂಜಿಸಬೇಕು ಪಾತ್ರೆ ಮೊದಲಾದುವುಗಳನ್ನು ಕೊಟ್ಟು ಕರೆಯುವ ಹಸುವನ್ನು ಕೊಡಬೇಕು. ಅನಂತರ ದಕ್ಷಿಣೆ ವಸ್ತ್ರ, ಅಲಂಕಾರ ಇನ್ನೂ ಅದಕ್ಕೆ ಬೇಕಾದ ಇತರ ಪದಾರ್ಥಗಳು ಇವುಗಳುಳ್ಳ ಲಕ್ಷ್ಮೀನಾರಾಯಣ ಪ್ರತಿಮೆಯನ್ನು ಅವನಿಗೆ ಕೊಡಬೇಕು. ಹೀಗೆ ಮಾಡಿದರೆ ಆ ದಾನಮಾಡಿದವನಿಗೆ ಬರುವ ಫಲವನ್ನು ಹೇಳುತ್ತೇನೆ, ಕೇಳು. ಎಲ್ಲಾ ತೀರ್ಥಗಳಲ್ಲಿಯೂ ಸ್ನಾನಮಾಡಿದರೆ ಮನುಷ್ಯನಿಗೆ ಯಾವ ಪುಣ್ಯವು ಬರುತ್ತದೆಯೋ ಆ ಫಲವನ್ನು ಆ ದೇವದೇವನ ಅನುಗ್ರಹದಿಂದ ಹೊಂದುತ್ತಾನೆ.

**ಭುಕ್ತ್ವಾ ಚ ವಿಪುಲಾ್ ಭೋಗಾ್ ಸರ್ವಕಾಮಾನ್ಮನೋರಮಾ್ ।**
**ವೈಷ್ಣವಂ ಪದಮಾಪ್ನೋತಿ ಅಂತೇ ವಿಷ್ಣುಪ್ರಸಾದತಃ　　　　|| ೪೪ ||**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಪತಿ ನಾರದ ಸಂವಾದೇ ತುಲಸೀ ತ್ರಿರಾತ್ರವ್ರತಂ ನಾಮ ಷಡ್ವಿಂಶೋಽಧ್ಯಾಯಃ ಸಮಾಪ್ತಿಃ**

---

೪೪. ಈ ಲೋಕದಲ್ಲಿ ಅತ್ಯುತ್ತಮಗಳಾದ ಎಲ್ಲಾ ಭೋಗಗಳನ್ನೂ ಅನುಭವಿಸಿ ಕೊನೆಯಲ್ಲಿ ಶ್ರೀವಿಷ್ಣುವಿನ ಅನುಗ್ರಹದಿಂದ ವೈಕುಂಠವನ್ನು ಹೊಂದುತ್ತಾನೆ

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಪತಿ ನಾರದ ಸಂವಾದದಲ್ಲಿ ತುಳಸಿಯ ತ್ರಿರಾತ್ರವ್ರತವೆಂಬ ಇಪ್ಪತ್ತಾರನೆಯ ಅಧ್ಯಾಯವು ಮುಗಿದುದು



॥ ಶ್ರೀಃ ॥

-x-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಸಪ್ತವಿಂಶೋಽಧ್ಯಾಯಃ ॥



॥ ನಾರದ ಉವಾಚ ॥

ಗುಣಾಧಿಕೇಭ್ಯೋ ವಿಪ್ರೇಭ್ಯೋ ದಾತುಕಾಮೋಽಪಿ ಮಾನವಃ ।
ಕಾನಿ ಕಾನಿ ಚ ಲೋಕೇಽಸ್ಮಿನ್ ದದ್ಯಾತ್ಸರ್ವಂ ತಥಾ ವದ ॥ ೧ ॥

॥ ಮಹಾದೇವ ಉವಾಚ ॥

ಲೋಕೇ ತತ್ವಂ ಹಿ ಸಂಜ್ಞಾಯ ಶೃಣು ದೇವರ್ಷಿಸತ್ತಮ ।
ಅನ್ನಮೇವ ಪ್ರಶಂಸಂತಿ ಸರ್ವಮನ್ನೇ ಪ್ರತಿಷ್ಠಿತಂ ॥ ೨ ॥

---

## ಇಪ್ಪತ್ತೇಳನೆಯ ಅಧ್ಯಾಯವು



೧. ನಾರದನು ಹೇಳಿದನು- ಎಲೈ ಮಹಾದೇವನೇ ! ಒಳ್ಳೆಯ ಗುಣಗಳುಳ್ಳ ಬ್ರಾಹ್ಮಣರಿಗೆ ದಾನಕೊಡಬೇಕೆಂದು ಇಚ್ಛಿಸುವ ಮನುಷ್ಯನು ಯಾವ ಯಾವ ದಾನಗಳನ್ನು ಕೊಡಬೇಕೆಂಬುದನ್ನು ಕೃಪೆಮಾಡಿ ತಿಳಿಸು.

೨. ಮಹಾದೇವನು ಹೇಳಿದನು- ಲೋಕದಲ್ಲಿ ಪಂಚಭೂತಗಳಿರುವುದು ಪ್ರಾಣಗಳನ್ನು ಉಳಿಸುವುದಕ್ಕೋಸ್ಕರ. ಆ ಪ್ರಾಣವೇ ಪ್ರಾಣಿಗಳಿಗೆ ಮುಖ್ಯವಾದುದು. ಅದಕ್ಕೆ ಬೇಕಾದುದು ಅನ್ನ. ಆದುದರಿಂದ ಅನ್ನವು ಉತ್ತಮವಾದುದು. ಲೋಕದಲ್ಲಿ ಅನ್ನದಲ್ಲಿಯೇ ಎಲ್ಲವೂ ನಿಂತಿರುವುದು.

ತಸ್ಮಾದನ್ನಂ ವಿಶೇಷೇಣ ದಾತುಮಿಚ್ಛಂತಿ ಸಾಧವಃ ।
ಅನ್ನೇನ ಸದೃಶಂ ದಾನಂ ನ ಭೂತಂ ನ ಭವಿಷ್ಯತಿ ॥ ೩ ॥

ಅನ್ನೇನ ಧಾರ್ಯತೇ ವಿಶ್ವಂ ಜಗತ್ ಸ್ಥಾವರಜಂಗಮಂ ।
ಅನ್ನಮೂರ್ಜಸ್ಕರಂ ಲೋಕೇ ಪ್ರಾಣಾ ಹ್ಯನ್ನೇ ಪ್ರತಿಷ್ಠಿತಾಃ ॥ ೪ ॥

ದಾತವ್ಯಂ ಭಿಕ್ಷತೇ ಚಾನ್ನಂ ಬ್ರಾಹ್ಮಣಾಯ ಮಹಾತ್ಮನೇ ।
ಕುಟುಂಬಂ ಪೀಡಯಿತ್ವಾಪಿ ಆತ್ಮನೋ ಭೂತಿಮಿಚ್ಛತಾ ॥ ೫ ॥

ನಾರದಾಸೌ ವಿದಾಂ ಶ್ರೇಷ್ಠೋ ಯೋದದ್ಯಾದನ್ನಮರ್ಥಿನೇ ।
ಬ್ರಾಹ್ಮಣಾಯಾರ್ತರೂಪಾಯ ಪಾರಲೌಕಿಕಮಾತ್ಮನಃ ॥ ೬ ॥

ಅವಾಪ್ಯ ಭೂತಿಮನ್ವಿಚ್ಛನ್ ಕಾಲೇ ದ್ವಿಜಮುಪಸ್ಥಿತಂ ।
ಶ್ರಾನ್ತಮಧ್ವನಿ ವರ್ತಂತಂ ಗೃಹಸ್ಥಂ ಗೃಹಮಾಗತಂ ॥ ೭ ॥

---

೩. ಆದುದರಿಂದ ಸತ್ಪುರುಷರಾದವರು ಅನ್ನದಾನವನ್ನೇ ಹೆಚ್ಚು ಗುಣವುಳ್ಳದ್ದೆಂದು ಹೇಳುತ್ತಾರೆ. ಕೊಡಲೂ ಇಚ್ಛಿಸುತ್ತಾರೆ. ಅನ್ನ ದಾನಕ್ಕೆ ಸಮಾನವಾದ ದಾನವು ಹಿಂದೆಯೂ ಇಲ್ಲ, ಮುಂದೆಯೂ ಇರುವುದಿಲ್ಲ.

೪. ಅನ್ನದಿಂದಲೇ ಚರಾಚರಾತ್ಮಕವಾದ ಲೋಕವು ಪ್ರಕಾಶಿಸುತ್ತ ಇರುವುದು. ಅನ್ನವೇ ಲೋಕದಲ್ಲಿ ಬಲವನ್ನು ಕೊಡತಕ್ಕದ್ದು. ಪ್ರಾಣಗಳು ಅನ್ನದಿಂದಲೇ ನಿಂತಿವೆ.

೫. ಆದ್ದರಿಂದ ಯೋಗ್ಯನಾದ ಬ್ರಾಹ್ಮಣನು ಬಂದು ಬೇಡಿದರೆ ಅವನಿಗೆ ತನ್ನ ಮನೆಯವರಿಗೆ ತೊಂದರೆಯಾದರೂ ಕೂಡ ಅದನ್ನೂ ಗಮನಿಸದೆ ಅನ್ನವನ್ನು ಕೊಡಬೇಕು. ಅದರಿಂದ ಅವನ ಐಶ್ವರ್ಯವು ಹೆಚ್ಚುತ್ತದೆ.

೬. ಎಲೈ ನಾರದನೆ! ಬುದ್ಧಿವಂತನಾದವನು ಭಿಕ್ಷುಕನಿಗೆ ಅನ್ನವನ್ನು ಕೊಡಬೇಕು. ಅದರಲ್ಲಿಯೂ ಹಸಿದಿರುವ ಬ್ರಾಹ್ಮಣನಿಗೆ ಅನ್ನವನ್ನು ಕೊಟ್ಟರೆ ತನಗೆ ಪರಲೋಕದಲ್ಲಿ ಸುಖವು ಲಭಿಸುವುದು.

೭–೮. ದಾರಿಯನ್ನು ನಡೆದು ಬಳಲಿ ತಾನು ಊಟಮಾಡುವ ಕಾಲದಲ್ಲಿ ಮನೆಗೆ ಬಂದ ಗೃಹಸ್ಥನಾದ ಅತಿಥಿಯಾದ ಬ್ರಾಹ್ಮಣನಿಗೆ ಅನ್ನವನ್ನು ಹಾಕಬೇಕು.

ಅನ್ನದಃ ಪ್ರಾಪ್ನುತೇ ವಿದ್ವಾನ್ ಸುಶೀಲೋ ವೀತಮತ್ಸರಃ ।
ಕ್ರೋಧಮುತ್ಪತಿತಂ ಹಿತ್ವಾ ದಿವಿ ಚೇಹ ಚ ಯತ್ಸುಖಂ ॥ ೮ ॥

ಹ್ಯತಿಥಿಂ ನಾಭಿನಿಂದೇಚ್ಛ ನದ್ರುಹ್ಯಾಚ್ಚ ಕಥಂಚನ ।
ಬ್ರಹ್ಮವೇತ್ತಾರ್ಪಯೇದನ್ನಂ ತದ್ದಾನಂ ಚ ವಿಶಿಷ್ಯತೇ ॥ ೯ ॥

ಶ್ರಾಂತಾಯಾದೃಷ್ಟಪೂರ್ವಾಯ ಅನ್ನಮಧ್ವನಿ ವರ್ತಿನೇ ।
ಯೋದದ್ಯಾದ ಪರಿಕ್ಲಿಷ್ಟಃ ಸರ್ವಧರ್ಮಮವಾಪ್ನುಯಾತ್ ॥ ೧೦ ॥

ಪಿತೃದೇವಾಂಸ್ತಥಾ ವಿಪ್ರಾನತಿಥೀಂಶ್ಚ ಮಹಾಮುನೇ ।
ಯೋ ನರಃ ಪ್ರೀಣಯೇತಾನ್ನೈಸ್ತಸ್ಯ ಪುಣ್ಯಮನಂತಕಂ ॥ ೧೧ ॥

---

ಅವನಿಗೆ ಐಶ್ವರ್ಯವು ಬರುತ್ತದೆ. ಅಲ್ಲದೆ ಹೀಗೆ ಬಂದವನಿಗೆ ಅನ್ನಹಾಕುವಾಗ ತಾನೂ ಒಳ್ಳೆಯ ಆಚಾರವಂತನಾಗಿದ್ದುಕೊಂಡು ಕೋಪವನ್ನು ಬಿಟ್ಟು ಲೋಭಾದಿಗಳಿಂದ ತಿರಸ್ಕೃತನಾಗದೆ ಅವು ಬಂದರೂ ಅವನ್ನು ನಿಗ್ರಹಿಸಿ ಅನ್ನ ದಾನಮಾಡಬೇಕು. ಹೀಗೆ ಮಾಡಿದರೆ ಇಹಲೋಕ ಪರಲೋಕಗಳೆರಡರಲ್ಲೂ ಸುಖವುಂಟು.

೯. ಅತಿಥಿಯು ನಿಂತುಕೊಂಡು ಯಾಚಿಸುತ್ತಿದ್ದರೆ ಅವನನ್ನು ನಿಂದಿಸ ಬಾರದು. ಧರ್ಮವನ್ನು ತಿಳಿದವನು ಅವನಿಗೆ ಅನ್ನವನ್ನು ಕೊಡಬೇಕು. ಆ ದಾನವು ಬಹು ಉತ್ತಮವೆನ್ನಿಸಿಕೊಳ್ಳುತ್ತದೆ.

೧೦. ದಾರಿ ನಡೆದು ಬಂದು ಬಳಲಿರುವ ಮುಂದೆಯೂ ನಡೆಯಬೇಕಾಗಿ ಇರುವ ಗುರುತನ್ನು ಕಾಣದ ಅತಿಥಿಗೆ ಸಂತೋಷದಿಂದ ಅನ್ನವನ್ನು ಹಾಕಿದರೆ ಅವನು ಎಲ್ಲಾ ಧರ್ಮಗಳನ್ನೂ ಹೊಂದುತ್ತಾನೆ.

೧೧. ಪಿತೃಗಳನ್ನೂ ದೇವತೆಗಳನ್ನೂ ಬ್ರಾಹ್ಮಣರನ್ನೂ ಅನ್ನ ಹಾಕು ವುದರಿಂದ ಯಾವನು ತೃಪ್ತಿಪಡಿಸುತ್ತಾನೆಯೋ ಅವನು ಬಹುವಾದ ಪುಣ್ಯವನ್ನು ಹೊಂದುತ್ತಾನೆ

ಕೃತ್ವಾಪಿ ಸುಮಹತ್ಪಾಪಂ ಯೋ ದದ್ಯಾದನ್ನಮರ್ಥಿನೇ ।
ಬ್ರಾಹ್ಮಣಾಯ ವಿಶೇಷೇಣ ಸ ತು ಪಾಪೈಃ ಪ್ರಮುಚ್ಯತೇ ॥ ೧೨ ॥

ಬ್ರಾಹ್ಮಣೇಷ್ವಕ್ಷಯಂ ದಾನಮನ್ನಂ ಶೂದ್ರೇ ಮಹಾಫಲಂ ।
ಅನ್ನಪಾನಂ ಚ ಶೂದ್ರೇ ಚ ಬ್ರಾಹ್ಮಣೇ ಚ ವಿಶಿಷ್ಯತೆ ॥ ೧೩ ॥

ನ ಪೃಚ್ಛೇದ್ಗೋತ್ರಚರಣಂ ನ ಚ ಸ್ವಾಧ್ಯಾಯ ಮೇವ ಚ ।
ಭಿಕ್ಷುಕೋ ಬ್ರಾಹ್ಮಣೋ ಹ್ಯತ್ರ ದದ್ಯಾದನ್ನಂ ಪ್ರಯಾತಿ ಚ ॥ ೧೪ ॥

ಅನ್ನದಸ್ಯ ಶುಭಾ ವೃಕ್ಷಾಃ ಸರ್ವಕಾಮಫಲಾನ್ವಿತಾಃ ।
ಸಂಭವಂತೀಹ ಲೋಕೇ ಚ ಹರ್ಷಯುಕ್ತಾಸ್ತ್ರಿವಿಷ್ಟಪೇ ॥ ೧೫ ॥

---

೧೨. ಬಹುವಾದ ಪಾಪವನ್ನು ಮಾಡಿದ್ದರೂ ಯಾವನು ಅತಿಥಿಗೆ ಅನ್ನದಾನಮಾಡುತ್ತಾನೆಯೋ ಅದರಲ್ಲಿಯೂ ಬ್ರಾಹ್ಮಣನಾದವನಿಗೆ ಹಾಕುತ್ತಾನೆಯೋ ಅವನು ಎಲ್ಲಾ ಪಾಪವನ್ನೂ ಕಳೆದುಕೊಳ್ಳುತ್ತಾನೆ.

೧೩. ಬ್ರಾಹ್ಮಣನಿಗೆ ಅನ್ನದಾನ ಮಾಡಿದರೆ ಅಕ್ಷಯ ಫಲವೂ, ಶೂದ್ರನಿಗೆ ದಾನಮಾಡಿದರೆ ಮಹಾ ಫಲವೂ ಉಂಟಾಗುತ್ತವೆ. ಅನ್ನ ಪಾನ (ಕುಡಿಯುವ ಮತ್ತು ತಿನ್ನುವ ಪದಾರ್ಥಗಳು) ಗಳನ್ನು ಶೂದ್ರನಿಗೆ ಕೊಟ್ಟರೆ ಮಹಾ ಫಲವು. ಬ್ರಾಹ್ಮಣನಿಗೆ ಕೊಟ್ಟರೆ ಅಕ್ಷಯ ಫಲವು. ಇದನ್ನೇ ಪ್ರತ್ಯೇಕವಾಗಿ ಹೇಳಿದ್ದಾರೆ.

೧೪. ಬ್ರಾಹ್ಮಣನು ಭಿಕ್ಷಾರ್ಥಿಯಾಗಿ ಅನ್ನಕ್ಕೆ ಬಂದರೆ ಅವನ ಕುಲ ಗೋತ್ರಗಳನ್ನಾಗಲೀ ಅವನ ವಿದ್ಯೆಗಳನ್ನಾಗಲೀ ಕೇಳಬಾರದು. ಅಂದರೆ ಪರೀಕ್ಷಿಸಬಾರದು. ಅವನಿಗೆ ಅನ್ನ ಹಾಕಬೇಕು. ಹಾಗೆ ಕೇಳಿದರೆ ಅನ್ನದಾನದ ಫಲವು ಹೋಗುತ್ತದೆ.

೧೫. ಅನ್ನ ಹಾಕುವವನಿಗೆ ಮರಗಳೂ ಕೂಡ ಬೇಕಾದ ಹಣ್ಣುಗಳನ್ನು ಕೊಡುತ್ತ ಈ ಲೋಕದಲ್ಲಿಯೂ ಪರಲೋಕಗಳಲ್ಲಿಯೂ ಸೇವಿಸುತ್ತವೆ.

ಅನ್ನಪಾನೇನ ಯೇ ಲೋಕಾಸ್ತಾರ್ ಶೃಣುಷ್ವ ಮಹಾಮುನೇ ।
ವಿಮಾನಾನಿ ಪ್ರಕಾಶಂತೇ ದಿವಿ ತೇಷಾಂ ಮಹಾತ್ಮನಾಂ ॥ ೧೬ ॥

ನಾನಾ ಸಂಸ್ಥಾನ ರೂಪಾಣಿ ನಾನಾಕಾಮಾನ್ವಿತಾನಿ ಚ ।
ಸರ್ವಕಾಮ ಫಲಾಶ್ಚಾಪಿ ವೃಕ್ಷಾ ಭವನಸಂಸ್ಥಿತಾಃ ॥ ೧೭ ॥

ಹೇಮವಾಪ್ಯಶ್ಶುಭಾಃ ಸರ್ವಾ ದೀರ್ಘಿಕಾಶ್ಚೈವ ಸರ್ವಶಃ ।
ಘೋಷವಂತಿ ಚ ಯಾನಾನಿ ಭಕ್ತಾನ್ಯಥ ಸಹಸ್ರಶಃ ॥ ೧೮ ॥

ಭಕ್ಷ್ಯಭೋಜ್ಯಮಯಾಶ್ಶೈಲಾ ವಾಸಾಂಸ್ಯಾಭರಣಾನಿ ಚ ।
ಕ್ಷೀರಂ ಸ್ರವಂತ್ಯಸ್ಸರಿತಃ ತಥೈವಾಜ್ಯಸ್ಯ ಪರ್ವತಾಃ ॥ ೧೯ ॥

---

೧೬. ಅನ್ನದಾನದಿಂದ ದಾತೃವಿಗೆ ಬರುವ ಫಲಗಳನ್ನೂ ಲೋಕಗಳನ್ನೂ ಹೇಳುತ್ತೇನೆ, ಕೇಳು. ಅವರಿಗೆ ಅಂತರಿಕ್ಷದಲ್ಲಿ ಉತ್ತಮವಾದ ವಿಮಾನಗಳು ಪ್ರಕಾಶಿಸುತ್ತ ಬಂದಿರುತ್ತವೆ.

೧೭, ಆ ವಿಮಾನಗಳಲ್ಲಿ ಬಗೆ ಬಗೆಯಾದ ಕೊಟ್ಟಡಿಗಳೂ ಜಾಗಗಳೂ ಇರುವುದಲ್ಲದೆ ಇಷ್ಟವಾದ ಪದಾರ್ಥಗಳೆಲ್ಲವನ್ನೂ ಹೊಂದಿರುತ್ತವೆ. ಅವರ ಮನೆಗಳಲ್ಲಿ ಇಷ್ಟಾರ್ಥಗಳನ್ನು ಕೊಡುವ ಕಲ್ಪವೃಕ್ಷಗಳೆಲ್ಲವೂ ಇರುತ್ತವೆ.

೧೮. ಅವರಿರುವ ಸ್ಥಳದಲ್ಲಿ ಬಾವಿಗಳು ಚಿನ್ನದ ಕಲ್ಲುಗಳಿಂದ ಕೂಡಿ ಇದುತ್ತವೆ. ಇಳಿಯುವ ಕೊಳಗಳು ಎಲ್ಲೆಲ್ಲಿಯೂ ಇರುತ್ತವೆ. ಅವಕ್ಕೆ ಚಿನ್ನದ ಸೋಪಾನವು ಇರುತ್ತದೆ. ಮನೋಹರವಾಗಿ ಶಬ್ದಮಾಡುವ (ಸಂಗೀತವಿರುವ) ವಿಮಾನಗಳಿರುತ್ತವೆ. ಅನೇಕ ಜನ ಭಕ್ತಿಯುಳ್ಳ ಸೇವಕರಿರುತ್ತಾರೆ.

೧೯. ಭಕ್ಷ್ಯಗಳೂ, ಭೋಜ್ಯಗಳೂ ಬೆಟ್ಟದ ಹಾಗೆ ಬಿದ್ದಿರುತ್ತವೆ. ಹಾಲಿನ ಹೊಳೆಗಳೇ ಹರಿಯುತ್ತಿರುತ್ತವೆ. ತುಪ್ಪವೂ ಬೆಟ್ಟದಂತೆ ಇರುತ್ತದೆ.

ಪ್ರಾಸಾದಾಶ್ಶುಭ್ರವರ್ಣಾಭಾಃ ಶಯ್ಯಾಶ್ಚ ಕನಕೋಜ್ವಲಾಃ ।
ತೇದನ್ನಂ ದಾತುಮಿಚ್ಛಂತಿ ತಸ್ಮಾದನ್ನಪ್ರದೋ ಭವೇತ್ ॥ ೨೦ ॥

ಏತೇ ಲೋಕಾಃ ಪುಣ್ಯಕೃತಾಮನ್ನದಾನಂ ಮಹಾಫಲಂ ।
ತಸ್ಮಾದನ್ನಂ ವಿಶೇಷೇಣ ದಾತವ್ಯಂ ಮಾನವೈರ್ಭುವಿ ॥ ೨೧ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಪತಿ
ನಾರದ ಸಂವಾದೇ ಅನ್ನಪ್ರಶಂಸಾ ನಾಮ
ಸಪ್ತವಿಂಶೋಽಧ್ಯಾಯ ಸಮಾಪ್ತಿಃ

---

೨೦. ಅಲ್ಲಿರತಕ್ಕ ಮನೆಯ ಮಹಡಿಗಳೂ ಅಮೃತಶಿಲೆಯಂತೆ ಬೆಳ್ಳಗೆ ಇರುತ್ತವೆ. ಹಾಸಿಗೆಗಳನ್ನೂ ಕೂಡ ಚಿನ್ನದ ಜರತಾರಿಗಳನ್ನು ಹಾಕಿ ಪ್ರಕಾಶಿಸುವಂತೆ ಮಾಡಿದ್ದಾರೆ. ಈ ರೀತಿಯಾಗಿ ದಾತೃವು ಕೊಟ್ಟಿರುವ ಅನ್ನದ ಫಲವನ್ನು ಕೊಡಲು ಅವೆಲ್ಲವೂ ಇಚ್ಛಿಸುತ್ತವೆ. ಆದ್ದರಿಂದ ಅನ್ನದಾನವನ್ನು ಮಾಡಬೇಕು.

೨೧. ಈ ರೀತಿಯಾದ ಭೋಗಗಳಿರುವ ಲೋಕಗಳು ಅನ್ನದಾನದ ಪುಣ್ಯವಂತರಿಗೆ ಸಿಕ್ಕುತ್ತವೆ. ಅನ್ನದಾನಮಾಡಿದರೆ ಬಹಳವಾದ ಫಲವುಂಟು. ಆದ್ದರಿಂದ ಪ್ರಪಂಚದಲ್ಲಿ ಮನುಷ್ಯರು ಅನ್ನದಾನವನ್ನು ವಿಶೇಷವಾಗಿ ಮಾಡಬೇಕು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಪತಿ
ನಾರದರ ಸಂವಾದದಲ್ಲಿ ಅನ್ನ ಪ್ರಶಂಸೆಯೆಂಬ
ಇಪ್ಪತ್ತೇಳನೆಯ ಅಧ್ಯಾಯವು ಮುಗಿದುದು



|| ಶ್ರೀಃ ||

-x-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ಅಷ್ಟಾವಿಂಶೋಽಧ್ಯಾಯಃ ||



### || ಮಹಾದೇವ ಉವಾಚ ||

ಪಾನೀಯದಾನಂ ಪರಮಂ ದಾನಾನಾಮುತ್ತಮಂ ಸದಾ |
ತಸ್ಮಾದ್ವಾಪೀಶ್ಚ ಕೂಪಾಂಶ್ಚ ತಟಾಗಾನಿ ಚ ಕಾರಯೇತ್ || ೧ ||

ಅರ್ಧಂ ಪಾಪಂ ಸಂಹರನ್ತಿ ಪುರುಷಸ್ಯ ವಿಕರ್ಮಣಃ |
ಕೂಪಾಃ ಪ್ರಕೃತಪಾನೀಯಾಃ ಸುಪ್ರವೃತ್ತಸ್ಯ ನಿತ್ಯಶಃ || ೨ ||

ಸ ಚ ತಾರಯತೇ ವಂಶಂ ಯಸ್ಯ ಖಾತಜಲಾಶಯೇ |
ಗಾವಃ ಪಿಬಂತಿ ವಿಪ್ರಾಶ್ಚ ಸಾಧವಶ್ಚ ನರಾಸ್ಸದಾ || ೩ ||

---

## ಇಪ್ಪತ್ತೆಂಟನೆಯ ಅಧ್ಯಾಯವು



೧. ನೀರಿನ ದಾನವು ದಾನಗಳೊಳಗೆಲ್ಲಾ ಶ್ರೇಷ್ಠವಾದುದು. ಆದ್ದರಿಂದ ಕೊಳಗಳನ್ನೂ ಭಾವಿಗಳನ್ನೂ ತೋಡಿಸಬೇಕು. ಕೆರೆಗಳನ್ನು ಕಟ್ಟಿಸಬೇಕು.

೨. ಪ್ರಾಣಿಗಳು ಉಪಯೋಗಿಸುವ ನೀರುಳ್ಳ ಭಾವಿಗಳು ಪಾಪಿಯಾಗಿರ ತಕ್ಕವರ ಅರ್ಧ ಪಾಪಗಳನ್ನು ಕೂಡಲೇ ನಾಶಮಾಡುತ್ತವೆ. ಎಂದ ಮೇಲೆ ಸರಿಯಾಗಿರುವವನ ಸ್ಥಿತಿಯನ್ನು ಹೇಳತಕ್ಕದ್ದೇನಿರುತ್ತದೆ ?

೩. ಯಾವನು ತೋಡಿಸಿರುವ ಬಾವಿಯಲ್ಲಿ ನೀರನ್ನು ಬ್ರಾಹ್ಮಣರೂ ಗೋವುಗಳೂ ಸಾಧುಗಳೂ ದಿನವೂ ಕುಡಿಯುತ್ತಾರೆಯೋ ಅವನು ತನ್ನ ವಂಶವನ್ನೇ ಉದ್ಧಾರಮಾಡಿಕೊಳ್ಳುತ್ತಾನೆ.

ನಿದಾಘಕಾಲೇ ಪಾನೀಯಂ ಯಸ್ಯ ತಿಷ್ಠತಿ ನಾರದ ।
ದುರ್ಗಂ ವಿಷಮಕೃಚ್ಛ್ರಂ ಚ ನ ಕದಾಚಿದವಾಪ್ಯತೇ　　　　|| ೪ ||

ತಟಾಗಾನಾಂ ಚ ವಕ್ಷ್ಯಾಮಿ ಕೃತಾನಾಂ ಯೇ ಗುಣಾಃ ಸ್ಮೃತಾಃ ।
ತ್ರಿಷುಲೋಕೇಷು ಸರ್ವತ್ರ ಪೂಜಿತೋ ಯಸ್ತಟಾಗವಾನ್　　　　|| ೫ ||

ಅಥವಾ ಮಿತ್ರಸದನಂ ಮಿತ್ರಮೈತ್ರೀವಿವರ್ಧನಂ ।
ಕೀರ್ತಿಸಂಜನನಂ ಶ್ರೇಷ್ಠಂ ತಟಾಗಾನಾಂ ನಿವೇಶನಂ　　　　|| ೬ ||

ಧರ್ಮಸ್ಯಾರ್ಥಸ್ಯ ಕಾಮಸ್ಯ ಫಲಮಾಹುರ್ಮನೀಷಿಣಃ ।
ತಟಾಕಂ ಸುಕೃತಂ ದೇಶೇ ಕ್ಷೇತ್ರಮಧ್ಯೇ ಮಹಾಶ್ರಯಂ　　　　|| ೭ ||

ಚತುರ್ವಿಧಾನಾಂ ಭೂತಾನಾಂ ತಟಾಗಸ್ಯೋಪಲಕ್ಷಯೇತ್ ।
ತಟಾಗಾನಿ ಚ ಸರ್ವಾಣಿ ದಿಶಂತಿ ಶ್ರೀಯಮುತ್ತಮಾಂ　　　　|| ೮ ||

---

೪. ಯಾವನು ತೋಡಿಸಿದ ಭಾವಿಗಳಲ್ಲಾಗಲೀ ಕಟ್ಟಿಸಿದ ಕೆರೆಗಳಲ್ಲಿ ಆಗಲಿ ಬೇಸಿಗೆಯಲ್ಲಿ ನೀರು ನಿಂತಿರುವುದೋ ಅವನಿಗೆ ಅದೃಷ್ಟವು ಎಂತಹ ಕಠಿಣವಾಗಿದ್ದರೂ ಕಷ್ಟಗಳು ಬರುವುದೇ ಇಲ್ಲ.

೫. ಕೆರೆಗಳನ್ನು ಕಟ್ಟುವುದರಿಂದ ಬರುವ ಗುಣಗಳನ್ನು ಹೇಳುತ್ತೇನೆ. ಕೆರೆಯನ್ನು ಕಟ್ಟಿಸಿದವನು ಮೂರುಲೋಕಗಳಲ್ಲಿಯೂ ಪೂಜಿತನಾಗುತ್ತಾನೆ.

೬. ಆ ಕೆರೆಯು ಜನರಲ್ಲಿ ಸ್ನೇಹವನ್ನು ಉಂಟುಮಾಡೋಣದರಿಂದ ಮಿತ್ರನ ಮನೆಯೆಂದೇ ಭಾವಿಸಬೇಕು. ಸ್ನೇಹಿತರಲ್ಲಿ ಸ್ನೇಹವನ್ನು ಹೆಚ್ಚಾಗಿ ಬೆಳೆಸುತ್ತದೆ. ಲೋಕದಲ್ಲಿ ಉತ್ತಮವಾದ ಕೀರ್ತಿಯನ್ನು ಉಂಟುಮಾಡುತ್ತದೆ.

೧೭. ಪುಣ್ಯಕ್ಷೇತ್ರಗಳ ಮಧ್ಯದಲ್ಲಿ ಕೆರೆಯನ್ನು ಕಟ್ಟಿಸಿದರೆ ಅದನ್ನು ತಿಳಿದವರು ಧರ್ಮ, ಅರ್ಥ, ಕಾಮಗಳ ಉತ್ತಮ ಫಲವೆಂದು ಹೇಳುತ್ತಾರೆ.

೮. ನಾಲ್ಕು ಬಗೆಯಾದ ಪ್ರಾಣಿಗಳಿಗೂ ಈ ಕೆರೆಯು ಬಹು ಮುಖ್ಯವಾದುದು. ಕೆರೆಗಳೆಲ್ಲವೂ ಕೂಡ ಉತ್ತಮವಾದ ಸಂಪತ್ತನ್ನು ಕೊಡುತ್ತವೆ.

**ದೇವಾ ಮನುಷ್ಯಾ ಗಂಧರ್ವಾಃ ಪಿತರೋರಗರಾಕ್ಷಸಾಃ |**
**ಸ್ಥಾವರಾಣಿ ಚ ಭೂತಾನಿ ಸಂಶ್ರಯಂತಿ ಜಲಾಶ್ರಯಂ ॥ ೯ ॥**

**ವರ್ಷಋತೌ ತಟಾಗೇ ತು ಸಲಿಲಂ ಯಸ್ಯ ತಿಷ್ಠತಿ |**
**ಅಗ್ನಿಹೋತ್ರಫಲಂ ತಸ್ಯ ಜಾಯತೇ ನಾತ್ರ ಸಂಶಯಃ ॥ ೧೦ ॥**

**ಹೇಮಂತೇ ಶಿಶಿರೇ ಚೈವ ಸಲಿಲಂ ಯಸ್ಯ ತಿಷ್ಠತಿ |**
**ಗೋಸಹಸ್ರಫಲಂ ತಸ್ಯ ಲಭತೇ ನಾತ್ರ ಸಂಶಯಃ ॥ ೧೧ ॥**

**ವಸಂತೇ ಚ ತಥಾ ಗ್ರೀಷ್ಮೇ ಸಲಿಲಂ ತಿಷ್ಠತೇ ಯದಿ |**
**ಅತಿರಾತ್ರಾಶ್ವಮೇಧಾಭ್ಯಾಂ ಫಲಮಾಹುರ್ಮನೀಷಿಣಃ ॥ ೧೨ ॥**

**ಅಥೈತೇಷಾಂ ತು ವೃಕ್ಷಾಣಾಂ ರೋಪಣೇ ಚ ಗುಣಾನ್ ಶೃಣು |**
**ಅತೀತಾನಾಗತೌ ಚೋಭೌ ಪಿತೃವಂಶೌ ಮಹಾಮುನೇ ॥ ೧೩ ॥**

---

೯. ದೇವತೆಗಳು, ಮನುಷ್ಯರು, ಗಂಧರ್ವರು, ಪಿತೃಗಳು, ಉರಗರು, ರಾಕ್ಷಸರು, ಚಲಿಸದಿರುವ ಮರ ಮುಂತಾದ ಪ್ರಾಣಿಗಳೂ ನೀರನ್ನೇ ಆಶ್ರಯಿಸಿ ಇರುತ್ತವೆ.

೧೦. ಶ್ರಾವಣ, ಭಾದ್ರಪದ ಮಾಸ ರೂಪವಾದ ವರ್ಷರ್ತುವಿನಲ್ಲಿ ಕೆರೆಯಲ್ಲಿ ನೀರಿದ್ದರೆ ಆ ಕಟ್ಟಿಸಿದವನಿಗೆ ಅಗ್ನಿಹೋತ್ರ ಮಾಡಿದ ಫಲವು ಬರುತ್ತವೆ. ಸಂಶಯವಿಲ್ಲ.

೧೧. ಹೇಮಂತಋತು, ಶಿಶಿರಋತುಗಳಲ್ಲಿ ನೀರು ಕೆರೆಯಲ್ಲಿ ನಿಂತರೆ ಆ ಕಟ್ಟಿಸಿದವನಿಗೆ ಸಾವಿರ ಗೋದಾನಗಳನ್ನು ಮಾಡಿದ ಫಲವು ಬರುತ್ತದೆ. ಸಂಶಯವಿಲ್ಲ.

೧೨. ಕೆರೆಯಲ್ಲಿ ವಸಂತಋತುವಿನಲ್ಲಿ ನೀರು ನಿಂತರೆ ಅತಿರಾತ್ರವೆಂಬ ಯಾಗವನ್ನು ಮಾಡಿದ ಫಲವೂ, ಗ್ರೀಷ್ಮಋತುವಿನಲ್ಲಿ ನೀರು ನಿಂತರೆ ಅಶ್ವಮೇಧ ಯಾಗ ಮಾಡಿದ ಫಲವೂ ಕಟ್ಟಿಸಿದವನಿಗೆ ಬರುತ್ತದೆ.

೧೩–೧೪. ಇನ್ನುಮೇಲೆ ಮರಗಳನ್ನು ಬೆಳೆಸಿದರೆ ಬರುವ ಗುಣಗಳನ್ನು ಹೇಳುತ್ತೇನೆ ಕೇಳು. ಮರಗಳನ್ನು ಹಾಕಿ ಬೆಳೆಸಿದವನು ತನ್ನ ವಂಶದವರಲ್ಲಿ

ತಾರಯೇದ್ವೃಕ್ಷರೋಪೀ ಚ ತಸ್ಮಾದ್ವೃಕ್ಷಾಂಸ್ತು ರೋಪಯೇತ್ ।
ಪುತ್ರಪೌತ್ರಾ ಭವಂತ್ಯೇತೇ ಪಾದಪಾ ನಾತ್ರ ಸಂಶಯಃ ॥ ೧೪ ॥

ಪರಲೋಕಂ ಗತಸ್ಸೋಽಪಿ ಲೋಕಾನಾಪ್ನೋತಿ ಚಾಕ್ಷಯಾನ್ ।
ಪುಷ್ಪೈಸ್ಸುರಗಣಾನ್ಸರ್ವಾನ್ಪತ್ರೈಶ್ಚಾಪಿ ತಥಾ ಪಿತೄನ್ । ॥ ೧೫ ॥

ಛಾಯಯಾ ಚಾತಿಥೀನ್ಸರ್ವಾನ್ಪೂಜಯಂತಿ ಮಹೀರುಹಾಃ ।
ಕಿನ್ನರೋ ಯಕ್ಷರಕ್ಷಾಂಸಿ ದೇವಗಂಧರ್ವಮಾನವಾಃ ॥ ೧೬ ॥

ತಥಾ ಋಷಿಗಣಾಶ್ಚೈವ ಸಂಶ್ರಯಂತಿ ಮಹೀರುಹಾನ್ ।
ಪುಷ್ಪಿತಾಃ ಫಲವಂತಶ್ಚ ತರ್ಪಯಂತೀಹ ಮಾನವಾನ್ ॥ ೧೭ ॥

ಇಹಲೋಕೇ ಪರೇ ಚೈವ ಪುತ್ರಾಸ್ತೇ ಧರ್ಮತಸ್ಸ್ಮೃತಾಃ ।
ತಟಾಗೇ ವೃಕ್ಷರೋಪಾಶ್ಚ ಇಷ್ಟಯಜ್ಞಾಶ್ಚ ಯೇ ದ್ವಿಜಾಃ ॥ ೧೮ ॥

ಏತೇ ಸ್ವರ್ಗಾನ್ನ ಹೀಯಂತೆ ಯೇ ಚಾನ್ಯೇ ಸತ್ಯವಾದಿನಃ ।
ಸತ್ಯಮೇವ ಪರಂ ಬ್ರಹ್ಮ ಸತ್ಯಮೇವ ಪರಂ ತಪಃ ॥ ೧೯ ॥

---

ಕಳೆದವರನ್ನೂ ಮುಂದೆ ಹುಟ್ಟುವವರನ್ನೂ ಉದ್ಧರಿಸುತ್ತಾನೆ. ಆದ್ದರಿಂದ ಮರಗಳನ್ನು ಬೆಳೆಸಬೇಕು. ಈ ಮರಗಳೇ ಮಕ್ಕಳೂ ಮೊಮ್ಮಕ್ಕಳೂ ಆಗಿ ಹಿಂದಿನವರನ್ನು ಉದ್ಧಾರ ಮಾಡುತ್ತವೆ. ಸಂಶಯವಿಲ್ಲ.

೧೫–೧೭. ಅವನ್ನು ಬೆಳೆಸಿದವನೂ ಕೂಡ ಸತ್ತು ಪರಲೋಕವನ್ನು ಹೊಂದಿದ ಮೇಲೆ ಶಾಶ್ವತವಾದ ಸ್ಥಾನವನ್ನು ಹೊಂದುತ್ತಾನೆ. ಈ ಮರಗಳು ಹೂಗಳಿಂದ ದೇವತೆಗಳನ್ನೂ ಎಲೆಗಳಿಂದ ಪಿತೃಗಳನ್ನೂ ನೆರಳಿನಿಂದ ಅತಿಥಿಗಳನ್ನೂ ಪೂಜಿಸಿ ಸಂತೋಷಪಡಿಸುತ್ತವೆ. ಕಿನ್ನರರು, ಯಕ್ಷರು, ರಾಕ್ಷಸರು, ದೇವತೆಗಳು, ಗಂಧರ್ವರು, ಮಾನವರು, ಋಷಿಗಳು ಇವರೆಲ್ಲರೂ ಮರವನ್ನು ಆಶ್ರಯಿಸುತ್ತಾರೆ. ಆ ಮರಗಳು ಹೂ ಹಣ್ಣುಗಳನ್ನು ಬಿಟ್ಟರೆ ಮನುಷ್ಯರನ್ನು ಸಂತೋಷಗೊಳಿಸುತ್ತವೆ.

೧೮–೨೦. ಈ ಮರಗಳನ್ನು ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಉಪಯುಕ್ತವಾಗುವ ಧರ್ಮದ ಮಕ್ಕಳೆಂದು ಹೇಳುತ್ತಾರೆ. ಕೆರೆಯನ್ನು ಕಟ್ಟಿಸಿದವರೂ, ಮರದ ತೋಪುಗಳನ್ನು ಹಾಕಿಸಿದವರೂ, ಯಾಗ ಮಾಡಿದವರೂ, ಸತ್ಯವಾದಿಗಳೂ ಕೂಡ ಸ್ವರ್ಗದಿಂದ ಹಿಂದಿರುಗುವುದಿಲ್ಲ. ಸತ್ಯವೇ ಬ್ರಹ್ಮನು.

**ಸತ್ಯಮೇವ ಪರೋ ಮೋಕ್ಷಃ ಸತ್ಯಮೇವ ಪರಂ ಶ್ರುತಂ ।**
**ಸತ್ಯಂ ದೇವೇಷು ಜಾಗರ್ತಿ ಸತ್ಯಂ ಚ ಪರಮಂ ಪದಂ ॥ ೨೦ ॥**

**ತಪೋ ಯಜ್ಞಾಶ್ಚ ಪುಣ್ಯಂ ಚ ತಥಾ ದೇವರ್ಷಿಪೂಜನಂ ।**
**ಆದ್ಯೋವಿಧಿಶ್ಚ ವಿದ್ಯಾ ಚ ಸರ್ವಂ ಸತ್ಯೇ ಪ್ರತಿಷ್ಠಿತಂ ॥ ೨೧ ॥**

**ಸತ್ಯಂ ಯಜ್ಞಸ್ತಥಾ ದಾನಂ ಮಂತ್ರಾ ದೇವೀ ಸರಸ್ವತೀ ।**
**ವ್ರತಚರ್ಯಾ ತಥಾ ಸತ್ಯಮೋಂಕಾರ ಸತ್ಯಮೇವ ಚ ॥ ೨೨ ॥**

**ಸತ್ಯೇನ ವಾಯುರಭ್ಯೇತಿ ಸತ್ಯೇನ ತಪತೇ ರವಿಃ ।**
**ಸತ್ಯೇನ ಚಾಗ್ನಿರ್ದಹತಿ ಸ್ವರ್ಗಸ್ಸತ್ಯೇನ ತಿಷ್ಠತಿ ॥ ೨೩ ॥**

**ಪೂಜನಂ ಸರ್ವದೇವಾನಾಂ ಸರ್ವತೀರ್ಥಾವಗಾಹನಂ ।**
**ಸತ್ಯಂ ಯೋ ವದತೇ ಲೋಕೇ ಸರ್ವಮಾಪ್ನೋತ್ಯಸಂಶಯಃ ॥ ೨೪ ॥**

---

ಸತ್ಯವೇ ಉತ್ತಮವಾದ ತಪಸ್ಸು. ಸತ್ಯವೇ ಮೋಕ್ಷವು. ಸತ್ಯವೇ ಉತ್ತಮವಾದ ಜ್ಞಾನವು. ಸತ್ಯದಿಂದಲೇ ದೇವತೆಗಳು ಉತ್ತಮರಾಗಿರುವುದು. ಸತ್ಯವೇ ಪರಮ ಪದವು.

೨೧. ತಪಸ್ಸು, ಯಜ್ಞ, ಪುಣ್ಯದೇವಪೂಜೆ, ಋಷಿಪೂಜೆ ಮುಂತಾದ ವಿಧಿಗಳೂ, ವಿದ್ಯೆಗಳೂ ಎಲ್ಲವೂ ಕೂಡ ಸತ್ಯದಲ್ಲಿಯೇ ಅಡಗಿವೆ.

೨೨. ಸತ್ಯವೇ ಯಜ್ಞವು, ಸತ್ಯವೇ ದಾನವು, ಸತ್ಯವೇ ಮಂತ್ರವು, ಸತ್ಯವೇ ಸರಸ್ವತೀ ದೇವಿಯು, ಸತ್ಯವೇ ವ್ರತವು, ಸತ್ಯವೇ ಓಂಕಾರವು.

೨೩. ಸತ್ಯದಿಂದಲೇ ಗಾಳಿಯು ಬೀಸುತ್ತಿರುವುದು, ಸತ್ಯದಿಂದಲೇ ಸೂರ್ಯನು ಬೆಳಗುತ್ತಿರುವುದು. ಸತ್ಯದಿಂದಲೇ ಬೆಂಕಿಯು ಸುಡುತ್ತಿರುವುದು. ಸತ್ಯದಿಂದಲೇ ಸ್ವರ್ಗವೂ ಕೂಡ ನಿಂತಿರುವುದು.

೨೪. ಸತ್ಯನುಡಿವುದೇ ಸರ್ವ ದೇವರನ್ನೂ ಪೂಜಿಸಿದಹಾಗೆ. ಅಸತ್ಯನುಡಿವುದೇ ಎಲ್ಲಾ ತೀರ್ಥಗಳಲ್ಲಿಯೂ ಸ್ನಾನಮಾಡಿದಂತೆ, ಲೋಕದಲ್ಲಿ ಸತ್ಯವನ್ನು ನುಡಿಯುವವನು ಎಲ್ಲವನ್ನೂ ಹೊಂದುತ್ತಾನೆ. ಇದರಲ್ಲಿ ಸಂಶಯವಿಲ್ಲ.

**ಅಶ್ವಮೇಧಸಹಸ್ರಂ ಚ ಸತ್ಯಂ ಚ ತುಲಯಾ ಧೃತಂ ।**
**ಸರ್ವೇಷಾಂ ಸರ್ವಯಜ್ಞಾನಾಂ ಸತ್ಯಮೇವ ವಿಶಿಷ್ಯತೇ || ೨೫ ||**

**ಸತ್ಯೇ ದೇವಾಃ ಪ್ರತೀಯಂತೇ ಋಷಯಃ ಪಿತರಸ್ತಥಾ ।**
**ಸತ್ಯಮಾಹುಃ ಪರಂ ಧರ್ಮಂ ಸತ್ಯಮಾಹುಃಪರಂ ಪದಂ || ೨೬ ||**

**ಸತ್ಯಮಾಹುಃ ಪರಂ ಬ್ರಹ್ಮ ತಸ್ಮಾತ್ಸತ್ಯಂ ವದಾಮಿ ತೇ ।**
**ಮುನಯಸ್ಸತ್ಯನಿರತಾಃ ತಪಸ್ತಪ್ತ್ವಾ ಸುದುಷ್ಕರಂ || ೨೭ ||**

**ಸತ್ಯಧರ್ಮರತಾಸ್ಸಿದ್ಧಾಃ ತತಃ ಸ್ವರ್ಗಮಿತೋ ಗತಾಃ ।**
**ಅಪ್ಸರೋಗಣಸಂಘುಷ್ಟೈಃ ವಿಮಾನೈಃ ಪರಿತೋ ವೃತಾಃ || ೨೮ ||**

**ವಕ್ತವ್ಯಂ ಚ ಸದಾ ಸತ್ಯಂ ನ ಸತ್ಯಾದ್ವಿದ್ಯತೇ ಪರಂ ।**
**ಅಗಾಧೇ ವಿಪುಲೇ ಸಿದ್ಧೇ ಸತ್ಯತೀರ್ಥೇ ಶುಚಿಪ್ರದೇ || ೨೯ ||**

---

೨೫. ತಕ್ಕಡಿಯ ಒಂದು ಕಡೆ ಸಾವಿರ ಅಶ್ವಮೇಧಯಾಗಗಳನ್ನೂ ಮತ್ತೊಂದುಕಡೆಯಲ್ಲಿ ಸತ್ಯವನ್ನೂ ಇಟ್ಟು ತೂಕಮಾಡಲು ಎಲ್ಲಾ ಯಜ್ಞಗಳಿಗಿಂತಲೂ ಸತ್ಯವೇ ಭಾರವಾಯಿತು.

೨೬. ದೇವತೆಗಳೂ ಪಿತೃಗಳೂ ಋಷಿಗಳೂ ಸತ್ಯದಲ್ಲಿಯೇ ಇದ್ದು ಪ್ರಕಾಶಿಸುತ್ತಿರುವರು. ಸತ್ಯವೇ ಉತ್ತಮವಾದ ಧರ್ಮವು. ಸತ್ಯವೇ ಪರಮ ಪದವು.

೨೭–೨೮. ಸತ್ಯವೇ ಉತ್ತಮವಾದ ಧರ್ಮವು. ಆದ್ದರಿಂದಲೇ ನಿನಗೆ ಸತ್ಯದ ವಿಷಯವನ್ನು ಹೇಳುತ್ತೇನೆ. ಋಷಿಗಳು ಸತ್ಯವನ್ನೇ ಆಶ್ರಯಿಸಿದ್ದು ಉಗ್ರವಾದ ತಪಸ್ಸನ್ನು ಮಾಡಿದರು. ಸಿದ್ಧರೂ ಕೂಡ ಸತ್ಯವನ್ನು ಆಶ್ರಯಿಸಿದ್ದರು. ಹೀಗಿದ್ದುದರಿಂದಲೇ ಅವರು ಅಪ್ಸರ ಸ್ತ್ರೀಯರಿಂದ ಕೂಡಿದ ವಿಮಾನದಲ್ಲಿ ಇಲ್ಲಿಂದ ಸ್ವರ್ಗಕ್ಕೆ ಹೋದರು.

೨೯–೩೦. ಸತ್ಯಕ್ಕಿಂತಲೂ ಉತ್ತಮ ವಸ್ತುವು ಬೇರೊಂದಿಲ್ಲ. ಆಳವಾಗಿ, ಬಹಳವಾಗಿ, ಸಿದ್ಧವಾಗಿ, ಇರುವ ಸತ್ಯತೀರ್ಥವೆಂಬ ಶುಚಿಯಾದ ಮಡುವಿನಲ್ಲಿ

ಸ್ನಾತವ್ಯಂ ಮನಸಾ ಯುಕ್ತ್ಯೈಃ ಸ್ನಾನಂ ತತ್ಪರಮಂ ಸ್ಮೃತಂ ।
ಆತ್ಮಾರ್ಥೇ ವಾ ಪರಾರ್ಥೇ ವಾ ಪುತ್ರಾರ್ಥೇ ವಾಪಿ ಮಾನವಾಃ ॥ ೩೦ ॥

ಅನೃತಂ ಯೇ ನ ಭಾಷಂತೇ ತೇ ನರಾಃ ಸ್ವರ್ಗಗಾಮಿನಃ ।
ವೇದಯಜ್ಞಾಸ್ತಥಾ ಮಂತ್ರಾಃ ಸಂತಿ ವಿಪ್ರೇಷು ನಿತ್ಯಶಃ ॥ ೩೧ ॥

ನ ಭಾಂತ್ಯುಜ್ಝಿತಸತ್ಯೇಷು ತಸ್ಮಾತ್ಸತ್ಯಂ ಸಮಾಚರೇತ್ ॥ ೩೨ ॥

॥ ನಾರದ ಉವಾಚ ॥

ತಪಸಾಂ ಮೇ ಫಲಂ ಬ್ರೂಹಿ ಪುನರೇವ ವಿಶೇಷತಃ ।
ಸರ್ವೇಷಾಂ ಚೈವ ವರ್ಣಾನಾಂ ಬ್ರಾಹ್ಮಣಾನಾಂ ತಪೋ ಬಲಂ ॥ ೩೩ ॥

॥ ಮಹಾದೇವ ಉವಾಚ ॥

ಪ್ರವಕ್ಷ್ಯಾಮಿ ತಪೋಧ್ಯಾಯಂ ಸರ್ವಕಾಮಾರ್ಥಸಾಧಕಂ ।
ಸುದುಶ್ಚರಂ ದ್ವಿಜಾತೀನಾಂ ತನ್ಮೇ ನಿಗದತಃ ಶೃಣು ॥ ೩೪ ॥

---

ಒಳ್ಳೆಯ ಮನಸ್ಸಿನಿಂದ ಸ್ನಾನಮಾಡಬೇಕು. ಆ ಸ್ನಾನವೇ ಉತ್ತಮವಾದುದು. ಎಂದು ತಿಳಿ. ತನ್ನ ಹಿತಕ್ಕಾಗಿಯಾಗಲಿ, ಪರರ ಹಿತಕ್ಕಾಗಿಯಾಗಲಿ ಯಾರು ಸುಳ್ಳನ್ನು ಹೇಳುವುದಿಲ್ಲವೋ ಅವರೇ ಸ್ವರ್ಗವನ್ನು ಹೊಂದತಕ್ಕವರು.

೩೧-೩೨. ವೇದಗಳು, ಯಜ್ಞಗಳು, ಮಂತ್ರಗಳು ಇವೆಲ್ಲವೂ ವಿಪ್ರರಲ್ಲಿ ಯಾವಾಗಲೂ ಇದ್ದೇ ಇರುತ್ತವೆ. ಪ್ರಕಾಶಿಸುತ್ತಲೇ ಇರುತ್ತವೆ. ಆದರೆ ಸತ್ಯವನ್ನು ಬಿಟ್ಟವರಲ್ಲಿ ಇವುಗಳು ಫಲದಾಯಕವಾಗಿ ಪ್ರಕಾಶಿಸುವುದಿಲ್ಲ.

೩೩. ನಾರದನು ಹೇಳಿದನು– ಎಲೈ ಮಹಾದೇವನೆ! ನನಗೆ ಮತ್ತೆ ತಪಸ್ಸಿನ ಫಲವನ್ನು ಹೇಳು. ಅಲ್ಲದೆ ಎಲ್ಲಾ ವರ್ಣಗಳ ಮತ್ತು ಬ್ರಾಹ್ಮಣರ ತಪೋಬಲವನ್ನೂ ಹೇಳು.

೩೪. ಮಹಾದೇವನು ಹೇಳಿದನು– ಸಕಲ ಇಷ್ಟಾರ್ಥಗಳನ್ನೂ ಕೊಡುವ ತಪಸ್ಸಿನ ಫಲದ ಅಧ್ಯಾಯವನ್ನೇ ಹೇಳುತ್ತೇನೆ. ಅದು ಬ್ರಾಹ್ಮಣರು ಸುಖವಾಗಿ ಮಾಡಬಹುದಾದುದು. ಹೇಳುವೆನು, ಕೇಳು.

ತಪೋ ಹಿ ಪರಮಂ ಪ್ರೋಕ್ತಂ ತಪಸಾ ವಿಂದತೇ ಫಲಂ ।
ತಪೋರತಾ ಹಿ ಯೇ ನಿತ್ಯಂ ಮೋದಂತೇ ಸಹ ದೈವತೈಃ　　|| ೩೫ ||

ತಪಸಾ ಮೋಕ್ಷಮಾಪ್ನೋತಿ ತಪಸಾ ವಿಂದತೇ ಮಹತ್ ।
ಜ್ಞಾನವಿಜ್ಞಾನಸಂಪತ್ತಿಂ ಸೌಭಾಗ್ಯಂ ರೂಪಮೇವ ಚ　　|| ೩೬ ||

ತಪಸಾ ಲಭ್ಯತೇ ಸರ್ವಂ ಮನಸಾ ಯದ್ಯದಿಚ್ಛತಿ ।
ನಾತಪ್ತತಪಸೋ ಯಾಂತಿ ಬ್ರಹ್ಮಲೋಕಂ ಕದಾಚನ　　|| ೩೭ ||

ಯತ್ಕಾರ್ಯಂ ಕಿಂಚಿದಾಸ್ಥಾಯ ಪುರುಷಸ್ತಪ್ಯತೇ ತಪಃ ।
ತತ್ಸರ್ವಂ ಸಮವಾಪ್ನೋತಿ ಪರತ್ರೇಹ ಚ ಮಾನವಃ　　|| ೩೮ ||

ಸುರಾಪಃ ಪರದಾರೀ ಚ ಬ್ರಹ್ಮಹಾ ಗುರುತಲ್ಪಗಃ ।
ತಪಸಾ ತರತೇ ಸರ್ವಂ ಸರ್ವತಶ್ಚ ವಿಮುಚ್ಯತೇ　　|| ೩೯ ||

---

೩೫. ತಪಸ್ಸೇ ಉತ್ತಮವಾದುದು. ತಪಸ್ಸಿನಿಂದಲೇ ಉತ್ತಮಫಲವನ್ನು ಹೊಂದುತ್ತಾರೆ. ನಿತ್ಯವೂ ಯಾರು ತಪಸ್ಸನ್ನು ಮಾಡುತ್ತಾರೆಯೋ ಅವರು ದೇವತೆಗಳೊಡನೆ ಸುಖಿಸುತ್ತಾರೆ.

೩೬–೩೮. ತಪಸ್ಸಿನಿಂದಲೇ ಮೋಕ್ಷವು ಬರುತ್ತದೆ. ತಪಸ್ಸಿನಿಂದಲೇ ಮಹಾ ಕಾರ್ಯಗಳನ್ನು ನೆರವೇರಿಸಿಕೊಳ್ಳುತ್ತಾನೆ. ಜ್ಞಾನವೂ ಶಿಲ್ಪಜ್ಞಾನವೂ ಆ ತಪಸ್ಸಿನಿಂದಲೇ ಉಂಟಾಗುತ್ತದೆ. ಮನುಷ್ಯನು ಮನಸ್ಸಿನಲ್ಲಿ ಯಾವ ಯಾವುದನ್ನು ಅಪೇಕ್ಷಿಸುತ್ತಾನೆಯೋ ಅವೆಲ್ಲವೂ ತಪಸ್ಸಿನಿಂದಲೇ ಸಿದ್ಧಿಸುತ್ತವೆ. ತಪಸ್ಸನ್ನು ಮಾಡದಿದ್ದವನು ಬ್ರಹ್ಮಲೋಕವನ್ನು ಹೊಂದಲಾರನು- ಮನುಷ್ಯನು ಯಾವ ಕೆಲಸವನ್ನಾದರೂ ಮನಸ್ಸಿನಲ್ಲಿಟ್ಟುಕೊಂಡು ತಪಸ್ಸುಮಾಡಿದರೆ ಅಂತಹವು ಗಳನ್ನೆಲ್ಲವನ್ನೂ ಇಹಲೋಕ ಪರಲೋಕಗಳಲ್ಲಿ ಕೂಡ ಆ ತಪಸ್ಸಿನಿಂದ ಹೊಂದುತ್ತಾನೆ.

೩೯- ಹೆಂಡ ಕುಡಿಯುತ್ತಿದ್ದವನಾಗಲೀ, ಬ್ರಹ್ಮಹತ್ಯೆಮಾಡಿದವನಾಗಲೀ, ಗುರುವಿನ ಹೆಂಡತಿಯಲ್ಲಿ ರಮಿಸಿದವನಾಗಲೀ, ಎಂತಹ ಪಾಪಿಯೇ ಆಗಲೀ. ತಪಸ್ಸಿನಿಂದ ಅವೆಲ್ಲವನ್ನೂ ನಾಶಮಾಡಿಕೊಳ್ಳುತ್ತಾನೆ.

ಅಪಿ ಸರ್ವೇಶ್ವರಸ್ಸಾಣುಃ ವಿಷ್ಣುಶ್ಚೈವ ಸನಾತನಃ ।
ಬ್ರಹ್ಮಾ ಹುತಾಶನಶ್ಯಕ್ರೋ ಯೇ ಚಾನ್ಯೇ ತಪಸಾನ್ವಿತಾಃ ॥ ೪೦ ॥

ಷಡಶೀತಿಸಹಸ್ರಾಣಿ ಮುನೀನಾಮೂರ್ಧ್ವರೇತಸಾಂ ।
ತಪಸಾ ದಿವಿ ಮೋದಂತೇ ಸಮೇತಾ ದೈವತೈಸ್ಸಹ ॥ ೪೧ ॥

ತಪಸಾ ಪ್ರಾಪ್ಯತೇ ರಾಜ್ಯಂ ಶಕ್ರಸ್ಸರ್ವೇ ಸುರಾಸುರಾಃ ।
ತಪಸಾಽಪಾಲಯರ್ಥ್ ಸರ್ವಾನಹನ್ಯಹನಿ ವೃತ್ತಿದಾಃ ॥ ೪೨ ॥

ಸೂರ್ಯಾಚಂದ್ರಮಸೌ ದೇವೌ ಸರ್ವಲೋಕಹಿತೇ ರತೌ ।
ತಪಸ್ಯೈವ ಪ್ರಕಾಶೇತೇ ನಕ್ಷತ್ರಾಣಿ ಗ್ರಹಾಸ್ತಥಾ ॥ ೪೩ ॥

ಸರ್ವಂ ಚ ತಪಸಾಭ್ಯೇತಿ ಸರ್ವಂ ಚ ಸುಖಮುಶ್ನುತೇ ।
ತಪಸ್ತಪತಿ ಯೋರಣ್ಯೇ ವನ್ಯಮೂಲಫಲಾಶನಃ ॥ ೪೪ ॥

---

೪೦–೪೧. ಎಲ್ಲಕ್ಕೂ ಒಡೆಯನಾದ ಈಶ್ವರನೂ ಪರಮ ಪುರುಷನಾದ ವಿಷ್ಣುವೂ ಬ್ರಹ್ಮ ಅಗ್ನಿ ಇಂದ್ರ ಇವರೆಲ್ಲರೂ ಕೂಡ ತಪಸ್ಸನ್ನು ಮಾಡಿ ತಮ್ಮ ಸ್ಥಾನಗಳನ್ನು ಹೊಂದಿರುತ್ತಾರೆ. ಇಂದ್ರಿಯ ಜಯಶಾಲಿಗಳಾದ ಎಂಭತ್ತಾರು ಸಾವಿರ ಋಷಿಗಳೂ ಕೂಡ ಈ ತಪೋಬಲದಿಂದಲೇ ದೇವತೆಗಳೊಡನೆ ಬೆರೆತು ಸುಖಿಸುತ್ತಿರುವುದು.

೪೨. ಇಂದ್ರನೇ ಮುಂತಾದ ದೇವತೆಗಳೆಲ್ಲರೂ ಕೂಡಾ ತಪಸ್ಸಿನಿಂದಲೇ ತಮ್ಮ ತಮ್ಮ ಪದವಿಗಳನ್ನು ಹೊಂದಿದ್ದಾರೆ. ಆ ತಪೋಬಲದಿಂದಲೇ ಪ್ರಜೆಗಳೆಲ್ಲರಿಗೂ ಜೀವನಕ್ಕೆ ಕಲ್ಪಿಸುತ್ತಾ ಅವರನ್ನು ಕಾಪಾಡುತ್ತಿದ್ದಾರೆ.

೪೩. ಪ್ರಪಂಚಕ್ಕೆ ಆನಂದವನ್ನುಂಟುಮಾಡುತ್ತಿರುವ ದೇವತೆಗಳಾದ ಸೂರ್ಯ ಚಂದ್ರರೂ, ನಕ್ಷತ್ರಗಳೂ, ಗ್ರಹಗಳೂ ಕೂಡ ತಪಸ್ಸಿನಿಂದಲೇ ಪ್ರಕಾಶಿಸುತ್ತಾರೆ.

೪೪. ಮಾನವನು ಎಲ್ಲವನ್ನೂ ತಪಸ್ಸಿನಿಂದಲೇ ಹೊಂದುತ್ತಾನೆ. ತಪಸ್ಸಿನಿಂದ ಎಲ್ಲ ಸುಖಗಳನ್ನು ಅನುಭವಿಸಬಲ್ಲನು. ಕಾಡಿನಲ್ಲಿ ತಪಸ್ಸುಮಾಡುತ್ತ ಗೆಡ್ಡೆಗೆಣಸುಗಳನ್ನು ತಿನ್ನುತ್ತ ತಪಸ್ಸುಮಾಡುತ್ತಿರುವವನು ತನ್ನ ತಪಸ್ಸಿನಿಂದ ಯಾವುದನ್ನು ಬೇಕಾದರೂ ಹೊಂದಬಲ್ಲನು.

**ಯೋಧೀತೇ ಶ್ರುತಿಮೇವಾದೌ ಸಮಂ ಸ್ಯಾತ್ತಪಸಾ ಮುನೇ |**
**ಶ್ರುತೇರಧ್ಯಾಪನಾತ್ಪುಣ್ಯಂ ಯದಾಪ್ನೋತಿ ದ್ವಿಜೋತ್ತಮಃ || ೪೫ ||**

**ತದಧ್ಯಾಯಾಚ್ಚ ಜಪ್ಯಾಚ್ಚ ದ್ವಿಗುಣಂ ಫಲಮಶ್ನುತೇ**
**ಜಗದ್ಯಥಾ ನಿರಾಲೋಕಂ ಜಾಯತೇ ಶಶಿಭಾಸ್ಕರೌ | || ೪೬ ||**

**ವಿನಾ ತಥಾ ಪುರಾಣಂ ಹಿ ಧ್ಯೇಯಮಸ್ಮಾನ್ಮಹಾಮುನೇ**
**ತಪಮಾನಸ್ಸದಾ ಜ್ಞಾನಂ ಯೋ ಧಾರಯತಿ ಶಾಸ್ತ್ರತಃ | || ೪೭ ||**

**ಸಂಬೋಧಯತಿ ಲೋಕಂ ಚ ತಸ್ಮಾತ್ಪೂಜ್ಯತಮೋಗುರುಃ**
**ಸರ್ವೇಷಾಂ ಚೈವ ಪಾತ್ರಾಣಾಂ ಶ್ರೇಷ್ಠಂ ಪಾತ್ರಂ ಪುರಾಣವಿತ್ || ೪೮ ||**

---

೪೫. ಮೊದಲು ಯಾವನು ನಿಯಮದಿಂದ ಓದುತ್ತಾನೆಯೋ ಅವನೂ ಕೂಡ ಆ ತಪಸ್ಸಿಗೆ ಸಮವಾದ ಶಕ್ತಿಯುಳ್ಳವನಾಗುತ್ತಾನೆ. ವೇದಗಳನ್ನು ಅಧ್ಯಯನ ಮಾಡುವುದರಿಂದ ಬ್ರಾಹ್ಮಣನು ಯಾವ ಪುಣ್ಯವನ್ನು ಹೊಂದುತ್ತಾನೆಯೋ ಅದನ್ನು ಮತ್ತೆ ಮತ್ತೆ ಓದುವುದರಿಂದಲೂ ಜಪಿಸುವುದರಿಂದಲೂ ಅದರ ಎರಡರಷ್ಟು ಪುಣ್ಯವನ್ನು ಹೊಂದುತ್ತಾನೆ.

೪೬. ಸೂರ್ಯ ಚಂದ್ರರಿಲ್ಲದಿದ್ದರೆ ಜಗತ್ತು ಹೇಗೆ ಬೆಳಕಿಲ್ಲದೆ ಪ್ರಕಾಶಿಸುವುದಿಲ್ಲವೋ ಹಾಗೆ ಪುರಾಣಗಳಿಲ್ಲದಿದ್ದರೆ ಈ ಪ್ರಪಂಚವೂ ಪ್ರಕಾಶಿಸುವುದಿಲ್ಲ.

೪೭. ಶಾಸ್ತ್ರಗಳನ್ನೇ ಆಲೋಚಿಸುತ್ತ ತಪಸ್ಸುಮಾಡಿ ಯಾವನು ಆ ರೀತಿಯಾದ ಜ್ಞಾನವನ್ನು ಹೊಂದಿರುವನೋ ಯಾವನು ಲೋಕಕ್ಕೆಲ್ಲಾ ಬುದ್ಧಿ ಹೇಳುವನೋ ಅವನೇ ದೊಡ್ಡವನು. ಅವನೇ ಪೂಜೆಗೆ ಅರ್ಹನು. ಅವನೇ ಉತ್ತಮ ಗುರುವು.

೪೮. ಎಲ್ಲಾ ಶ್ರೇಷ್ಠವಾದ ಪಾತ್ರಗಳಿಗಿಂತಲೂ ಪುರಾಣವನ್ನು ತಿಳಿದು ಕೊಂಡಿರುವವನು ಉತ್ತಮವಾದ ಪಾತ್ರನು. ನರಕಕ್ಕೆ ಬೀಳುವುದರ ದೆಸೆಯಿಂದ ಜನಗಳನ್ನು ಕಾಪಾಡುತ್ತಾನಾದುದರಿಂದ ಅವನು ಪಾತ್ರವೆಂದು ಹೇಳಲ್ಪಟ್ಟಿದ್ದಾನೆ.

ಪತನಾತ್ಪ್ರಾಯತೇ ಯಸ್ಮಾತ್ತಸ್ಮಾತ್ಪಾತ್ರಮುದಾಹೃತಂ ।
ಧನಂ ಧಾನ್ಯಂ ಹಿರಣ್ಯಂ ವಾ ವಾಸಾಂಸಿ ವಿವಿಧಾನಿ ಚ ॥ ೪೯ ॥

ಯೇ ಯಚ್ಛಂತಿ ಸುಪಾತ್ರಾಯ ತೇ ಯಾಂತಿ ಪರಮಾಂ ಗತಿಂ ।
ಗಾಶ್ಚೈವ ಮಹಿಷೀರ್ವಾಪಿ ಗಜಾನಶ್ವಾಂಶ್ಚ ಶೋಭನಾನ್ ॥ ೫೦ ॥

ಯಃ ಪ್ರಯಚ್ಛತಿ ಮುಖ್ಯಾಯ ತತ್ಪುಣ್ಯಸ್ಯ ಫಲಂ ಶೃಣು ।
ಅಕ್ಷಯಂ ಸರ್ವಲೋಕಾನಾಂ ಸೋಽಶ್ವಮೇಧಫಲಂ ಲಭೇತ್ ॥ ೫೧ ॥

ಮಹೀಂ ದದಾತಿ ಯಸ್ತಸ್ಮೈ ಕೃಷ್ಟಾಂ ಫಲವತೀಂ ಶುಭಾಂ ।
ಸ ತಾರಯತಿ ವೈ ವಂಶಾನ್ ದಶಪೂರ್ವಾನ್ದಶಾಪರಾನ್ ॥ ೫೨ ॥

ವಿಮಾನೇನ ಚ ದಿವ್ಯೇನ ವಿಷ್ಣುಲೋಕಂ ಸ ಗಚ್ಛತಿ ।
ನ ಯಜ್ಞೈಸ್ತುಷ್ಟಿಮಾಯಾಂತಿ ದೇವಾಃ ಪ್ರೋಕ್ಷಣಕೈರಪಿ ॥ ೫೩ ॥

---

೪೯. ಧನ ಧಾನ್ಯ ಸುವರ್ಣ ಬಟ್ಟೆ ಇನ್ನೂ ನಾನಾ ಬಗೆಯ ವಸ್ತುಗಳನ್ನು ಯಾರು ಇಂತಹ ಪುರಾಣ ಬಲ್ಲವನಾದ ಪಾತ್ರನಿಗೆ ಕೊಡುತ್ತಾರೆಯೋ ಅವರು ಉತ್ತಮಗತಿಯನ್ನು ಹೊಂದುತ್ತಾರೆ.

೫೦. ಕರೆಯುವ ಹಸುಗಳು, ಎಮ್ಮೆಗಳು, ಆನೆಗಳು, ಕುದುರೆಗಳು ಇವನ್ನು ಯಾವನು ಇಂತಹ ಉತ್ತಮಪಾತ್ರರಿಗೆ ಕೊಡುತ್ತಾನೆಯೋ ಆ ಪುಣ್ಯದ ಫಲವನ್ನು ಕೇಳು.

೫೧–೫೩. ಅವನಿಗೆ ಅಶ್ವಮೇಧ ಯಜ್ಞದ ಫಲವು ಬರುವುದಲ್ಲದೆ ಅಕ್ಷಯವಾದ ವೈಕುಂಠಾದಿ ಲೋಕಗಳು ಲಭಿಸುತ್ತವೆ. ಉತ್ತು ಹದ ಮಾಡಿ ಬೀಜವನ್ನು ಬಿತ್ತಿರುವ ಭೂಮಿಯನ್ನು ಆ ಪಾತ್ರನಿಗೆ ದಾನಮಾಡಿದರೆ ದಾನಮಾಡಿದವನು ತನ್ನ ಹಿಂದಿನ ಹತ್ತು ಪುರುಷರನ್ನೂ ಮುಂದಿನ ಹತ್ತು ಪುರುಷರನ್ನೂ ಉದ್ಧಾರ ಮಾಡಿಕೊಳ್ಳುತ್ತಾನೆ. ಅಲ್ಲದೆ ಉತ್ತಮವಾದ ವಿಮಾನದಿಂದ ಅವನು ವಿಷ್ಣು ಲೋಕಕ್ಕೆ ಹೋಗುತ್ತಾನೆ. ದೇವತೆಗಳೆ ಮುಂದೆ ಪುರಾಣ ಪುಸ್ತಕಗಳನ್ನು ಓದುವುದರಿಂದ ಅವರು ತೃಪ್ತಿಹೊಂದುವಂತೆ ಯಾಗಗಳಿಂದಾಗಲಿ ಅಭಿಷೇಕ ಗಳಿಂದಾಗಲಿ, ನೈವೇದ್ಯಗಳಿಂದಾಗಲಿ, ಹೂವಿನ ಪೂಜೆಗಳಿಂದಾಗಲಿ ತೃಪ್ತಿ ಹೊಂದುವುದಿಲ್ಲ.

ಬಲಿಭಿಃ ಪುಷ್ಪಪೂಜಾಭಿಃ ಯಥಾ ಪುಸ್ತಕವಾಚನೈಃ ।
ವಿಷ್ಣೋರಾಯತನೇ ಯಸ್ತು ಕಾರಯೇದ್ಧರ್ಮ ಪುಸ್ತಕಂ ॥ ೫೪ ॥

ದೇವ್ಯಾಶ್ಶಂಭೋರ್ಗಣೇಶಸ್ಯ ಅರ್ಕಸ್ಯ ಚ ತಥಾ ನೃಪಃ ।
ರಾಜಸೂಯಾಶ್ವಮೇಧಾಭ್ಯಾಂ ಫಲಂ ಪ್ರಾಪ್ನೋತಿ ಮಾನವಃ ॥ ೫೫ ॥

ಇತಿಹಾಸ ಪುರಾಣಾನಾಂ ಪುಣ್ಯಂ ಪುಸ್ತಕವಾಚನಂ ।
ಸರ್ವಾನ್ಕಾಮಾನವಾಪ್ನೋತಿ ಸೂರ್ಯಲೋಕಂ ಭಿನತ್ತಿ ಸಃ ॥ ೫೬ ॥

ಸೂರ್ಯಲೋಕಂ ಚ ಭಿತ್ವಾಸೌ ಬ್ರಹ್ಮಲೋಕಂ ಸ ಗಚ್ಛತಿ ।
ಸ್ಥಿತ್ವಾ ಕಲ್ಪಶತಂ ತತ್ರ ರಾಜಾ ಭವತಿ ಭೂತಳೇ ॥ ೫೭ ॥

ಅಶ್ವಮೇಧ ಸಹಸ್ರಸ್ಯ ಯತ್ಫಲಂ ಸಮುಪಾರ್ಜಿತಂ ।
ತತ್ಫಲಂ ಸಮವಾಪ್ನೋತಿ ದೇವಾಗ್ರೇ ಯೋ ಜಯಂ ಪಠೇತ್ ॥ ೫೮ ॥

---

೫೪–೫೫. ವಿಷ್ಣು ದುರ್ಗೆ ಲಕ್ಷ್ಮಿ ಶಂಭು ಗಣೇಶ ಸೂರ್ಯರ ದೇವಸ್ಥಾನಗಳಲ್ಲಿ ಓದಲು ಧರ್ಮ ಪುಸ್ತಕಗಳನ್ನಿಟ್ಟುಕೊಂಡಿದ್ದರೆ ಅವನಿಗೆ ರಾಜಸೂಯ ಅಶ್ವಮೇಧಗಳ ಫಲವು ಬರುತ್ತದೆ.

೫೬. ಇತಿಹಾಸ ಪುರಾಣಗಳ ಪುಸ್ತಕವನ್ನು ಆ ದೇವರುಗಳ ಎದುರಿಗೆ ಓದಿದರೆ ಆ ಇಷ್ಟಾರ್ಥಗಳನ್ನೆಲ್ಲಾ ಹೊಂದಿ ಸೂರ್ಯಲೋಕವನ್ನು ಭೇದಿಸಿಕೊಂಡು ಮೇಲಿನ ಲೋಕಕ್ಕೆ ಹೋಗುತ್ತಾನೆ.

೫೭. ಅವನು ಸೂರ್ಯಲೋಕವನ್ನು ಭೇದಿಸಿಕೊಂಡು ಅನಂತರ ಬ್ರಹ್ಮಲೋಕವನ್ನು ಹೊಂದುತ್ತಾನೆ. ಅಲ್ಲಿ ನೂರು ಕಲ್ಪಗಳವರೆಗೂ ಸುಖವನ್ನು ಅನುಭವಿಸಿ ಅನಂತರ ಭೂಮಿಯಲ್ಲಿ ರಾಜನಾಗಿ ಹುಟ್ಟುತ್ತಾನೆ.

೫೮. ಯಾವನು ದೇವರ ಎದುರಿಗೆ ಜಯವನ್ನು ( ಭಾರತವನ್ನು ) ಓದುತ್ತಾನೆಯೋ ಅವನು ಸಾವಿರ ಅಶ್ವಮೇಧ ಯಾಗಗಳ ಫಲವನ್ನು ಹೊಂದುತ್ತಾನೆ.

ತಸ್ಮಾತ್ಸರ್ವಪ್ರಯತ್ನೇನ ಕಾರ್ಯಂ ಪುಸ್ತಕವಾಚನಂ ।
ಇತಿಹಾಸ ಪುರಾಣಾನಾಂ ವಿಷ್ಣೋರಾಯತನೇ ಶುಭಂ ॥ ೫೯ ॥

ನಾನ್ಯತ್ಪ್ರೀತಿಕರಂ ವಿಷ್ಣೋಸ್ತಥಾನ್ಯೇಷಾಂ ದಿವೌಕಸಾಂ ॥ ೬೦ ॥

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಪತಿ ನಾರದ ಸಂವಾದೇ ವೃಕ್ಷ ಪ್ರಪಾ ಸತ್ಯ ತಪೋಧ್ಯಯನಾಖ್ಯಾನಂ ನಾಮ ಅಷ್ಟಾವಿಂಶೋಽಧ್ಯಾಯಸ್ಸಮಾಪ್ತಿಃ**

---

೫೯-೬೦. ಆದ್ದರಿಂದ ಸರ್ವಪ್ರಯತ್ನದಿಂದಲೂ ವಿಷ್ಣುವಿನ ದೇವಸ್ಥಾನದಲ್ಲಿ ಪುರಾಣೇತಿಹಾಸಗಳ ಪುಸ್ತಕಗಳನ್ನು ಓದಬೇಕು. ವಿಷ್ಣುವಿಗಾಗಲಿ, ದೇವತೆಗಳಿಗಾಗಲಿ ಇದಕ್ಕಿಂತಲೂ ಪ್ರೀತಿಕರವಾದ ಕೆಲಸವು ಮತ್ತೊಂದಿಲ್ಲ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಪತಿ ನಾರದರ ಸಂವಾದದಲ್ಲಿ ಮರ ಬೆಳೆಸುವುದು, ನೀರಿನ ಆಸರೆಯನ್ನುಂಟುಮಾಡುವುದು, ಸತ್ಯವನ್ನು ಹೇಳುವುದು, ತಪಸ್ಸು ಮಾಡುವುದು, ಅಧ್ಯಯನ ಮಾಡುವುದು, ಪುರಾಣ ಓದುವುದು ಎಂಬ ಇಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಏಕೋನತ್ರಿಂಶೋಽಧ್ಯಾಯಃ ॥



॥ ಮಹಾದೇವ ಉವಾಚ ॥

**ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಂ ।**
**ಪುರಾಣಂ ಪರಮಂ ಪುಣ್ಯಂ ಸರ್ವಪಾಪಹರಂ ಶುಭಂ ॥ ೧ ॥**

**ಕುಮಾರೇಣ ಚ ಲೋಕಾನಾಂ ನಮಸ್ಕೃತ್ಯ ಪಿತಾಮಹಂ ।**
**ಪ್ರೋಕ್ತಂ ಚೇದಂ ಮಮಾಖ್ಯಾನಂ ದೇವರ್ಷೇ ಬ್ರಹ್ಮಸೂನುನಾ ॥ ೨ ॥**

॥ ಸನತ್ಕುಮಾರ ಉವಾಚ ॥

**ಗತೋಽಹಂ ಧರ್ಮರಾಜಾನಂ ದ್ರಷ್ಟುಂ ಸಂಪೂಜಿತೋ ಮುದಾ ।**
**ಸ್ತುತಿಭಿಃ ಪರಯಾ ಭಕ್ತ್ಯಾ ತೇನೋಕ್ತೋಽಸ್ಮಿ ಸುಖಾಸನೇ ॥ ೩ ॥**

---

## ಇಪ್ಪತ್ತೊಂಭತ್ತನೆಯ ಅಧ್ಯಾಯವು



೧. ಮಹಾದೇವನು ಹೇಳಿದನು– ಪುರಾಣವು ಬಹು ಪುಣ್ಯಕರವಾದುದು ಎಲ್ಲಾ ಪಾಪಗಳನ್ನೂ ನಾಶಮಾಡುತ್ತದೆ. ಮಂಗಳಪ್ರದವಾದುದು. ಈ ವಿಷಯದಲ್ಲಿ ಒಂದು ಹಿಂದಿನ ಕಥೆಯನ್ನು ಹೇಳುತ್ತೇನೆ, ಕೇಳು.

೨. ಒಂದು ಸಾರಿ ಬ್ರಹ್ಮನ ಮಗನಾದ ಸನತ್ಕುಮಾರನು ಸರ್ವಲೋಕಗಳಿಗೂ ದೊಡ್ಡವನಾದ ತಂದೆಯಾದ ಬ್ರಹ್ಮನನ್ನು ನಮಸ್ಕರಿಸಿ ಕೇಳಲು ಬ್ರಹ್ಮನು ನನ್ನ ಚರಿತ್ರೆಯನ್ನು ಹೇಳಿದನು.

೩. ಸನತ್ಕುಮಾರನು ಹೇಳಿದನು– ಎಲೈ ತಂದೆಯೇ! ಒಂದು ಸಾರಿ ಧರ್ಮರಾಜನನ್ನು ನೋಡಲು ನಾನು ಹೋದೆನು. ಆ ಧರ್ಮರಾಜನು ನನ್ನನ್ನು ಗೌರವಿಸಿ ಪೂಜಿಸಿ ಸುಖಾಸನದಲ್ಲಿ ಕೂರಿಸಿದನು.

ಮಯಾ ತತ್ರೋಪವಿಷ್ಟೇನ ದೃಷ್ಟಂ ಕಿಂಚಿನ್ಮಹಾದ್ಭುತಂ ।
ಕಾಂಚನೇನ ವಿಮಾನೇನ ವೈಡೂರ್ಯಕೃತವೇದಿನಾ ॥ ೪ ॥

ಮಣಿಮುಕ್ತಾವಿಚಿತ್ರೇಣ ಕಿಂಕಿಣೀಜಾಲಶೋಭಿನಾ ।
ಆಗತಂ ಪುರುಷಂ ತತ್ರ ಆಸನಾರ್ದ್ಧೇನ ಸತ್ತಮ ॥ ೫ ॥

ಸ ಸಂಭ್ರಮಂ ಸಮುತ್ಥಾಯ ದೃಷ್ಟ್ವಾ ಧರ್ಮಃ ಸ್ವಯಂ ವಿಭುಃ ।
ಗೃಹೀತ್ವಾ ದಕ್ಷಿಣೇ ಪಾಣೌ ಪೂಜಿತೋಽರ್ಘೇಣ ವೈ ತತಃ ॥ ೬ ॥

ಶಿರಸ್ಯಾಘ್ರಾಯ ದೇವೇಶ ಪುರಸ್ಸ್ಥಾಪ್ಯ ತತಃ ಪರಂ ।
ಪೂಜಯಿತ್ವಾ ತು ತಂ ಧರ್ಮಃ ಇದಂ ವಾಕ್ಯಮುವಾಚ ಹ ॥ ೭ ॥

॥ ಧರ್ಮ ಉವಾಚ ॥

ಸುಸ್ವಾಗತಂ ಧರ್ಮದರ್ಶಿನ್ ಪ್ರೀತೋಽಸ್ಮಿ ದರ್ಶನಾತ್ತವ ।
ಸಮೀಪೇ ಮಮ ತಿಷ್ಠಸ್ವ ಕಿಂಚಿತ್ ಜ್ಞಾನಂ ವದಸ್ವ ಮೇ ॥
ತತ್ಪುನರ್ಯಾಸ್ಯಸೇ ಸ್ಥಾನಂ ಯತ್ರ ಬ್ರಹ್ಮಾ ವ್ಯವಸ್ಥಿತಃ ॥ ೮ ॥

---

೪–೬. ನಾನು ಆ ಧರ್ಮರಾಜನ ಸಭೆಯಲ್ಲಿ ಕುಳಿತಿರಲು ಒಂದು ಆಶ್ಚರ್ಯವನ್ನು ನೋಡಿದೆನು. ಚಿನ್ನದ ಒಂದು ವಿಮಾನವು ಬಂದಿತು. ಅದರೊಳಗೆ ಕುಳಿತುಕೊಳ್ಳುವುದಕ್ಕೆ ವೈಡೂರ್ಯದ ಜಗುಲಿಯನ್ನು ಹಾಕಿದ್ದರು. ಅದಕ್ಕೆ ಮುತ್ತಿನ ಮಣಿಗಳು, ಗಂಟೆಗಳು, ಗೆಜ್ಜೆಗಳು, ಇವನ್ನು ಹಾಕಿ ಅಲಂಕರಿಸಿದ್ದರು. ಅದರಲ್ಲಿ ಕುಳಿತು ಒಬ್ಬ ಪುರುಷನು ಬಂದನು. ಎಲೈ ದೇವದೇವನಾದ ಸ್ವಾಮಿಯೇ ! ಹೀಗೆ ಬಂದ ಮನುಷ್ಯನನ್ನು ನೋಡಿ ಯಮಧರ್ಮನು ಸಡಗರದಿಂದ ಎದ್ದು ಆತನನ್ನು ಎದುರುಗೊಂಡು ಬಲಗೈ ಹಿಡಿದುಕೊಂಡು ಕರೆದುಕೊಂಡು ಬಂದು ಅರ್ಘ್ಯಾದಿಗಳನ್ನು ಕೊಟ್ಟು ಪೂಜಿಸಿದನು.

೭. ಧರ್ಮನು ಅವನ ತಲೆಯನ್ನು ಮೂಸಿನೋಡಿ ತನ್ನ ಎದುರಿಗೆ ಕೂರಿಸಿಕೊಂಡು ಪೂಜಿಸಿದನು. ಅನಂತರ ಅವನನ್ನು ಕುರಿತು ಇಂತೆಂದನು.

೮. ಧರ್ಮರಾಜನು ಹೇಳಿದನು– ಎಲೈ ಧರ್ಮಜ್ಞನೇ ! ನಿನಗೆ ಸುಸ್ವಾಗತವೇ ? ನಿನ್ನ ದರ್ಶನದಿಂದ ನನಗೆ ಬಹು ಸಂತೋಷವಾಯಿತು. ನನ್ನ ಹತ್ತಿರದಲ್ಲಿ ಕುಳಿತುಕೋ. ನನಗೆ ಯಾವುದಾದರೂ ಒಂದು ಜ್ಞಾನವನ್ನು ಹೇಳಿಕೊಡು. ಧರ್ಮವನ್ನು ಉಪದೇಶಿಸು. ಅನಂತರ ಬ್ರಹ್ಮನಿರುವ ಸ್ಥಾನಕ್ಕೆ ಹೋಗುತ್ತೀಯಂತೆ.

|| ಸನತ್ಕುಮಾರ ಉವಾಚ ||

ಇತ್ಯುಕ್ತೇ ಚ ತತಶ್ಚಾನ್ಯೋ ವಿಮಾನವರಮಾಸ್ಥಿತಃ ।
ಆಗತಃ ಪುರುಷೋ ದೇವ ಯತ್ರ ತಿಷ್ಠತಿ ಧರ್ಮರಾಟ್ || ೯ ||

ಸಂಪೂಜಿತೋ ವಿಮಾನಸ್ಥಃ ಪ್ರಶ್ರಯಾವನತೇನ ಚ ।
ಸಾಮಪೂರ್ವಂ ತಥೋಕ್ತ್ವಾ ತು ಯಥಾ ಪೂರ್ವನರಸ್ತ್ವಯಂ || ೧೦ ||

ಸ್ವಯಂ ಧರ್ಮೇಣ ವೈ ಬ್ರಹ್ಮನ್ ದೃಷ್ಟ್ವಾ ಪೂಜಾ ಕೃತಾ ತಯೋಃ ।
ತತ್ರ ಮೇ ವಿಸ್ಮಯೋ ಜಾತಃ ಪೃಷ್ಟೋ ಧರ್ಮೋ ಮಯಾ ತತಃ || ೧೧ ||

ನರಸ್ತ್ವವ ಹಿ ಸಂಕಾಶೋ ಯೋಽಯಂ ಪೂರ್ವಮಿಹಾಗತಃ ।
ಕಿಮನೇನ ಕೃತಂ ಕರ್ಮ ಯಸ್ಯ ತುಷ್ಟೋ ಭವಾನ್ಭೃಶಂ || ೧೨ ||

ಅತ್ರ ಮೇ ಕೌತುಕಂ ಜಾತಂ ಕೃತಾ ಹಿ ಸ್ವಯಮೇವ ತು ।
ಯದಸ್ಯ ಭವತಾ ಪೂಜಾ ಸವಿಸ್ಮಯಮನಂತರಂ || ೧೩ ||

---

೯. ಸನತ್ಕುಮಾರನು ಹೇಳಿದನು— ಧರ್ಮರಾಜನು ಹೀಗೆ ಹೇಳುತ್ತಿರಲು ಮತ್ತೊಬ್ಬನು ಇಂತಹುದಾದ ಮತ್ತೊಂದು ವಿಮಾನದಲ್ಲಿ ಕುಳಿತು ಆ ಧರ್ಮ ರಾಜನಿದ್ದಲ್ಲಿಗೆ ಬಂದನು.

೧೦. ಆತನನ್ನು ನೋಡಿ ಈ ಧರ್ಮನು ಪೂಜೆಮಾಡಿ ಒಳ್ಳೆಯ ಮಾತು ಗಳನ್ನಾಡಿ ಹಿಂದಿನವನಂತೆಯೇ ಅವನನ್ನು ಗೌರವಿಸಿದನು.

೧೧. ಧರ್ಮರಾಜನು ತಾನಾಗಿಯೇ ಅವರನ್ನು ಗೌರವಿಸಿದುದನ್ನು ನೋಡಿ ನನಗೆ ಬಹು ಆಶ್ಚರ್ಯವಾಯಿತು. ಆಗ ನಾನು ಧರ್ಮರಾಜನನ್ನು ಇಂತೆಂದು ಪ್ರಶ್ನಿಸಿದನು.

೧೨. ಎಲೈ ಧರ್ಮನೆ! ನಿನ್ನ ಬಳಿಗೆ ಮೊದಲು ಬಂದ ನಿನ್ನಂತೆ ಇರುವ ಆ ಮನುಷ್ಯನಾರು? ಈತನಾರು? ಇವರು ಮಾಡಿರುವ ಧರ್ಮಗಳಾವುವೂ ಏನು? ನೀನು ಅವರ ವಿಷಯದಲ್ಲಿ ಸಂತೋಷಗೊಳ್ಳಲು ಕಾರಣವೇನು?

೧೩. ಮೊದಲನೆಯವನಿಗೆ ಗೌರವಮಾಡಿದಾಗಲೆ ನನಗೆ ಬಹು ಆಶ್ಚರ್ಯ ಉಂಟಾಯಿತು. ಪೂಜೆಮಾಡಿದ ಮೇಲಂತೂ ಬಹುವಾಗಿ ಭ್ರಾಂತನಾದೆನು.

ತಥೈವಾಸ್ಯ ಕೃತಾ ಪೂಜಾ ದ್ವಿತೀಯಸ್ಯ ನರಸ್ಯ ತು ।
ಮನ್ಯೇಽಹಂ ಶುಭಕರ್ಮಾಣೌ ವಿಮಾನವರಸತ್ತಮೌ || ೧೪ ||

ಯಸ್ತ್ವಮಾಭ್ಯಾಂ ಸ್ವಯಂ ಪೂಜಾಂ ಕುರುಷೇ ಧರ್ಮಕಾರಣಾತ್ ।
ಬ್ರಹ್ಮ ವಿಷ್ಣು ಶಿವಾದ್ಯೈಸ್ತು ಪೂಜ್ಯಸೇ ತ್ವಂ ಸದಾಽನಿಶಂ || ೧೫ ||

ಯಸ್ಯೇ ದೃಕ್ಪರಮಂ ಪುಣ್ಯಂ ಕಿಮೇತೌ ಕರ್ಮ ಚಕ್ರತುಃ ।
ಕಥ್ಯತಾಂ ಮಮ ಸರ್ವಜ್ಞ ಫಲಂ ದಿವ್ಯಮವಾಪತುಃ || ೧೬ ||

ತಚ್ಛ್ರುತ್ವಾ ಸ ತು ಮಾಂ ಪ್ರಾಹ ಶೃಣು ಕರ್ಮ ತಯೋಃ ಕೃತಂ ।
ಯತ್ಕೃತ್ವಾ ಚಾರ್ಹತಾಂ ಯಾತೌ ತಚ್ಛೃಣುಷ್ವ ಮಹಾಮತೇ || ೧೭ ||

|| ಧರ್ಮ ಉವಾಚ ||

ವೈದಿಶಂ ನಾಮ ನಗರಂ ಪೃಥಿವ್ಯಾಮಸ್ತಿ ವಿಶ್ರುತಂ ।
ತತ್ರಾಭೂತ್ಪೃಥಿವೀಪಾಲೋ ಧರಾಪಾಲ ಇತಿ ಶ್ರುತಃ ।
ಕಸ್ಮಿನ್ಕಾಲೇ ಪುರಾ ದೇವೀ ಶಶಾಪ ಸ್ವಗಣಂ ಕ್ರುಧಾ || ೧೮ ||

---

೧೪. ಮೊದಲನೆಯವನಂತೆಯೇ ಎರಡನೆಯವನಿಗೂ ನೀನು ಪೂಜೆಯನ್ನು ಮಾಡಿದೆ. ಅನೇಕ ಧರ್ಮಗಳನ್ನು ಬಲ್ಲ ನೀನು ಅವರಿಗೆ ಪೂಜೆಯನ್ನು ಮಾಡಿದುದರಿಂದಲೇ ಆ ವಿಮಾನದಲ್ಲಿದ್ದವರು ಒಳ್ಳೆಯ ಪುಣ್ಯವನ್ನು ಮಾಡಿದವರೆಂದು ನನಗೆ ತೋರುತ್ತದೆ.

೧೫–೧೬. ಬ್ರಹ್ಮ ಶಿವ ವಿಷ್ಣುಗಳೂ ಕೂಡ ನಿನ್ನನ್ನು ಯಾವಾಗಲೂ ಪೂಜಿಸುವರು. ಅಂತಹ ನೀನು ಅವರನ್ನು ಪೂಜಿಸಬೇಕಾದರೆ ಅವರು ಎಂತಹ ಪೂಜೆಯನ್ನು ಮಾಡಿರಬೇಕು ? ಎಲೈ ಸ್ವಾಮಿಯೇ ! ಅವರು ಎಂತಹ ಸ್ಥಾನವನ್ನು ಹೊಂದಿದರು ? ಎಂಬುದನ್ನು ಸರ್ವಜ್ಞನಾದ ನೀನು ಹೇಳು.

೧೭. ಆ ಮಾತನ್ನು ಕೇಳಿ ಧರ್ಮರಾಜನು ಹಾಗಾದರೆ ಅವರ ಕರ್ಮವನ್ನು ಹೇಳುತ್ತೇನೆ ಕೇಳು. ಅವರು ಪೂಜೆಯನ್ನು ಹೊಂದಲು ಮಾಡಿದ ಕೆಲಸವೇನು ಎಂಬುದನ್ನು ಹೇಳುವೆನು ಕೇಳು.

೧೮. ಧರ್ಮನು ಹೇಳಿದನು– ಭೂಲೋಕದಲ್ಲಿ ವಿದಿಶೆಯೆಂಬುದೊಂದು ಪಟ್ಟಣವಿರುವುದು. ಪಾರ್ವತಿಯು ತನ್ನ ಗಣಗಳಿಗೆಲ್ಲಾ ಶಾಪವನ್ನು ಕೊಟ್ಟಾಗ ಅಲ್ಲಿ ಧರಾಪಾಲನೆಂಬ ಅರಸನು ರಾಜ್ಯವಾಳುತ್ತಿದ್ದನು.

|| ದೇವ್ಯುವಾಚ ||

ಮದೃತೇತ್ರ ಪರಾ ನಾರೀ ಭರ್ತುರ್ಯನ್ಮೇ ನಿವೇಶಿತಾ ।
ತಸ್ಮಾದ್ದ್ವಾದಶ ವರ್ಷಾಣಿ ಜಂಬುಕಸ್ತ್ವಂ ಭವಿಷ್ಯಸಿ || ೧೯ ||

|| ಧರ್ಮ ಉವಾಚ ||

ಇತ್ಯುಕ್ತಸ್ಸ ಚ ಬಭ್ರಾಮ ಜಂಬುಕೋ ಮೇದಿನೀತಲಂ ।
ವೇತಸೀ ವೇತ್ರ ವತ್ಯೋಸ್ತು ಸಂಗಮೇ ಲೋಕವಿಶ್ರುತೇ || ೨೦ ||

ಶಾಪಾಂತೋ ಭವಿತಾ ಪುತ್ರ ಇತ್ಯುಕ್ತೋ ಗಿರಿಕನ್ಯಯಾ ।
ತತ್ರ ಚಾನಶನಂ ಕೃತ್ವಾ ಕ್ಷೇತ್ರೇ ಪ್ರಾಣಾಂಸ್ತತೋತ್ಯಜತ್ || ೨೧ ||

ದಿವ್ಯರೂಪವಪುರ್ಭೂತ್ವಾ ಜಗಾಮ ವಿಷ್ಣುಸನ್ನಿಧೌ ।
ತತ್ರಾಶ್ಚರ್ಯಂ ಮಹದ್ದೃಷ್ಟ್ವಾ ಧರಾಪಾಲೋ ಮಹೀಪತಿಃ || ೨೨ ||

---

೧೯. ದೇವಿಯು ಹೇಳಿದಳು- ಆಗ ಈ ಧರಾಪಾಲನನ್ನು ಕುರಿತು ಎಲೈ ಧರಾಪಾಲನೇ ! ನನ್ನ ಗಂಡನಾದ ಶಿವನ ಜೊತೆಯಲ್ಲಿ ನನ್ನನ್ನು ಬಿಟ್ಟು ನೀನೇ ಬೇರೆ ಹೆಂಗಸನ್ನು ಇಟ್ಟಿರುವುದರಿಂದ ಹನ್ನೆರಡು ವರ್ಷಗಳವರೆಗೂ ನರಿಯಾಗಿ ದುಃಖಿಸುತ್ತಿರು.

೨೦. ಧರ್ಮನು ಹೇಳಿದನು– ದೇವಿಯು ಈ ರೀತಿ ಶಪಿಸಲು ಅವನು ನರಿಯಾಗಿ ಎಲ್ಲೆಲ್ಲಿಯೂ ಸುತ್ತುತ್ತಿದ್ದನು. ಆ ದೇವಿಯು ಕೃಪೆಯಿಂದ ಆತನಿಗೆ ಎಲೈ ಧರಾಪಾಲನೆ ! ನೀನು ಹೀಗೆ ಸುತ್ತುತ್ತ ಹೋಗುತ್ತಿರುವಲ್ಲಿ ವೇತಸೀ ವೇತ್ರವತಿಗಳ ಸಂಗಮಕ್ಕೆ ಹೋದಾಗ ಶಾಪವು ಕೊನೆಗಾಣುತ್ತದೆ. ಎಂದು ಹೇಳಿದ್ದಳು.

೨೧. ಕೊನೆಗೆ ಆ ಸಂಗಮವನ್ನು ಹೊಂದಿ ಅಲ್ಲಿ ಆ ನರಿಯಾದ ಧರಾ ಪಾಲನಿಗೆ ಜ್ಞಾನವುಂಟಾಗಲು ಆ ಜಾಗದಲ್ಲಿ ಉಪವಾಸವಿದ್ದು ಪ್ರಾಣಗಳನ್ನು ಬಿಟ್ಟು ಉತ್ತಮವಾದ ಶರೀರವನ್ನು ಹೊಂದಿ ವಿಷ್ಣುವಿನ ಬಳಿಗೆ ಹೋದನು.

೨೨–೨೪. ಆ ವಿಷ್ಣುವಿನ ಹತ್ತಿರ ಬಂದು ಆಶ್ಚರ್ಯವನ್ನು ನೋಡಿ ಆ ಧರಾ ಪಾಲನು ತಾನೂ ದೇವಸ್ಥಾನವನ್ನು ಕಟ್ಟಿಸಬೇಕೆಂದು ತಿಳಿದು ಉತ್ತಮವಾದ

ವಿಷ್ಣೋರಾಯತನಂ ಕೃತ್ವಾ ಸ್ಥಾಪಯಾಮಾಸ ತಂ ವಿಭುಂ ।
ತಸ್ಮಿನ್ಪುರೇ ನರಾನ್ಸರ್ವಾನ್ಸನ್ನಿಯೋಜ್ಯಾಸ್ಯ ವೀಕ್ಷಣೇ ॥ ೨೩ ॥

ಶುಭಮಾಯತನಂ ವಿಷ್ಣೋಸ್ತಸ್ಮಿನ್ಗ್ರಾಮೇ ಸಭಾಜನೈಃ ।
ಪೂರ್ಣಂ ತು ಬ್ರಾಹ್ಮಣಾದೀನಾಂ ಪೂಜಯಿತ್ವಾ ಕದಂಬಕಂ ॥ ೨೪ ॥

ಇತಿಹಾಸ ಪುರಾಣಜ್ಞಂ ವಾಚಕಂ ತು ವಿಶೇಷತಃ ।
ಪೂಜಯಿತ್ವಾ ದ್ವಿಜಶ್ರೇಷ್ಠಂ ವಿದ್ಯಾಶ್ರೇಷ್ಠಂ ಮಹಾಮತಿಃ ॥ ೨೫ ॥

ಪುಸ್ತಕಂ ಚಾಪಿ ಸಂಪೂಜ್ಯ ಗಂಧಪುಷ್ಪಾದಿಭಿಃ ಕ್ರಮಾತ್ ।
ತತಸ್ತಮಾಹ ರಾಜಾಸೌ ವಾಚಕಂ ವಿನಯಾನ್ವಿತಃ ॥ ೨೬ ॥

ಯನ್ಮಯಾಯತನಂ ವಿಷ್ಣೋಃ ಕಾರಿತಂ ಚ ತವಾಗ್ರತಃ ।
ಚಾತುರ್ವರ್ಣ್ಯಮಿದಂ ಚಾಪಿ ಶ್ರೋತುಕಾಮಂ ಕದಂಬಕಂ ॥ ೨೭ ॥

---

ದೇವಸ್ಥಾನವನ್ನು ಕಟ್ಟಿಸಿ ವಿಷ್ಣುವನ್ನು ಸ್ಥಾಪಿಸಿದನು. ಆ ಊರಿನಲ್ಲಿರುವವರನ್ನೆಲ್ಲಾ ಆ ದೇವರನ್ನು ನೋಡುವಂತೆ ಅಪ್ಪಣೆಮಾಡಿದನು. ಮತ್ತು ಆ ದೇವಸ್ಥಾನಕ್ಕೆ ಬೇಕಾದುವೆಲ್ಲವನ್ನೂ ಮಾಡಿಸಿ ಪೂಜೆಗೂ ಅನುಕೂಲಪಡಿಸಿ ಬ್ರಾಹ್ಮಣರಿಗೆಲ್ಲಾ ವೃತ್ತಿಯನ್ನು ಕಲ್ಪಿಸಿ ಆ ಊರಿನಲ್ಲಿ ಬ್ರಾಹ್ಮಣರು ಬಹುವಾಗಿ ಬರುವಂತೆ ಮಾಡಿ ತುಂಬಿಸಿದನು.

೨೫. ಇತಿಹಾಸ ಪುರಾಣಗಳನ್ನು ಬಲ್ಲ ವಿದ್ವಾಂಸನೂ ಓದುವುವರಲ್ಲಿ ನಿಪುಣನೂ ಆದ ಬುದ್ಧಿವಂತನಾದ ಒಬ್ಬ ಬ್ರಾಹ್ಮಣನನ್ನು ಗೊತ್ತುಮಾಡಿ ಅವನಿಗೆ ಬೇಕಾದುದೆಲ್ಲವನ್ನೂ ಕಲ್ಪಿಸಿದದು.

೨೬. ಒಂದು ಪುಸ್ತಕವನ್ನು ತರಿಸಿ ಅವನಿಗೆ ಕೊಟ್ಟು ಆ ಪುಸ್ತಕವನ್ನು ಹೂವು ಗಂಧಗಳಿಂದ ಪೂಜಿಸಿ ಅಲ್ಲಿ ಪುರಾಣ ಹೇಳುವಂತೆ ಆ ಬ್ರಾಹ್ಮಣನನ್ನು ಗೊತ್ತುಮಾಡಿ ಅವನನ್ನು ಕುರಿತು ವಿನಯದಿಂದ ಇಂತೆಂದನು.

೨೭. ಎಲೈ ಬ್ರಾಹ್ಮಣಶ್ರೇಷ್ಠನೆ? ನಿನ್ನೆದುರಿಗೆ ಈ ವಿಷ್ಣುವಿನ ದೇವ ಸ್ಥಾನದಲ್ಲಿ ನಾಲ್ಕು ವರ್ಣದವರೂ ಧರ್ಮಪ್ರಧಾನವಾದ ಪುರಾಣವನ್ನು ಕೇಳ ಬೇಕೆಂದು ಗುಂಪುಕೂಡಿ ಸೇರಿದ್ದಾರೆ. ಆದ್ದರಿಂದ ನೀನು ಈ ಪುಸ್ತಕವನ್ನು ಓದಿ ಅರ್ಥವನ್ನು ಹೇಳಿ ಧರ್ಮವನ್ನು ತಿಳಿಸು.

ತಿಷ್ಠ ತಿಷ್ಠ ದ್ವಿಜಶ್ರೇಷ್ಠ ಕುರು ಪುಸ್ತಕವಾಚನಂ ।
ಯಾವತ್ಸಂವತ್ಸರಂ ವಿಪ್ರ ಪ್ರಗೃಹ್ಯ ವೃತ್ತಿಮುತ್ತಮಾಂ ॥ ೨೮ ॥

ಸ್ವರ್ಣನಿಷ್ಕಶತಂ ಚಾತ್ರ ತತೋ ದಾಸ್ಯೇ ತಥಾ ಪರಂ ।
ಪೂರ್ಣೇ ವರ್ಷೇ ದ್ವಿಜಶ್ರೇಷ್ಠ ಶ್ರೇಯೋರ್ಥಮಹಮಾತ್ಮನಃ ॥ ೨೯ ॥

ಏವಂ ಪ್ರವರ್ತಿತಂ ತತ್ರ ಪುಣ್ಯಂ ಪುಸ್ತಕವಾಚನಂ ।
ವರ್ಷಸಂಗತಮಾತ್ರೇ ತು ತಥಾ ಚ ಮುನಿಸತ್ತಮ ॥ ೩೦ ॥

ಅಥಾಯುಷಃ ಕ್ಷಯಾಚ್ಚಾಹಂ ಕಾಲಧರ್ಮಮುಪೇಯಿವಾನ್ ।
ಮಯಾಚಾಸ್ಯ ವಿಮಾನಂ ಹಿ ವಿಷ್ಣುನಾ ಪ್ರೇಷಿತಂ ದಿವಃ ॥ ೩೧ ॥

ಇತ್ಯೇಷಾ ಕರ್ಮಣೋ ವ್ಯುಷ್ಟಿಃ ಪುಣ್ಯಮಾಖ್ಯಾನ ಸಂಜ್ಞಕಂ ।
ಶ್ರುತಂ ಪಾದ್ಮಂ ಮಹತ್ಪುಣ್ಯಂ ಪವಿತ್ರಂ ಪಾಪನಾಶನಂ ॥ ೩೨ ॥

---

೨೮–೨೯. ನಾನು ಕಲ್ಪಿಸಿರುವ ಜೀವನವನ್ನು ತೆಗೆದುಕೊಂಡು ಈ ಪುರಾಣವನ್ನು ಹೇಳು. ನಿನಗೆ ಉತ್ತಮವಾದ ವೃತ್ತಿಯನ್ನು ಕಲ್ಪಿಸಿದ್ದೇನೆ. ಒಂದು ವರ್ಷವಾದ ಮೇಲೆ ನನಗೆ ಶ್ರೇಯಸ್ಸುಂಟಾಗುವುದಕ್ಕೋಸ್ಕರ ನೂರು ವರಹಗಳನ್ನು ಬೇರೆ ನಿನಗೆ ಕೊಟ್ಟು ಸಂಭಾವಿಸುತ್ತೇನೆ.

೩೦. ಈ ರೀತಿಯಾಗಿ ಆ ದೇವಸ್ಥಾನದಲ್ಲಿ ಪುಣ್ಯವನ್ನು ಉಂಟುಮಾಡುವ ಪುರಾಣಪಠನವು ಆರಂಭಿಸಲ್ಪಟ್ಟಿತು. ಹಾಗೆಯೇ ವರ್ಷಕಾಲವೂ ಕಳೆಯಿತು.

೩೧-೩೨. ಅನಂತರ ಆಯುಸ್ಸು ಕಳೆಯಲು ನಾನು ಮೃತನಾದೆನು. ಅನಂತರ ವಿಷ್ಣುವು ಸ್ವರ್ಗದಿಂದ ವಿಮಾನವನ್ನು ತರಿಸಿ ನನ್ನನ್ನು ಕೂರಿಸಿ ಕಳುಹಿಸಿದನು. ಪುಣ್ಯಪ್ರದವಾದ ಈ ಕಥೆಯನ್ನು ವಿವರಿಸಿದ್ದೇನೆ. ನಾನು ಮಹಾಪುಣ್ಯಪ್ರದವಾದ ಪಾಪನಾಶಕವಾದ ಪದ್ಮಪುರಾಣವನ್ನು ಕೇಳಿದೆನು.

ಗಂಧಪುಷ್ಪೋಪಹಾರೈಸ್ತು ನ ತುಷ್ಟಿರ್ಜಾಯತೆ ತಥಾ ।
ದೇವಾನಾಮಿಹ ಸರ್ವೇಷಾಂ ಪುರಾಣಶ್ರವಣಾದ್ಯಥಾ ॥ ೩೩ ॥

ಸ್ವರ್ಣಂ ಹಿರಣ್ಯವಸ್ತ್ರಾಣಾಂ ವಸ್ತೂನಾಂ ಚಾಪಿ ಕೃತ್ಸ್ನಶಃ ।
ಗ್ರಾಮಾಣಾಂ ನಗರಾಣಾಂ ಚ ದಾನಾತ್ತುಷ್ಟಿರ್ಭವೇನ್ನ ಹಿ ॥ ೩೪ ॥

ಯಥಾ ಸ್ಯಾದ್ಧರ್ಮಶ್ರವಣಾತ್ಪ್ರೀತಿಸ್ಸರ್ವದಿವೌಕಸಾಂ ।
ಇತಿಹಾಸ ಪುರಾಣಾನಾಂ ಶ್ರವಣೇ ಮುನಿಸತ್ತಮ ॥ ೩೫ ॥

ನ ತಥಾ ಮೇ ಮಹಾಪ್ರೀತಿಃ ಶ್ರಾದ್ಧೇ ಸರ್ವಾರ್ಥಕಾಮಿಕೇ ।
ಕನ್ಯಾದಾನೇ ಮಹಾಪ್ರೀತಿರ್ಮಮ ಸ್ಯಾದ್ವಿಪ್ರಸತ್ತಮ ॥ ೩೬ ॥

ನ ತಥಾ ರೋಚತೇ ಸಾ ಚ ಯಥಾ ಪುಸ್ತಕವಾಚನಾತ್ ।
ಅಥ ಕಿಂ ಬಹುನೋಕ್ತೇನ ನಾನ್ಯತ್ಪ್ರೀತಿಕರಂ ಮಮ ॥ ೩೭ ॥

---

೩೩. ಪುರಾಣವನ್ನು ಕೇಳುವುದರಿಂದ ದೇವತೆಗಳಿಗಾಗಲಿ, ಮನುಷ್ಯರಿಗಾಗಲಿ ಉಂಟಾಗುವ ಸಂತೋಷವು ಗಂಧ ಹೂ ತಿಂಡಿ ಮುಂತಾದುವುಗಳಿಂದ ಉಂಟಾಗುವ ಸಂತೋಷಕ್ಕಿಂತ ಮಿಗಿಲಾದುದು.

೩೪. ದೇವತೆಗಳಿಗೆ ಧರ್ಮವನ್ನು ಕೇಳುವುದರಿಂದ ಉಂಟಾಗುವಷ್ಟು ಪ್ರೀತಿಯು ಒಳ್ಳೆಯ ಚಿನ್ನ, ಬಟ್ಟೆ ಮಿಕ್ಕ ಪದಾರ್ಥಗಳು, ಗ್ರಾಮ, ನಗರಿ, ಇವುಗಳನ್ನು ದಾನಕೊಟ್ಟರೂ ಉಂಟಾಗುವುದಿಲ್ಲ.

೩೫–೩೭. ಇತಿಹಾಸ ಪುರಾಣಗಳನ್ನು ಕೇಳಿದರೆ ಉಂಟಾಗುವಷ್ಟು ಸಂತೋಷವು ನನಗೆ ಎಲ್ಲವನ್ನೂ ಕೊಡುವ ಶ್ರಾದ್ಧದಲ್ಲಿ ಕೂಡಾ ಉಂಟಾಗುವುದಿಲ್ಲ ಎಲೈ ಸನತ್ಕುಮಾರನೇ ! ನನಗೆ ಕನ್ಯಾದಾನದಲ್ಲಿ ಬಹು ಪ್ರೀತಿಯುಂಟಾಗುತ್ತದೆ. ಆದರೆ ಈ ಪುರಾಣ ವಾಚನದ ಪ್ರೀತಿಯು ಅದಕ್ಕಿಂತ ಹೆಚ್ಚಾಗಿರುವುದು.

ಪುಣ್ಯಾಖ್ಯಾನಮೃತೇ ವಿಪ್ರ ಗುಹ್ಯಮೇತತ್ಪ್ರಕೀರ್ತಿತಂ ।
ಯಶ್ಚಾಯಮಪರೋ ವಿಪ್ರ ಇಹಾಯಾತೋ ನರೋತ್ತಮಃ || ೩೮ ||

ಸಂಗತ್ಯಾನುಗತಶ್ಚಾಯಂ ಧರ್ಮಶ್ರವಣಮುತ್ತಮಂ ।
ಶ್ರುತ್ವಾ ಭಕ್ತಿರಭೂದಸ್ಯ ಶ್ರದ್ಧಯಾ ಪರಮಾತ್ಮನಃ || ೩೯ ||

ಕೃತ್ವಾ ಪ್ರದಕ್ಷಿಣಂ ತಸ್ಯ ವಾಚಕಸ್ಯ ಮಹಾತ್ಮನಃ ।
ಏಷ ವಿಪ್ರೋ ಮುನಿಶ್ರೇಷ್ಠ ದದೌ ಸ್ವರ್ಣಸ್ಯ ಮಾಷಕಂ || ೪೦ ||

ನಾಸ್ಯದ್ದಾನಂ ಕದಾ ಚಕ್ರೇ ಲೋಭಾವಿಷ್ಟೇನ ಚೇತಸಾ ।
ಪಾತ್ರದಾನಾತ್ಫಲಪ್ರಾಪ್ತಿಃ ತಸ್ಯ ಜಾತಾ ನ ಸಂಶಯಃ ||
ಇತ್ಯೇ ತತ್ಕಥಿತಂ ಕರ್ಮ ಚಾಭ್ಯಾಂ ಚೈವ ಕೃತಂ ಮುನೇ || ೪೧ ||

---

ಬಹಳ ಮಾತಿನಿಂದೇನು? ಪುಣ್ಯದ ಕಥೆಗಳನ್ನು ಹೊರತು ನನಗೆ ಬೇರೆ ಯಾವುದು ಪ್ರೀತಿಯನ್ನುಂಟುಮಾಡುವುದೇ ಇಲ್ಲ. ಇದೇ ನನ್ನ ಗುಟ್ಟು, ತಿಳಿದುಕೋ. ಎಲೈ ವಿಪ್ರನೇ! ಇಲ್ಲಿ ಬಂದ ಮತ್ತೊಬ್ಬನು ಧಾರ್ಮಿಕನ ಸಹವಾಸದಿಂದ ಉತ್ತಮವಾದ ಧರ್ಮಶ್ರವಣವನ್ನು ಮಾಡಿದವನು. ಈ ಶ್ರವಣದಿಂದ ಇವನಿಗೆ ಭಕ್ತಿಯುಂಟಾಯಿತು.

೪೦. ಆ ಹೇಳುವವನಲ್ಲಿ ಬಹು ಭಕ್ತಿಯುಂಟಾದುದರಿಂದ ಅವನಿಗೆ ಪ್ರದಕ್ಷಿಣೆ ನಮಸ್ಕಾರಮಾಡಿ, ಒಂದು ಮಾಷಪ್ರಮಾಣದ ಚಿನ್ನವನ್ನು ದಾನ ಮಾಡಿದನು.

೪೧. ಇವನು ಲೋಭಿ, ಯಾವಾಗಲೂ ಲೋಭತನದಿಂದ ಈ ದಾನ ಒಂದು ಹೊರತು ಬೇರೊಂದನ್ನು ಮಾಡಿದವನೇ ಅಲ್ಲ. ಸತ್ಪಾತ್ರನಲ್ಲಿ ದಾನ ಮಾಡಿದುದರಿಂದ ಫಲವು ಸಿಕ್ಕಿತು. ಈ ರೀತಿಯಾಗಿ ಇವರಿಬ್ಬರೂ ಮಾಡಿದ ಕೆಲಸಗಳನ್ನು ಹೇಳಿದ್ದೇನೆ.

॥ ಮಹಾದೇವ ಉವಾಚ ॥

ಏತತ್ಪುಣ್ಯಸ್ಯ ಮಾಹಾತ್ಮ್ಯಂ ಯೇ ಶೃಣ್ವನ್ತಿ ಮನೀಷಿಣಃ ।
ನ ತೇಷಾಂ ದುರ್ಗತಿಃ ಕ್ವಾಪಿ ಜನ್ಮ ಜನ್ಮನಿ ಜಾಯತೇ ॥ ೪೨ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಪತಿ ನಾರದ ಸಂವಾದೇ ಶಾಸ್ತ್ರ ಪುರಾಣಾದಿವ್ಯಾಖ್ಯಾನ ಮಹಿಮ ಕಥನಂ ನಾಮ ಏಕೋನತ್ರಿಂಶೋಽಧ್ಯಾಯಸ್ಸಮಾಪ್ತಃ

---

೪೨. ಮಹಾದೇವನು ಹೇಳಿದನು- ಈ ಪುಣ್ಯದ ಮಹಿಮೆಯನ್ನು ಕೇಳಿದ ಜಾಣರಿಗೆ ಕೆಟ್ಟಗತಿಯು ಜನ್ಮ ಜನ್ಮಾಂತರಗಳಲ್ಲಿಯೂ ಉಂಟಾಗುವುದಿಲ್ಲ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಪತಿ ನಾರದರ ಸಂವಾದದಲ್ಲಿ ಶಾಸ್ತ್ರ ಪುರಾಣಾದಿ ವ್ಯಾಖ್ಯಾನ ಕಥನವೆಂಬ ಇಪ್ಪತ್ತೊಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ತ್ರಿಂಶೋಽಧ್ಯಾಯಃ ॥



॥ ಮಹಾದೇವ ಉವಾಚ ॥

**ಅಥಾನ್ಯತ್ಸಂಪ್ರವಕ್ಷ್ಯಾಮಿ ಶೃಣು ದೇವರ್ಷಿಸತ್ತಮ ।**
**ಗೋಪೀಚಂದನಮಾಹಾತ್ಮ್ಯಂ ಯಥಾ ದೃಷ್ಟಂ ಶ್ರುತಂ ಮಯಾ ॥ ೧ ॥**

**ಬ್ರಾಹ್ಮಣೋ ವಾಥ ವೈಶ್ಯೋ ವಾ ಶೂದ್ರೋ ವಾಪ್ಯಥ ಬಾಹುಜಃ ।**
**ಗೋಪೀಚಂದನಲಿಪ್ತಾಂಗೋ ಮುಚ್ಯತೇ ಬ್ರಹ್ಮಹತ್ಯಯಾ ॥ ೨ ॥**

**ತಿಲಕಂ ಕುರುತೇ ಯಸ್ತು ಗೋಪೀಚಂದನಸಂಭವಂ ।**
**ಮದ್ಯಪಾನಾದಿದೋಷೈಸ್ತು ಮುಚ್ಯತೇ ನಾತ್ರ ಸಂಶಯಃ ॥ ೩ ॥**

---

## ಮೂವತ್ತನೆಯ ಅಧ್ಯಾಯವು



೧. ಮಹಾದೇವನು ಹೇಳಿದನು—ಎಲೈ ನಾರದನೆ! ಇನ್ನೂ ಒಂದು ವಿಷಯವನ್ನು ಹೇಳುತ್ತೇನೆ. ಕೇಳು. ಅದು ಗೋಪೀಚಂದನದ ಮಹಿಮೆಯು. ಅದರ ವಿಷಯದಲ್ಲಿ ನಾನು ಕಂಡುದುದನ್ನೂ ಕೇಳಿದುದನ್ನೂ ಹೇಳುತ್ತೇನೆ.

೨. ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರರಲ್ಲಿ ಯಾವನೇ ಆಗಲಿ ಮೈಗೆ ಗೋಪಿಚಂದನವನ್ನು ಬಳಿದುಕೊಂಡರೆ ಅವನು ಬ್ರಹ್ಮಹತ್ಯೆ ಮಾಡಿದ್ದರೂ ಶುದ್ಧನಾಗುತ್ತಾನೆ.

೩. ಗೋಪೀಚಂದನದಲ್ಲಿ ತಿಲಕವಿಟ್ಟುಕೊಂಡರೆ ಅವನು ಹೆಂಡ ಮುಂತಾದುವುಗಳನ್ನು ಕುಡಿದು ಜಾತಿಭ್ರಷ್ಟನಾಗಿದ್ದರೂ ಅವೆಲ್ಲವೂ ಹೋಗುತ್ತವೆ.

**ಗೋಪೀಚಂದನಲಿಪ್ತಾಂಗೋ ವೈಷ್ಣವೋ ವಿಷ್ಣುತತ್ಪರಃ ।**
**ಸರ್ವದೋಷೈಃ ಪ್ರಮುಚ್ಯೇತ ಯಥಾ ಗಂಗಾಂಭಸಾ ಪುನಃ ॥ ೪ ॥**

**ಬ್ರಹ್ಮಹಾ ಮದ್ಯಪಾನೀ ಚ ಸ್ವರ್ಣಸ್ತೇಯೀ ತಥೈವ ಚ ।**
**ಗುರುತಲ್ಪಗಮೋ ವಾಥ ಶೂದ್ರೋ ವಾಪ್ಯಥ ವೈ ದ್ವಿಜಃ ॥ ೫ ॥**

**ಸ ಸದ್ಯೋ ಮುಚ್ಯತೇ ಪಾಪಾದಾಜನ್ಮಶತಕಾರಣಾತ್ ।**
**ತಿಲಕಂ ದ್ವಾದಶಂ ಪ್ರೋಕ್ತಂ ಸರ್ವೇಶಾಂ ವೈ ವಿಶೇಷತಃ ॥ ೬ ॥**

**ವೈಷ್ಣವಾನಾಂ ಬ್ರಾಹ್ಮಣಾನಾಂ ಕರ್ತವ್ಯಂ ಭೂತಿಮಿಚ್ಛತಾಂ ।**
**ದಂಡಾಕಾರಂ ಲಲಾಟೇ ಸ್ಯಾತ್ಪದ್ಮಾಕಾರಂ ತು ವಕ್ಷಸಿ ॥ ೭ ॥**

**ವೇಣುಪತ್ರನಿಭಂ ಬಾಹೂಮೂಲೇಸ್ಯದ್ದೀಪಿಕಾಕೃತಿ ।**
**ಉಚ್ಚೈಶ್ಚಕ್ರಾಣಿ ಚತ್ವಾರಿ ಬಾಹುಮೂಲೇ ತು ದಕ್ಷಿಣೇ ॥ ೮ ॥**

---

೪. ವಿಷ್ಣುಭಕ್ತನಾದ ಮನುಷ್ಯನು ಗೋಪೀ ಚಂದನವನ್ನು ಮೈಗೆ ಹಚ್ಚಿಕೊಂಡರೆ, ಅವನು ಗಂಗೆಯಲ್ಲಿ ಸ್ನಾನಮಾಡಿದರೆ, ಎಲ್ಲಾ ಪಾಪಗಳನ್ನೂ ಕಳೆದುಕೊಳ್ಳುವಂತೆ ಇದರಿಂದಲೂ ಕಳೆದುಕೊಳ್ಳುತ್ತಾನೆ.

೫. ಬ್ರಹ್ಮಹತ್ಯೆ, ಮದ್ಯಪಾನ, ಸ್ವರ್ಣಸ್ತೇಯ, ಗುರುವಿನ ಹೆಂಡತಿಯಲ್ಲಿ ಸಂಗ ಇವು ಯಾವುದನ್ನು ಮಾಡಿ ಪಾಪಹೊಂದಿದ್ದರೂ, ಅವನು ದ್ವಿಜನಾಗಲಿ ಶೂದ್ರನಾಗಲಿ ಗೋಪಿಚಂದವನ್ನು ಮೈಗೆ ಬಳಿದುಕೊಂಡರೆ ಹುಟ್ಟಿದವೊದಲು ಗೊಂಡು ಮಾಡಿದ ಪಾಪಗಳನ್ನೆಲ್ಲಾ ಕಳೆದುಕೊಳ್ಳುತ್ತಾನೆ.

೬–೮. ವೈಷ್ಣವರಾದವರೆಲ್ಲರೂ ಕೂಡ ಹನ್ನೆರಡು ಜಾಗದಲ್ಲಿ ಈ ಗೋಪೀ ಚಂದನವನ್ನಿಟ್ಟುಕೊಳ್ಳಬೇಕು. ಇದರಿಂದ ಒಳ್ಳೆಯದಾಗುತ್ತದೆ. ಬ್ರಾಹ್ಮಣರು ನಿಯಮದಿಂದ ಇಟ್ಟುಕೊಂಡೇ ತೀರಬೇಕು. ಹಣೆಯಲ್ಲಿ ದೊಣ್ಣೆಯಂತೆ ಇಟ್ಟುಕೊಳ್ಳಬೇಕು. ಎದೆಯಲ್ಲಿ ಪದ್ಮದ ಆಕಾರಕ್ಕೆ ಇಟ್ಟುಕೊಳ್ಳಬೇಕು. ಭುಜದಮೇಲೆ ಬಿದಿರಿನ ಎಲೆಯಂತೆ ಇಟ್ಟುಕೊಳ್ಳಬೇಕು. ಉಳಿದುವು ದೀಪದಂತೆ ಇರಬೇಕು. ಬಲದ ತೋಳಿನ ಬುಡದಲ್ಲಿ ನಾಲ್ಕು ದೊಡ್ಡ ದೊಡ್ಡ ಚಕ್ರಗಳನ್ನು ಮೇಲುಮುಖನಾಗಿ ಬರೆದುಕೊಳ್ಳಬೇಕು.

ನಾಮಮುದ್ರಾದ್ವಯಂ ನೀಚೈಃ ಶಂಖಮೇಕಂ ತಯೋರಪಿ ।
ಮಧ್ಯೇ ತತಃ ಪಾರ್ಶ್ವಯೋಸ್ತು ದ್ವೇ ದ್ವೇ ಪದ್ಮೇ ಚ ಧಾರಯೇತ್ ॥೯॥

ವಾಮೇಪಿ ಚತುರಶ್ಶಂಖಾನ್ನಾಮಮುದ್ರೇ ಚ ಪೂರ್ವವತ್ ।
ಚಕ್ರಮೇಕಂಗದೇ ದ್ವೇ ದ್ವೇ ಪಾರ್ಶ್ವಯೋರಿತಿ ಭೇದತಃ ॥ ೧೦ ॥

ಲಲಾಟೇ ಚ ಗದಾಮೇಕಾಂ ನಾಮಮುದ್ರಾಂ ತಥಾ ಹೃದಿ ।
ತ್ರೀಣಿ ತ್ರೀಣಿ ಚ ಚಕ್ರಾಣಿ ಮಧ್ಯೇ ಶಂಖಾವುಭಾವುಭೌ ॥ ೧೧ ॥

ಹೃದಿ ಪಾರ್ಶ್ವೇ ಸ್ತನಾದೂರ್ಧ್ವಂ ಗದಾಪದ್ಮಾನಿ ಬಾಹುವತ್ ।
ತ್ರೀಣಿ ತ್ರೀಣಿ ಚ ಚಕ್ರಾಣಿ ಕರ್ಣಮೂಲದ್ವಯೋರಥಃ ॥ ೧೨ ॥

ಏಕಮೇಕಂ ತದನ್ಯೇಷು ತಿಲಕೇಷು ಚ ಧಾರಯೇತ್ ।
ಸಂಪ್ರದಾಯಸ್ತು ಭದ್ರಸ್ತು ಧಾರ್ಯಾ ಶಿಷ್ಟಾನುಸಾರತಃ ॥ ೧೩ ॥

---

೯–೧೦. ನಾಮದ ಆಕಾರಕ್ಕೆ ಒಂದು, ಮುದ್ರೆಯ ಆಕಾರಕ್ಕೆ ಒಂದು, ಈ ರೀತಿ ಎರಡನ್ನು ಕೆಳಮುಖನಾಗಿ ಇಟ್ಟುಕೊಳ್ಳಬೇಕು. ಅವುಗಳ ಮಧ್ಯೆ ಒಂದು ಶಂಖವನ್ನು ಬರೆದುಕೊಳ್ಳಬೇಕು. ಅವುಗಳ ಪಕ್ಕದಲ್ಲಿ ಎರಡೆರಡು ಪದ್ಮಗಳನ್ನು ಬರೆದುಕೊಳ್ಳಬೇಕು. ಎಡಗಡೆಯಲ್ಲಿಯೂ ಕೂಡ ನಾಲ್ಕು ಶಂಖಗಳನ್ನೂ, ನಾಮ, ಮುದ್ರೆಗಳನ್ನೂ ಬಲಗಡೆಯಂತೆ ಇಟ್ಟುಕೊಳ್ಳಬೇಕು. ಒಂದು ಚಕ್ರ, ಎರಡೆರಡು ಗದೆಗಳು ಅವುಗಳ ಪಕ್ಕದಲ್ಲಿ ಬರುವಂತೆ ಇಟ್ಟುಕೊಳ್ಳಬೇಕು.

೧೧. ಹಣೆಯಲ್ಲಿ ಒಂದು ಗದೆಯನ್ನೂ, ಎದೆಯಲ್ಲಿ ಒಂದು ನಾಮ, ಒಂದು ಮುದ್ರೆಯನ್ನೂ, ಮೂರು ಮೂರು ಚಕ್ರಗಳನ್ನೂ, ಅವುಗಳ ಮಧ್ಯದಲ್ಲಿ ಎರಡೆರಡು ಶಂಖಗಳನ್ನೂ ಇಟ್ಟುಕೊಳ್ಳಬೇಕು.

೧೨. ಹೃದಯ, ಪಕ್ಕೆಗಳು, ಸ್ತನಗಳಿಂದ ಮೇಲೆ, ಗದೆಪದ್ಮಗಳನ್ನು ತೋಳಿನಲ್ಲಿಟ್ಟುಕೊಂಡಿರುವಂತೆ ಇಟ್ಟುಕೊಳ್ಳಬೇಕು. ಕತ್ತಿನಲ್ಲಿ ಕಿವಿಯಕೆಳಗೆ ಎರಡುಕಡೆಯಲ್ಲಿಯೂ ಮೂರು ಮೂರು ಚಕ್ರಗಳನ್ನೂ ಇಟ್ಟುಕೊಳ್ಳಬೇಕು.

೧೩. ಇವುಗಳ ಮೇಲೆಲ್ಲಾ ಒಂದೊಂದು ತಿಲಕವನ್ನೂ ಇಟ್ಟುಕೊಳ್ಳಬೇಕು. ಈ ವಿಷಯದಲ್ಲಿ ಸಂಪ್ರದಾಯವೇ ಉತ್ತಮವಾದುದು. ಶಿಷ್ಟರು ಹೇಳಿದಂತೆ ಮಾಡುವುದು ಒಳ್ಳೆಯದು.

ಯಥಾರುಚ್ಯಥವಾ ಧಾರ್ಯಾ ನ ತತ್ರನಿಯಮೋ ಯತಃ ।
ಆಚಾಂಡಾಲಾದ್ವಿಶುದ್ಧ್ಯಂತಿತಿ ಲಕಸ್ಯೈವ ಧಾರಣಾತ್ ॥ ೧೪ ॥

ಚಂಡಾಲಾದಧಿಕಂ ಮನ್ಯೇ ವೈಷ್ಣವಾನಾಂ ಹಿ ನಿಂದಕಂ ।
ಸ ವೈ ವಿಷ್ಣುಸಮೋ ಜ್ಞೇಯೋ ನಾತ್ರ ಕಾರ್ಯಾ ವಿಚಾರಣಾ ॥ ೧೫ ॥

ವೈಷ್ಣವೋ ಬ್ರಾಹ್ಮಣೋ ಯಸ್ತು ವಿಷ್ಣುಧ್ಯಾನೇಷು ತತ್ಪರಃ ।
ನಾನ್ತರಂ ತಸ್ಯ ವೈ ಜ್ಞೇಯಂ ಸ ವೈ ವಿಷ್ಣುರ್ಭವೇದಿಹ ॥ ೧೬ ॥

ಶಂಖಚಕ್ರಧರೋ ವಿಪ್ರೋ ವೇದಾಧ್ಯಯನತತ್ಪರಃ ।
ಸ ವೈ ನಾರಾಯಣ ಇತಿ ವೇದೇ ಚೈವಂ ತು ಪಠ್ಯತೇ ॥ ೧೭ ॥

ತಪ್ತಚಕ್ರಧರೋವಿಪ್ರಃ ಪಂಕ್ತಿಪಾವನಪಾವನಃ ।
ತಸ್ಯ ಭಕ್ತಿಯುತೋ ಬ್ರಹ್ಮನ್ ಮಹಾಪಾಪೈಃಪ್ರಮುಚ್ಯತೇ ॥ ೧೮ ॥

---

೧೪. ಅದಿಲ್ಲದಿದ್ದರೆ ಇಷ್ಟವಿದ್ದಂತೆ ಇಟ್ಟುಕೊಳ್ಳಬಹುದು. ಅದರಲ್ಲಿ ನಿಯಮವಿಲ್ಲ. ಈ ತಿಲಕವನ್ನು ಇಟ್ಟುಕೊಳ್ಳುವುದರಿಂದ ಚಂಡಾಲನು ಮೊದಲುಗೊಂಡು ಶುದ್ಧನಾಗುತ್ತಾನೆ.

೧೫. ವೈಷ್ಣವರನ್ನು ನಿಂದಿಸುವವನು ಚಂಡಾಲನಿಗಿಂತಲೂ ನೀಚನು. ಆ ವೈಷ್ಣವನು ವಿಷ್ಣುವಿಗೆ ಸಮನು. ಈ ವಿಷಯದಲ್ಲಿ ಸಂದೇಹವಿಲ್ಲ.

೧೬. ವಿಷ್ಣುಧ್ಯಾನದಲ್ಲಿ ಆಸಕ್ತನಾದ ವೈಷ್ಣವ ಬ್ರಾಹ್ಮಣನಿಗೂ ವಿಷ್ಣುವಿಗೂ ಭೇದವೇ ಇಲ್ಲ. ಅವನೇ ಈ ಲೋಕದಲ್ಲಿ ವಿಷ್ಣುವು.

೧೭. ಬ್ರಾಹ್ಮಣನು ವೇದಾಧ್ಯಯನಮಾಡುತ್ತ ಶಂಖ ಚಕ್ರಗಳನ್ನು ಧರಿಸಿದ್ದರೆ ಅವನೇ ನಾರಾಯಣನೆಂದು ತಿಳಿ. ವೇದದಲ್ಲಿಯೂ ಹಾಗೆಯೇ ಹೇಳಿರುತ್ತದೆ.

೧೮. ಬೆಂಕಿಯಲ್ಲಿ ಕಾಯಿಸಿ ಮುದ್ರೆಧಾರಣೆ ಮಾಡಿಸಿಕೊಂಡ ಬ್ರಾಹ್ಮಣನು ಪಂಕ್ತಿಯನ್ನೇ ಪವಿತ್ರವನ್ನಾಗಿ ಮಾಡುತ್ತಾನೆ. ಅವನಲ್ಲಿ ಭಕ್ತನಾಗಿದ್ದರೆ ಮಹಾಪಾಪಗಳೂ ಹೋಗುತ್ತವೆ.

**ತುಲಸೀಪತ್ರಮಾಲಾಂ ಚ ತುಲಸೀಕಾಷ್ಠಸಂಭವಾಂ ।**
**ಧೃತ್ವಾ ವೈ ಬ್ರಾಹ್ಮಣೋ ಭೂಯಾತ್ ಮುಕ್ತಿಭಾಗೀ ನ ಸಂಶಯಃ ॥೧೯॥**

**ವಿಷ್ಣುರೂಪೋ ಯತೋ ವಿಪ್ರೋ ವೈಷ್ಣವಸ್ಸ ಇಹ ಸ್ಮೃತಃ ।**
**ಪಂಚತ್ವೇ ಯಸ್ಯ ತಿಲಕಂ ಗೋಪೀಚಂದನಸಂಭವಂ ॥ ೨೦ ॥**

**ವಿಮಾನಂ ಸ ಸಮಾರುಹ್ಯ ಯಾತಿ ವಿಷ್ಣೋಃ ಪರಂ ಪದಃ ।**
**ಕಲೌ ನಾರದ ತಿಲಕಂ ಗೋಪೀಚಂದನಸಂಭವಂ ॥ ೨೧ ॥**

**ಯೇ ಕುರ್ವಂತಿ ನರಶ್ರೇಷ್ಠಾ ನ ತೇಷಾಂ ದುರ್ಗತಿಃ ಕ್ವಚಿತ್ ।**
**ಶಂಖಂ ಚೈವ ತಥಾ ಚಕ್ರಂ ದಕ್ಷಿಣೇ ಚಾಪಸವ್ಯಕೇ ॥ ೨೨ ॥**

**ಹಸ್ತೇ ಧೃತ್ವಾ ವಿಶೇಷೇಣ ಮಹಾಪಾಪೈಃ ಪ್ರಮುಚ್ಯತೇ ।**
**ಮಧ್ಯಪಾನರತಾ ಯೇ ಚ ಯೇ ಚ ಸ್ತ್ರೀಬಾಲಘಾತಕಾಃ ॥ ೨೩ ॥**

**ಅಗಮ್ಯಾ ಗಮಕಾ ಯೇ ಚ ದೃಶ್ಯಂತೇ ಭುವಿ ಬಾಡಬ ।**
**ಭಕ್ತಾನಾಂ ದರ್ಶನಾದೇವ ಮುಕ್ತಿಸ್ತೇಷಾಂ ನ ಸಂಶಯಃ ॥ ೨೪ ॥**

---

೧೯. ತುಳಸಿಯ ಮಾಲೆಯನ್ನೂ ತುಳಸಿಯ ಮಣಿಯನ್ನೂ ಧರಿಸಿದ ಬ್ರಾಹ್ಮಣನು ಮುಕ್ತಿಹೊಂದುತ್ತಾನೆ. ಸಂಶಯವಿಲ್ಲ.

೨೦–೨೪. ವೈಷ್ಣವನಾಗಿರುವ ಬ್ರಾಹ್ಮಣನನ್ನು ಈ ಲೋಕದಲ್ಲಿ ವಿಷ್ಣುವಿನ ರೂಪವೆಂದು ಹೇಳುತ್ತಾರೆ. ಸಾಯುವಾಗ ಯಾವನು ಗೋಪೀಚಂದನದ ತಿಲಕವನ್ನು ಇಟ್ಟುಕೊಂಡಿರುವನೋ ಅವನು ವಿಮಾನವನ್ನು ಹತ್ತಿಕೊಂಡು ವಿಷ್ಣುವಿನ ಪದವನ್ನು ಹೊಂದುತ್ತಾನೆ. ಎಲೈ ನಾರದನೇ! ಈ ಕಲಿಯುಗದಲ್ಲಿ ಗೋಪೀಚಂದನದ ತಿಲಕವನ್ನು ಇಟ್ಟುಕೊಳ್ಳುವವನು ಶ್ರೇಷ್ಠನು. ಅವನಿಗೆ ದುರ್ಗತಿ ಎಂಬುದು ಸಂಭವಿಸುವುದೇ ಇಲ್ಲ. ಬಲಗೈಯ್ಯಲ್ಲಿ ಶಂಖವನ್ನೂ ಎಡಗೈಯ್ಯಲ್ಲಿ ಚಕ್ರವನ್ನೂ ಧಾರಣೆಮಾಡಿಸಿಕೊಂಡವನು ಮಹಾಪಾಪಗಳನ್ನು ಕಳೆದುಕೊಳ್ಳುತ್ತಾನೆ. ಮಧ್ಯಪಾನ ಮಾಡುವವನು ಸ್ತ್ರೀಘಾತುಕ, ಬಾಲಘಾತುಕ, ಅಗಮ್ಯಗಾಮಿಗಳಾದ ಮಹಾಪಾಪಿಗಳೂ ಕೂಡ ಈ ಭಕ್ತರ ದರ್ಶನದಿಂದಲೇಮುಕ್ತರಾಗುತ್ತಾರೆ. ಸಂಶಯವಿಲ್ಲ.

**ಸಂಸಾರೇ ತು ಹ್ಯಸಾರೇ ನ ಕುಲೇ ವೈ ವೈಷ್ಣವಾ ಜನಾಃ ।**
**ಅಹಂ ಹಿ ವೈಷ್ಣವೋ ಜಾತೋ ವಿಷ್ಣೋರ್ಭಕ್ತಿಪ್ರಸಾದತಃ ॥ ೨೫ ॥**

**ಕಾಶ್ಯಾಂ ನಿವಸತಾಂ ಹ್ಯತ್ರ ರಾಮೋಽಹಮಿತಿ ಸಂಜಪನ್ ।**
**ತೇನ ಪುಣ್ಯಾದಿಯೋಗೇನ ಶಿವೋ ವೈ ನಾತ್ರ ಸಂಶಯಃ ॥ ೨೬ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಪತಿ ನಾರದ ಸಂವಾದೇ ಶಾಸ್ತ್ರ ಗೋಪೀಚಂದನ ಮಾಹಾತ್ಮ್ಯಂ ನಾಮ ತ್ರಿಂಶೋಽಧ್ಯಾಯಸ್ಸಮಾಪ್ತಃ**

---

೨೫-೨೬. ಮೊದಲೇ ಈ ಸಂಸಾರವು ಸಾರವಿಲ್ಲದ್ದು. ಇಂತಹವರ ಕುಲದಲ್ಲಿ ವೈಷ್ಣವರೇ ಹುಟ್ಟುವುದಿಲ್ಲ. ನಾನೊಬ್ಬನು ವಿಷ್ಣುವಿನ ಪ್ರಸಾದದಿಂದ ವೈಷ್ಣವನಾಗಿ ಹುಟ್ಟಿರುವೆನು. ನಾನು ಈ ಕಾಶಿಯಲ್ಲಿ ರಾಮ ರಾಮ ಯೆಂದು ಜಪಿಸುತ್ತಿರುವ ಪುಣ್ಯದ ಯೋಗದಿಂದ ಈ ಕಾಶಿಯಲ್ಲಿ ವಾಸಮಾಡುವವರಿಗೆ ಶಿವನಾಗಿ ಮೋಕ್ಷದಾಯಕನಾಗಿ ಪರಿಣಮಿಸಿದ್ದೇನೆ. ಸಂಶಯವಿಲ್ಲ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಪತಿ ನಾರದರ ಸಂವಾದದಲ್ಲಿ ಗೋಪೀಚಂದನ ಮಾಹಾತ್ಮ್ಯವೆಂಬ ಮೂವತ್ತನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

-X-

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ಏಕತ್ರಿಂಶೋಽಧ್ಯಾಯಃ ||



**|| ನಾರದ ಉವಾಚ ||**

**ಬ್ರಹ್ಮನ್ಸಂವತ್ಸರಾಖ್ಯಸ್ಯ ದೀಪಸ್ಯ ವಿಧಿಮುತ್ತಮಂ |**
**ಸರ್ವವ್ರತಪ್ರಧಾನಸ್ಯ ಮಾಹಾತ್ಮ್ಯಂ ಪ್ರವದಸ್ವ ಮೇ || ೧ ||**

**ಯೇನ ವ್ರತಾನಿ ಸರ್ವಾಣಿ ಕೃತಾನ್ಯೇವ ನ ಸಂಶಯಃ |**
**ಸರ್ವಕಾಮಸಮೃದ್ಧಿಶ್ಚ ಸರ್ವಪಾಪಕ್ಷಯೋ ಭವೇತ್ || ೨ ||**

**|| ಶಿವ ಉವಾಚ ||**

**ವದಾಮಿ ತವ ದೇವರ್ಷೇ ರಹಸ್ಯಂ ಪಾಪನಾಶನಂ |**
**ಯಚ್ಛ್ರುತ್ವಾ ಬ್ರಹ್ಮಹಾ ಗೋಘ್ನೋ ಮಿತ್ರಘ್ನೋ ಗುರುತಲ್ಪಗಃ || ೩ ||**

---

## ಮೂವತ್ತೊಂದನೆಯ ಅಧ್ಯಾಯವು



೧. ನಾರದನು ಹೇಳಿದನು–ಎಲ್ಲಾ ವ್ರತಗಳಿಗೂ ಮುಖ್ಯವಾದ ಸಂವತ್ಸರ ದೀಪವ್ರತದ ಮಹಿಮೆಯನ್ನು ಹೇಳು. ಅದು ಎಲ್ಲಾ ವ್ರತಗಳಲ್ಲಿಯೂ ಪ್ರಧಾನ ವಾದುದರಿಂದ ಕೇಳಬೇಕೆಂದಿದ್ದೇನೆ.

೨. ಆ ದೀಪವನ್ನು ಹಚ್ಚಿದರೆ ಎಲ್ಲಾ ವ್ರತಗಳನ್ನೂ ಮಾಡಿದಂತೆ ಆಗುತ್ತದೆ. ಸಂಶಯವಿಲ್ಲ. ಇಷ್ಟಾರ್ಥಗಳೆಲ್ಲವೂ ನೆರವೇರುತ್ತವೆ. ಪಾಪವೂ ನಾಶವಾಗುತ್ತದೆ.

೩-೪. ಶಿವನು ಹೇಳಿದನು– ಎಲೈ ನಾರದನೆ! ಪಾಪನಾಶಕವಾದ ಆ ರಹಸ್ಯವನ್ನು ಹೇಳುತ್ತೇನೆ. ಇದನ್ನು ಕೇಳಿದುದರಿಂದ ಬ್ರಹ್ಮಹತ್ಯೆ, ಗೋಹತ್ಯೆ,

ವಿಶ್ವಾಸಘಾತೀ ಕ್ರೂರಾತ್ಮಾ ಮುಕ್ತಿಮಾಪ್ನೋತಿ ಶಾಶ್ವತೀಂ ।
ಶತಂ ಕುಲಾನಾಮುದ್ಧೃತ್ಯ ವಿಷ್ಣುಲೋಕಂ ಸ ಗಚ್ಛತಿ ॥ ೪ ॥

ತದಹಂ ಕಥಯಿಷ್ಯಾಮಿ ದೀಪವ್ರತಮನುತ್ತಮಂ ।
ಸಂವತ್ಸರ ಪ್ರಮಾಣಸ್ಯ ವಿಧಿಂ ಮಾಹಾತ್ಮ್ಯಮೇವ ಚ ॥ ೫ ॥

ಹೇಮಂತೇ ಪ್ರಥಮೇ ಮಾಸಿ ಪ್ರಾಪ್ಯ ಹ್ಯೇಕಾದಶೀಂ ಶುಭಾಂ ।
ಬ್ರಾಹ್ಮೇ ಮುಹೂರ್ತೇ ಚೋತ್ಥಾಯ ಕಾಮಕ್ರೋಧವಿವರ್ಜಿತಃ ॥ ೬ ॥

ನದೀಸಂಗಮತೀರ್ಥೇಷು ತಟಾಗೇಷು ಸರಿತ್ಸು ಚ ।
ಸ್ನಾನಂ ಸಮಾಚರೇತ್ತತ್ರ ಗೃಹೇ ವಾ ನಿಯತಾತ್ಮವಾನ್ ॥ ೭ ॥

ಸ್ನಾತೋಽಹಂ ಸರ್ವತೀರ್ಥೇಷು ಗರ್ತೇ ಪ್ರಸ್ರವಣೇಷು ಚ ।
ನದೀಷು ಸರ್ವತೀರ್ಥೇಷು ತತ್ ಸ್ನಾನಂ ದೇಹಿ ಮೇ ಸದಾ ॥ ೮ ॥

॥ ಇತಿ ಸ್ನಾನಮಂತ್ರಃ ॥

---

ಮಿತ್ರಹತ್ಯೆ, ಗುರುತಲ್ಪಗಮನ, ವಿಶ್ವಾಸಘಾತುಕತನ, ಕ್ರೌರ್ಯ, ಇವೆಲ್ಲವೂ ಹೋಗುತ್ತವೆ. ಮತ್ತು ಶಾಶ್ವತವಾದ ಮುಕ್ತಿಯನ್ನು ಹೊಂದುತ್ತಾನೆ. ಅವನು ತನ್ನ ನೂರು ಕುಲಗಳನ್ನೂ ಉದ್ಧಾರ ಮಾಡಿ ವಿಷ್ಣು ಲೋಕವನ್ನು ಸೇರುತ್ತಾನೆ.

೫. ಅಂತಹ ಉತ್ತಮ ವ್ರತವಾದ ಒಂದು ವರ್ಷ ಕಾಲವಿಡುವ ದೀಪ ವ್ರತದ ಮಹಿಮೆಯನ್ನೂ ವಿಧಿಯನ್ನೂ ಹೇಳುತ್ತೇನೆ.

೬-೭. ಹಿಮಂತ ಋತುವಿನಲ್ಲಿ ಮೊದಲನೆಯ ತಿಂಗಳಾದ ಮಾರ್ಗಶಿರ ಮಾಸದ ಶುದ್ಧ ಏಕಾದಶಿಯ ದಿನ ವಾರ ನಕ್ಷತ್ರಗಳನ್ನೂ ಕಾಲವನ್ನೂ ನೋಡಿ ಇಟ್ಟುಕೊಂಡಿರಬೇಕು. ಆ ದಿನ ಬೆಳಿಗ್ಗೆ ಬ್ರಾಹ್ಮ ಮುಹೂರ್ತದಲ್ಲಿ ಎದ್ದು ಕಾಮ ಕ್ರೋಧಾದಿಗಳಿಗೆ ಒಳಗಾಗದೆ ನದೀ ಸಂಗಮದ ತೀರ್ಥದಲ್ಲಾಗಲಿ, ಕೆರೆಯಲ್ಲಾಗಲಿ, ಹೊಳೆಯಲ್ಲಾಗಲಿ, ಕೊನೆಗೆ ಮನೆಯಲ್ಲೇ ಆಗಲಿ ಶುದ್ಧನಾಗಿ ಸ್ನಾನ ಮಾಡಬೇಕು.

೮. ನಾನು ಎಲ್ಲಾ ತೀರ್ಥಗಳಲ್ಲಿಯೂ, ಕೊಳಗಳಲ್ಲಿಯೂ, ಹೊಳೆಗಳಲ್ಲಿಯೂ, ನದಿಗಳಲ್ಲಿಯೂ, ಸ್ನಾನಮಾಡಿದ್ದೇನೆ. ಆ ಸ್ನಾನಗಳ ಫಲವೆಲ್ಲವನ್ನೂ ಕೊಡು ಎಂದು ಹೇಳಿ ಸ್ನಾನಮಾಡಬೇಕು. ಇದು ಸ್ನಾನದ ಮಂತ್ರವು.

ದೇವಾನ್ಪಿತ್ರೄಂಶ್ಚ ಸಂತರ್ಪ್ಯ ಕೃತಜಾಪ್ಯೋ ಜಿತೇಂದ್ರಿಯಃ ।
ತತಸ್ಸಂಪೂಜಯೇದ್ದೇವಂ ಲಕ್ಷ್ಮೀನಾರಾಯಣಂ ಪ್ರಭುಂ ॥ ೯ ॥

ಪಂಚಾಮೃತೇನ ಸಂಸ್ನಾಪ್ಯ ತತೋ ಗಂಧೋದಕೇನ ಚ ।
ಸ್ನಾತೋಽಸಿ ಲಕ್ಷ್ಮ್ಯಾ ಸಹಿತೋ ದೇವ ದೇವ ಜಗತ್ಪತೇ ॥ ೧೦ ॥

ಮಾಂ ಸಮುದ್ಧರ ದೇವೇಶ ಘೋರಾತ್ಸಂಸಾರಬಂಧನಾತ್ ।
ತತ್ಸಸಂಪೂಜಯೇದ್ದೇವಂ ಲಕ್ಷ್ಮ್ಯಾ ಸಹ ಜನಾರ್ದನಂ ॥ ೧೧ ॥

ಮಂತ್ರೈಸ್ತು ವೈದಿಕೈರ್ಭಕ್ತ್ಯಾ ತಥಾ ಪೌರಾಣಿಕೈರಪಿ ।
ಅತೋದೇವೇತಿಸೂಕ್ತೇನ ಪೌರುಷೇಣಾಪಿ ವಾ ಪುನಃ ॥ ೧೨ ॥

ನಮೋ ಮತ್ಸ್ಯಾಯ ದೇವಾಯ ಕೂರ್ಮದೇವಾಯ ವೈ ನಮಃ ।
ನಮೋ ವರಾಹದೇವಾಯ ನರಸಿಂಹಾಯ ವೈ ನಮಃ ॥ ೧೩ ॥

---

೯. ದೇವತರ್ಪಣ, ಪಿತೃತರ್ಪಣಗಳನ್ನು ಮಾಡಿ ದೇವರ ಪೂಜೆಯನ್ನು ಮಾಡಿ ನಿಯಮದಿಂದ ಸ್ವಾಮಿಯಾದ ಲಕ್ಷ್ಮೀನಾರಾಯಣನನ್ನು ಪೂಜಿಸಬೇಕು.

೧೦ ಮೊದಲು ಆ ಲಕ್ಷ್ಮೀನಾರಾಯಣಮೂರ್ತಿಗೆ ಪಂಚಾಮೃತದಿಂದ ಪೂಜೆಮಾಡಬೇಕು. ಅನಂತರ ಗಂಧದನೀರಿನಿಂದ ಅಭಿಷೇಕ ಮಾಡಬೇಕು. ಅನಂತರ ಎಲೈ ದೇವದೇವನೆ! ಜಗತ್ಪತಿಯೆ! ಲಕ್ಷ್ಮಿಯೊಡನೆ ನೀನು ಸ್ನಾನ ಮಾಡಿದ್ದೀಯೆ. ಈ ಕ್ರೂರವಾದ ಸಂಸಾರಬಂಧನದಿಂದ ನನ್ನನ್ನು ಉದ್ಧಾರ ಮಾಡು. ಎಂದು ಪ್ರಾರ್ಥಿಸಬೇಕು.

೧೧. ಅನಂತರ ಲಕ್ಷ್ಮೀನಾರಾಯಣನನ್ನು ವೈದಿಕ ಮಂತ್ರಗಳಿಂದಲೂ ಲೌಕಿಕ ಮಂತ್ರಗಳಿಂದಲೂ ಪುರಾಣ ಮಂತ್ರಗಳಿಂದಲೂ ಪೂಜಿಸಬೇಕು.

೧೨-೧೩. ಅತೋದೇವಾ ಎಂಬ ಸೂಕ್ತದಿಂದಲೂ ಪುರುಷಸೂಕ್ತ ದಿಂದಲೂ ಅಭಿಷೇಕ ಮಾಡಬೇಕು. ಅನಂತರ ಮತ್ಸ್ಯನಿಗೆ ನಮಸ್ಕಾರವು, ಕೂರ್ಮದೇವನಿಗೆ ನಮಸ್ಕಾರವು, ವರಾಹ ದೇವನಿಗೆ ನಮಸ್ಕಾರವು. ನಾರಸಿಂಹ ದೇವನಿಗೆ ನಮಸ್ಕಾರವು.

ವಾಮನಾಯ ನಮುಸ್ತುಭ್ಯಂ ಪರಶುರಾಮಾಯ ತೇ ನಮಃ ।
ನಮೋಽಸ್ತು ರಾಮದೇವಾಯ ವಿಷ್ಣುದೇವಾಯ ತೇ ನಮಃ ॥ ೧೪ ॥

ನಮೋಽಸ್ತು ಬುದ್ಧದೇವಾಯ ಕಲ್ಕಿನೇ ಚ ನಮೋ ನಮಃ ।
ನಮಸ್ಸರ್ವಾತ್ಮನೇ ತುಭ್ಯಂ ಶಿರ ಇತ್ಯಭಿಪೂಜಯೇತ್ ॥ ೧೫ ॥

ಕೇಶವಾದೀನಿ ನಾಮಾನಿ ತೈರ್ವಾ ಸಂಪೂಜಯೇದ್ಧರಿಂ ॥ ೧೬ ॥

॥ ಧೂಪಮಂತ್ರಃ ॥

ವನಸ್ಪತಿರಸೋ ದಿವ್ಯಃ ಸುರಭಿರ್ಗಂಧವಾನ್ ಶುಚಿಃ ।
ಧೂಪೋಽಯಂ ದೇವದೇವೇಶ ನಮಸ್ತೇ ಪ್ರತಿಗೃಹ್ಯತಾಂ ॥ ೧೭ ॥

॥ ದೀಪಮಂತ್ರಃ ॥

ದೀಪಸ್ತಮೋ ನಾಶಯತಿ ದೀಪಃ ಕಾಂತಿಂ ಪ್ರಯಚ್ಛತಿ ।
ತಸ್ಮಾದ್ದೀಪಪ್ರದಾನೇನ ನಮಸ್ತೇ ಪ್ರತಿಗೃಹ್ಯತಾಂ ॥ ೧೮ ॥

---

೧೪–೧೬. ವಾಮನನಿಗೆ ನಮುಸ್ಕಾರವು, ಪರುಶುರಾಮುನಿಗೆ ನಮುಸ್ಕಾರವು, ರಾಮುದೇವನಿಗೆ ನಮುಸ್ಕಾರವು, ವಿಷ್ಣುದೇವನಿಗೆ ನಮುಸ್ಕಾರವು, ಬುದ್ಧ ದೇವನಿಗೆ ನಮುಸ್ಕಾರವು, ಕಲ್ಕಿದೇವನಿಗೆ ನಮುಸ್ಕಾರವು, ಸರ್ವಾತ್ಮನಿಗೆ ನಮುಸ್ಕಾರವು, ಎಂದು ತಲೆಯ ಮೇಲೆ ಪೂಜಿಸಿಸಬೇಕು. ಅದಿಲ್ಲದಿದ್ದರೆ ಕೇಶವನಾರಾಯಣ ಎಂಬುವೇ ಮೊದಲಾದ ಇಪ್ಪತ್ತುನಾಲ್ಕು ಹೆಸರುಗಳನ್ನು ಹೇಳಿ ಪೂಜಿಸಬೇಕು.

೧೭. ಧೂಪವನ್ನು ಬೆಳಗುವ ಮಂತ್ರವು–ವನಸ್ಪತಿಗಳ ಒಳ್ಳೆಯ ರಸದಿಂದ ಮಾಡಿದ ಒಳ್ಳೆಯ ಸುವಾಸನೆಯೂ ಶುಚಿಯೂ ಆಗಿರುವ ಈ ಧೂಪವನ್ನು ತೋರಿಸುತ್ತೇನೆ. ದೇವದೇವನೆ! ಸ್ವೀಕರಿಸು.

೧೮. ದೀಪದ ಮಂತ್ರವು– ದೀಪವು ಕತ್ತಲೆಯನ್ನು ನಾಶಮಾಡುತ್ತದೆ. ಕಾಂತಿಯನ್ನು ಕೊಡುತ್ತದೆ. ಅದ್ದರಿಂದ ಈ ದೀಪದಾನವನ್ನು ಸ್ವೀಕರಿಸು. ನಿನಗೆ ನಮುಸ್ಕಾರವು.

॥ ನೈವೇದ್ಯ ಮಂತ್ರಃ ॥

ನೈವೇದ್ಯಮಿದಮನ್ನಾದ್ಯಂ ದೇವ ದೇವ ಜಗತ್ಪತೇ ।
ಲಕ್ಷ್ಮ್ಯಾ ಸಹ ಗೃಹಾಣ ತ್ವಂ ಪರಮಾಮೃತಮುತ್ತಮಂ ॥ ೧೯ ॥

ಅರ್ಘ್ಯಂ ದದ್ಯಾತ್ತತೋ ಭಕ್ತ್ಯಾ ಏವಂ ಧ್ಯಾತ್ವಾ ಜನಾರ್ದನಂ ।
ಫಲೇನ ಚೈವ ಹಸ್ತೇನ ಶಂಖೇನಾದಾಯ ಚೋದಕಂ ॥ ೨೦ ॥

ಜನ್ಮಾಂತರಸಹಸ್ರೇಣ ಯನ್ಮಯಾ ಪಾತಕಂ ಕೃತಂ ।
ತತ್ಸರ್ವಂ ನಾಶಮಾಯಾತು ಪ್ರಸಾದಾತ್ತವ ಕೇಶವ ॥ ೨೧ ॥

॥ ಇತ್ಯರ್ಘ್ಯ ಮಂತ್ರಃ ॥

ತತಃ ಕುಂಭಂ ನವಂ ಶುಭ್ರಂ ಘೃತಪೂರ್ಣಂ ಸಮಾನಯೇತ್ ।
ಲಕ್ಷ್ಮೀನಾರಾಯಣಸ್ಯಾಗ್ರೇ ತೈಲಪೂರ್ಣಮಥಾಪಿ ವಾ ॥ ೨೨ ॥

---

೧೯. ನೈವೇದ್ಯದ ಮಂತ್ರವು–ಎಲೈ ದೇವದೇವನಾದ ಜಗತ್ಪತಿಯೆ! ಈ ಅನ್ನವೇ ಆದಿಯಾದ ನೈವೇದ್ಯವನ್ನು ಲಕ್ಷ್ಮಿಯೊಡನೆ ಸ್ವೀಕರಿಸು. ಇದು ಉತ್ತಮವಾದ ಅಮೃತದಂತಿರುವುದು.

೨೦–೨೧. ಅನಂತರ ಶಂಖದಲ್ಲಿ ನೀರನ್ನು ತುಂಬಿಕೊಂಡು ಅದರಲ್ಲಿ ಹೂವು ಹಣ್ಣು ಅಕ್ಷತೆಗಳನ್ನು ಹಾಕಿಕೊಂಡು ಭಕ್ತಿಯಿಂದ ಜನಾರ್ದನನನ್ನು ಸ್ಮರಿಸುತ್ತಾ ಸಾವಿರಾರು ಜನ್ಮಗಳಿಂದ ನಾನು ಮಾಡಿರುವ ಪಾಪವೆಲ್ಲವೂ ನಿನ್ನ ಅನುಗ್ರಹದಿಂದ ನಾಶವಾಗಲಿ. ಎಂದು ಅರ್ಘ್ಯವನ್ನು ಕೊಡಬೇಕು. ಇದು ಅರ್ಘ್ಯದ ಮಂತ್ರವು.

೨೨–೨೪. ಅನಂತರ ಹೊಸದೂ ಶುಭ್ರವೂ ಆಗಿರುವ ಒಂದು ತಾಮ್ರ ಅಥವಾ ಹಿತ್ತಾಳೆಯ ಬಿಂದಿಗೆಯನ್ನು ತರಬೇಕು. ಗಡಿಗೆಯಾದರೂ ಆಗಬಹುದು. ಅದರ ತುಂಬಾ ತುಪ್ಪವನ್ನಾಗಲೀ ಎಣ್ಣೆಯನ್ನಾಗಲೀ ತುಂಬಿರಬೇಕು. ಅದನ್ನು ಆ ಲಕ್ಷ್ಮೀನಾರಾಯಣ ಸ್ವಾಮಿಯ ಮುಂದೆ

ತಸ್ಯೋಪರಿ ನ್ಯಸೇತ್ಪಾತ್ರಂ ತಾಮ್ರಂ ಮೃಣ್ಮಯಮೇವ ವಾ ।
ನವತಂತುಸಮಾಂ ವರ್ತಿಂ ತಸ್ಮಿನ್ಪಾತ್ರೇ ತು ನಿರ್ವಪೇತ್ || ೨೩ ||

ತತಃ ಪ್ರಬೋಧಯೇದ್ದೀಪಂ ಸ್ಥಾಪ್ಯ ಕುಂಭಂ ಸುನಿಶ್ಚಲಂ ।
ಪುಷ್ಪಗಂಧಾದಿಭಿಃಪೂಜ್ಯ ತತಸ್ಸಂಕಲ್ಪಯೇಚ್ಛುಚಿಃ || ೨೪ ||

ಮಂತ್ರೇಣಾನೇನ ದೇವರ್ಷೇ ಅಸಮೀರೇಷು ಧಾಮಸು ।
ಕಾಮೋ ಭೂತಸ್ಯ ಭವ್ಯಸ್ಯ ಸಮ್ರಾಡೇಕೋ ವಿರಾಜತೇ || ೨೫ ||

ದೀಪಸ್ಸಂವತ್ಸರಂ ಯಾವನ್ಮಯಾಯಂ ಪರಿಕಲ್ಪಿತಃ ।
ಅಗ್ನಿಹೋತ್ರಮವಿಚ್ಛಿನ್ನಂ ಪ್ರೀಯತಾಂ ಮಮ ಕೇಶವಃ || ೨೬ ||

ತತೋ ಜಿತೇಂದ್ರಿಯೋ ಭೂತ್ವಾ ಶ್ರುತಿಜ್ಞಾನಪರಾಯಣಃ ।
ನಾಲಪೇತ್ಪತಿತಾನ್ಪಾಪಾಂಸ್ತಥಾ ಪಾಷಂಡಿನೋ ನರಾನ್ || ೨೭ ||

---

ಇಡಬೇಕು. ಅದರ ಮೇಲೆ ಒಂದು ಸಣ್ಣ ತಾಮ್ರದ ಪಾತ್ರೆಯನ್ನಾಗಲೀ ಮಣ್ಣಿನ ಪಾತ್ರೆಯನ್ನಾಗಲೀ ಇಡಬೇಕು. ಅದು ಶ್ರಾವೆಯಾಗಿರಬೇಕು. ಅನಂತರ ಹೊಸ ಹೊಸ ಎಳೆಗಳಿಂದ ಸಮವಾಗಿ ಮಾಡಿದ ಒಂದು ಬತ್ತಿಯನ್ನು ಆ ಶ್ರಾವೆಯಲ್ಲಿ ಹಾಕಬೇಕು. ಆ ಗಡಿಗೆಯನ್ನೂ ಅಲ್ಲಾಡದಂತಿಟ್ಟು, ಅದರಮೇಲೆ ಶ್ರಾವೆಯನ್ನೂ ಅಲಾಡದಂತಿಟ್ಟು ಅದರಲ್ಲಿ ದೀಪವನ್ನು ಹಚ್ಚಬೇಕು. ಅನಂತರ ಆ ಕುಂಭವನ್ನು ಗಂಧ ಹೂಗಳಿಂದ ಪೂಜಿಸಿ ಅನಂತರ ಹೀಗೆ ಸಂಕಲ್ಪಮಾಡಬೇಕು.

೨೫. ಎಲೈ ದೇವರ್ಷಿಯೆ! ಗಾಳಿಯಾಡದ ಜಾಗದಲ್ಲಿ ದೀಪವನ್ನಿಟ್ಟು ಈ ಮಂತ್ರದಿಂದ ಸ್ಥಾಪಿಸಬೇಕು. ಎಲೈ ದೀಪವೇ! ಹಿಂದೆ ಆದದ್ದನ್ನು ಕೊಟ್ಟವನೂ ನೀನೆ. ಮುಂದಾಗುವುದನ್ನು ಕೊಡುವವನೂ ನೀನೆ. ನೀನೊಬ್ಬನೇ ಚಕ್ರವರ್ತಿಯಾಗಿ ಪ್ರಕಾಶಿಸುವೆ.

೨೬. ಈ ದೀಪವು ಒಂದು ವರ್ಷದವರಿವಿಗೂ ಇರುವಂತೆ ನಾನು ಮಾಡಿದ್ದೇನೆ. ಇದು ಮಧ್ಯದಲ್ಲಿ ಬಿಡುಗಡೆ ಬಾರದ ಅಗ್ನಿಹೋತ್ರವು. ಇದರಿಂದ ಕೇಶವನು ಪ್ರೀತನಾಗಲಿ.

೨೭. ಆಮೇಲೆ ಜಿತೇಂದ್ರಿಯನಾಗಿದ್ದುಕೊಂಡು ವೇದ ಮುಂತಾದುವುಗಳ ಪಾರಾಯಣ ಮಾಡುತ್ತಾ ಇರಬೇಕು. ಪತಿತರು, ಪಾಪಿಗಳು, ಪಾಷಂಡಿಗಳು ಇವರೊಡನೆ ಮಾತನಾಡಬಾರದು.

**ರಾತ್ರೌ ಜಾಗರಣಂ ಗೀತಂ ನೃತ್ಯವಾದ್ಯಾದಿಕೈಸ್ತಥಾ ।**
**ಪುಣ್ಯಪಾಠೈಶ್ಚ ವಿವಿಧೈರ್ಧರ್ಮಾಖ್ಯಾನೈರುಪೋಷಿತಃ　　|| ೨೮ ||**

**ತತಃ ಪ್ರಭಾತಸಮಯೇ ಕೃತಪೌರ್ವಾಹ್ಣಿಕಕ್ರಿಯಃ ।**
**ಬ್ರಾಹ್ಮಣಾನ್ಭೋಜಯೇದ್ಭಕ್ತ್ಯಾ ಯಥಾಶಕ್ತಿ ಪ್ರಪೂಜಯೇತ್ || ೨೯ ||**

**ಸ್ವಯಂ ಚ ಪಾರಣಂ ಕೃತ್ವಾ ಪ್ರಣಿಪತ್ಯ ವಿಸರ್ಜಯೇತ್ ।**
**ಏವಂ ಸಂವತ್ಸರಂ ಯಾವದಹೋರಾತ್ರಂ ದೃಢವ್ರತಃ　　|| ೩೦ ||**

**ದೀಪಂ ಪಲಸುವರ್ಣೇನ ತದರ್ಧಾರ್ಧೇನ ವಾ ಪುನಃ ।**
**ವರ್ತಿಸ್ತು ರಾಜತೀ ಪ್ರೋಕ್ತಾ ದ್ವಿಪಲಾರ್ಧಾಧಿಕಾಪಿ ವಾ　　|| ೩೧ ||**

---

೨೮. ರಾತ್ರಿಯಲ್ಲಿ ಜಾಗರಣೆ ಮಾಡಬೇಕು. ಆಗ ಹಾಡು ಕುಣಿತ ಮುಂತಾದುವುಗಳಿಂದಲೂ ಪುಣ್ಯಕಥೆಗಳಿಂದಲೂ ಧರ್ಮವನ್ನು ಬೋಧಿಸತಕ್ಕ ಇತರ ಕಥೆಗಳಿಂದಲೂ ವ್ಯವಹಾರ ಮಾಡುತ್ತ ಉಪವಾಸವಿರಬೇಕು.

೨೯. ಅನಂತರ ಬೆಳಗ್ಗೆ ಎದ್ದು ಸ್ನಾನಾಹ್ನಿಕಗಳನ್ನು ಮಾಡಿಕೊಂಡು ಬ್ರಾಹ್ಮಣರಿಗೆ ಸಂತರ್ಪಣೆ ಮಾಡಿ ತೃಪ್ತಿಪಡಿಸಬೇಕು. ಶಕ್ತಿಗೆ ಅನುಗುಣವಾಗಿ ದಾನಗಳನ್ನು ಕೊಟ್ಟು ಗೌರವಿಸಬೇಕು.

೩೦. ಅನಂತರ ತಾನು ಪಾರಣೆಯನ್ನು ಮಾಡಿ ಆ ಬ್ರಾಹ್ಮಣರಿಗೆ ನಮಸ್ಕರಿಸಿ ಕಳುಹಿಸಬೇಕು. ಈ ರೀತಿಯಾಗಿ ಮಾಡಿ ಆಮೇಲೆ ಜಿತೇಂದ್ರಿಯನಾಗಿ ವರ್ಷ ಪೂರ್ತಿಯಾಗುವವರೆಗೂ ಬೇರೆ ರೀತಿಯಾದ ಬುದ್ಧಿಯನ್ನು ಹೊಂದದೆ ನಿಯಮದಿಂದಿದ್ದು ವ್ರತವನ್ನು ಮುಗಿಸಬೇಕು.

೩೧. ದೀಪವನ್ನು ಒಂದುಪಲ ಚಿನ್ನದಿಂದ ಮಾಡಿಸಬೇಕು. ಇಲ್ಲದಿದ್ದರೆ ಅರ್ಧಪಲವಾಗಬಹುದು. ಅದೂ ಆಗದಿದ್ದರೆ ಕಾಲುಪಲ ಸುವರ್ಣದಲ್ಲಿಯಾದರೂ ಮಾಡಿಸಬೇಕು. ಬತ್ತಿಯನ್ನು ಬೆಳ್ಳಿಯಲ್ಲಿ ಮಾಡಿಸಬೇಕು. ಆ ಬತ್ತಿಯು ಎರಡು ಪಲವಾಗಿರಬೇಕು. ಅಥವಾ ದೀಪದ ತೂಕಕ್ಕಿಂತಲೂ ಒಂದೂವರೆಯಷ್ಟು ತೂಕವಾಗಿರಬೇಕು.

ಘೃತಪೂರ್ಣಂ ತಥಾ ಕುಂಭಂ ತಾಮ್ರಪಾತ್ರಸಮನ್ವಿತಂ ।
ಲಕ್ಷ್ಮೀನಾರಾಯಣೋ ದೇವೋ ಯಥಾಶಕ್ತಿ ಹಿರಣ್ಮಯಃ ॥ ೩೨ ॥

ಕಾರ್ಯೋ ಭಕ್ತ್ಯಾ ಮುತಾ ಪುಂಸಾ ಮುಕ್ತಿದ್ವಾರಮಭೀಪ್ಸತಾ ।
ತತೋ ನಿಮಂತ್ರಯೇದ್ವಿದ್ವಾನ್ ಬ್ರಾಹ್ಮಣಾನ್ಸಾಧುಸತ್ತಮಾನ್ ॥ ೩೩ ॥

ದ್ವಾದಶೋತ್ತಮಪಕ್ಷೇ ತು ವಿಪ್ರಾನ್ಷಣ್ಮಧ್ಯಮೇ ತಥಾ ।
ಅನ್ಯಥಾ ಕಾರಯೇತ್ತ್ರೀನ್ವಾ ಏವಂ ಕರ್ಮಕರಂ ದ್ವಿಜಂ ॥ ೩೪ ॥

ಸಪತ್ನೀಕಂ ದ್ವಿಜಂ ಶಾನ್ತಂ ಕ್ರಿಯಾವನ್ತಂ ವಿಶೇಷತಃ ।
ಇತಿಹಾಸಪುರಾಣಜ್ಞಂ ಧರ್ಮಜ್ಞಂ ಮೃದುಮೇವ ಚ ॥ ೩೫ ॥

ಪಿತೃಭಕ್ತಂ ಗುರುಪರಂ ದೇವಬ್ರಾಹ್ಮಣಪೂಜಕಂ ।
ಪಾದಾರ್ಘ್ಯದಾನವಿಧಿನಾ ವಸ್ತ್ರಾಲಂಕಾರಭೂಷಣೈಃ ॥ ೩೬ ॥

---

೩೨–೩೯. ತುಪ್ಪ ತುಂಬಿರುವ ಗಡಿಗೆ (ಬಿಂದಿಗೆ) ಯನ್ನು ತಾಮ್ರದ್ದನ್ನು ಮಾಡಿಸಬೇಕು. ಲಕ್ಷ್ಮೀನಾರಾಯಣಸ್ವಾಮಿಯನ್ನು ಶಕ್ತ್ಯನುಸಾರವಾಗಿ ಚಿನ್ನದಿಂದ ಮಾಡಿಸಬೇಕು. ಭಕ್ತಿಯಿಂದ ಈ ರೀತಿಯಾಗಿ ಮಾಡಿಸಲು ಮುಕ್ತಿಯು ಸಿಕ್ಕುವುದು. ಅನಂತರ ಯೋಗ್ಯರೂ ಸಾಧುಗಳೂ ಆದ ಬ್ರಾಹ್ಮಣರನ್ನು ಹನ್ನೆರಡು ಜನರನ್ನು ಆಮಂತ್ರಿಸುವುದು ಉತ್ತಮಪಕ್ಷವು. ಆರು ಜನರನ್ನು ಆಮಂತ್ರಿಸುವುದು ಮಧ್ಯಮಪಕ್ಷವು. ಮೂರುಜನರನ್ನು ಕರೆಯುವುದು ಕನಿಷ್ಟಪಕ್ಷವು. ಅದಕ್ಕಿಂತಲೂ ಕಡಿಮೆ ಹೇಳಬಾರದು. ಈ ರೀತಿಯಾಗಿ ಶಕ್ತಿಗನುಗುಣವಾಗಿ ಬ್ರಾಹ್ಮಣರಿಗೆ ಹೇಳಿಕೊಳ್ಳಬೇಕು. ಅಂತೆಯೇ ಪುರೋಹಿತನನ್ನೂ ಅವನ ಹೆಂಡತಿಯನ್ನೂ ಕರೆಯಬೇಕು. ಆ ಪುರೋಹಿತನು ಕರ್ಮವನ್ನು ಮಾಡಿಸತಕ್ಕ ಬ್ರಾಹ್ಮಣನಾಗಿರಬೇಕು. ಶಾನ್ತನಾಗಿರಬೇಕು. ಬ್ರಾಹ್ಮಣಕ್ರಿಯೆಯಲ್ಲಿ ಆಸಕ್ತನಾಗಿದ್ದುಕೊಂಡು ಆಚರಿಸುವವನಾಗಿರಬೇಕು. ಮತ್ತು ಆ ಬ್ರಾಹ್ಮಣನು ಇತಿಹಾಸ ಪುರಾಣಗಳನ್ನು ತಿಳಿದವನಾಗಿಯೂ, ಧರ್ಮ ಅಧರ್ಮಗಳನ್ನು ಬಲ್ಲವನಾಗಿಯೂ, ಶಾಂತನೂ ಮೃದುವೂ ಆಗಿಯೂ, ಪಿತೃಭಕ್ತನೂ ಗುರುಗಳಲ್ಲಿ ವಿಧೇಯನೂ ಆಗಿಯೂ, ಇರಬೇಕು. ದೇವತೆಗಳನ್ನೂ ಬ್ರಾಹ್ಮಣರನ್ನೂ ಪೂಜಿಸುವವನಾಗಿರಬೇಕು. ಅಂತಹ ಬ್ರಾಹ್ಮಣನನ್ನು ಕರೆದು ಅವನಿಗೆ ಪಾದ್ಯ ಅರ್ಘ್ಯಗಳನ್ನು ಕೊಟ್ಟು ಬಟ್ಟೆ ಒಡವೆಗಳಿಂದ ಪೂಜಿಸಬೇಕು. ಆತನ ಹೆಂಡತಿಯನ್ನೂ

**ಸಂಪೂಜ್ಯ ಪತ್ನ್ಯಾ ಸಹಿತಮೇಕಂ ಭಕ್ತ್ಯಾ ಚ ಪೂರ್ವವತ್ ।**
**ಲಕ್ಷ್ಮೀನಾರಾಯಣಂ ದೇವಂ ದೀಪವರ್ತಿಯುತಂ ತಥಾ || ೩೭ ||**

**ತಾಮ್ರಪಾತ್ರೋಪರಿ ಸ್ಥಾಪ್ಯ ಘೃತಕುಂಭೇನ ಸಂಯುತಂ ।**
**ಬ್ರಾಹ್ಮಣಾಯ ತತೋ ದದ್ಯಾದ್ಧ್ಯಾತ್ವಾ ನಾರಾಯಣಂ ಪರಂ || ೩೮ ||**

**ಮಂತ್ರೇಣಾನೇನ ದೇವರ್ಷೇ ತಮಹಂ ಕಥಯಾಮಿ ತೇ ।**
**ಅವಿದ್ಯಾತಮಸಾ ವ್ಯಾಪ್ತೇ ಸಂಸಾರೇ ಪಾಪನಾಶನಃ ।**
**ಜ್ಞಾನಪ್ರದೋ ಮೋಕ್ಷದಶ್ಚ ತಸ್ಮಾದ್ದತ್ತೋ ಮಯಾನಘ || ೩೯ ||**

**|| ಇತಿ ಮಂತ್ರಃ ||**

**ದಕ್ಷಿಣಾಂ ಚ ಯಥಾಶಕ್ತಿ ದತ್ವಾ ವಿಪ್ರಾಯ ಭಕ್ತಿತಃ ।**
**ಭೋಜಯೇದ್ಬ್ರಾಹ್ಮಣಾನ್ ಪಶ್ಚಾತ್ ಘೃತಪಾಯಸಮೋದಕೈಃ|| ೪೦ ||**

---

ಸೀರೆ, ಒಡವೆ ಮುಂತಾದುವುಗಳಿಂದಲೂ ಅರಿಶಿನ, ಕುಂಕುಮಗಳಿಂದಲೂ, ಅಲಂಕರಿಸಿ ಪೂಜಿಸಬೇಕು. ಈರೀತಿ ದಂಪತಿಪೂಜೆಯನ್ನು ಮಾಡಬೇಕು. ಆ ಲಕ್ಷ್ಮೀನಾರಾಯಣ ಪ್ರತಿಮೆಯನ್ನೂ ದೀಪವನ್ನೂ, ಬತ್ತಿಯನ್ನೂ ಆ ತಾಮ್ರದ ಪಾತ್ರೆಯಲ್ಲಿ ಇಡಬೇಕು. ಇವನ್ನೂ ಆ ತುಪ್ಪದ ಬಿಂದಿಗೆಯನ್ನೂ ಆ ಬ್ರಾಹ್ಮಣನಿಗೆ ಕೊಡಬೇಕು. ಆ ಬ್ರಾಹ್ಮಣನನ್ನೂ ಲಕ್ಷ್ಮೀನಾರಾಯಣನೆಂದೇ ಭಾವಿಸಬೇಕು. ಕೊಡುವಾಗ ಈ ಮಂತ್ರವನ್ನು ಹೇಳಬೇಕು- ಆ ಮಂತ್ರವನ್ನು ಹೇಳುತ್ತೇನೆ ಕೇಳು. ಅವಿದ್ಯೆ (ಮಾಯೆ) ಯೆಂಬ ಕತ್ತಲೆಯಿಂದ ಕೂಡಿದ ಈ ಸಂಸಾರದಲ್ಲಿ ನೀನು ಪಾಪವನ್ನು ನಾಶಮಾಡತಕ್ಕವನಾಗಿಯೂ, ಜ್ಞಾನವನ್ನು ಕೊಡತಕ್ಕವನಾಗಿಯೂ, ಮೋಕ್ಷವನ್ನು ಕೊಡತಕ್ಕವನಾಗಿಯೂ ಇದ್ದೀಯೆ. ಎಲೈ ಉತ್ತಮ ಪದಾರ್ಥವಾದ ದೇವನೇ! ಆದ್ದರಿಂದಲೇ ನಾನು ಇದನ್ನು ದಾನ ಮಾಡಿದ್ದೇನೆ. ಇದು ಮಂತ್ರವು.

೪೦. ಶಕ್ತಿಗೆ ಅನುಗುಣವಾಗಿ ದಕ್ಷಿಣೆಯನ್ನು ಕೊಡಬೇಕು. ಅನಂತರ ತುಪ್ಪ ಪಾಯಸ ಒಬ್ಬಟ್ಟು ಮುಂತಾದ ಭಕ್ಷ್ಯಭೋಜ್ಯಗಳಿಂದ ಬ್ರಾಹ್ಮಣರಿಗೆ ತೃಪ್ತಿಯಾಗುವಂತೆ ಊಟಮಾಡಿಸಬೇಕು.

ವಸ್ತ್ರೈರಾಚ್ಛಾದಯೇತ್ಪಶ್ಚಾತ್ಸಪತ್ನೀಕಂ ತಥಾ ದ್ವಿಜಂ ।
ಶಯ್ಯಾಂ ಸೋಪಸ್ಕರಾಂ ದದ್ಯಾದ್ಧೇನುಂ ಚೈವ ಸವತ್ಸಕಾಂ ॥ ೪೧ ॥

ತೇಭ್ಯಸ್ತು ದಕ್ಷಿಣಾಂ ದದ್ಯಾದ್ಯಥಾವಿತ್ತಾನುಸಾರತಃ ।
ಸುಹೃತ್ಸ್ವಜನಬಂಧೂಂಶ್ಚ ಭೋಜಯೇತ್ಪೂಜಯೇತ್ತಥಾ ॥ ೪೨ ॥

ಏವಂ ಮಹೋತ್ಸವಂ ಕುರ್ಯಾದ್ದೀಪವ್ರತಸಮಾಪನೇ ।
ತತೋ ವಿಸರ್ಜಯೇತ್ಪಶ್ಚಾತ್ಪ್ರಣಿಪತ್ಯ ಕ್ಷಮಾಪಯೇತ್ ॥ ೪೩ ॥

ಏವಂ ಕೃತೇ ತು ಯತ್ಪುಣ್ಯಂ ತಥಾ ಸಂಕ್ರಾಂತಿಕೈಶ್ಚ ಯತ್ ।
ಸಂವತ್ಸರಾಖ್ಯದೀಪಸ್ಯ ತತ್ಪುಣ್ಯಂ ಪ್ರಾಪ್ಯತೇ ನರೈಃ ॥ ೪೪ ॥

ಮಾಸವ್ರತೈಶ್ಚ ಯತ್ಪುಣ್ಯಂ ತತ್ಪುಣ್ಯಂ ಪ್ರಾಪ್ಯತೇ ನರೈಃ ।
ಸಂವತ್ಸರಸ್ಯ ದೀಪಸ್ಯ ವ್ರತೇನ ಚ ರಿತೇನ ಚ ॥ ೪೫ ॥

---

೪೧. ಅನಂತರ ಆ ದಂಪತಿಗಳನ್ನು ಪೂಜಿಸಿ ಹೊಸ ಬಟ್ಟೆಯನ್ನು ಉಡಿಸಿ, ಹಾಸಿಗೆಯನ್ನೂ ಅದಕ್ಕೆ ಬೇಕಾದುದೆಲ್ಲವನ್ನೂ, ಅವನಿಗೆ ಕೊಡಬೇಕು. ಒಂದು ಕರೆಯುವ ಹಸುವನ್ನು ಕರುವಿನೊಂದಿಗೆ ಕೊಡಬೇಕು. ಇದು ಮತ್ತಾರಿಗಾದರೂ ಆಗಬಹುದು.

೪೨. ಅವರಿಗೆ ಶಕ್ತ್ಯಾನುಸಾರ ದಕ್ಷಿಣೆಯನ್ನು ಕೊಡಬೇಕು. ಅನಂತರ ಸ್ನೇಹಿತರು ಆಪ್ತರು ಇಷ್ಟರು ಬಂಧುಗಳು, ಇವರನ್ನೂ ಊಟಮಾಡಿಸಿ ಗೌರವಿಸಬೇಕು.

೪೩. ಈ ರೀತಿಯಾಗಿ ದೀಪವ್ರತದ ಕೊನೆಯಲ್ಲಿ ಉತ್ಸವವನ್ನೂ ಮಾಡಬೇಕು. ಬ್ರಾಹ್ಮಣರೆಲ್ಲರನ್ನೂ ಕ್ಷಮಾಪಣೆಯನ್ನು ಕೇಳುತ್ತಾ ನಮಸ್ಕರಿಸಿ ಕಳುಹಿಸಬೇಕು.

೪೪. ಈರೀತಿಯಾಗಿ ಸಂವತ್ಸರವೆಂಬ ದೀಪವನ್ನು ದಾನಮಾಡಿದರೆ ಸಂಕ್ರಾಂತಿ ದೀಪದಾನದ ಫಲವೂ ಬರುತ್ತದೆ. ಈ ದೀಪದಾನದ ಫಲವೂ ಬರುತ್ತದೆ.

೪೫-೪೬. ಹೀಗೆ ಮಾಡಿದರೆ ಮಾಸವ್ರತದಿಂದ ಬರುವ ಪುಣ್ಯವೂ ಇದರಿಂದಲೇ ಬರುತ್ತದೆ. ಈ ಸಂವತ್ಸರ ದೀಪದಾನದಿಂದ, ದಾನವ್ರತಗಳಿಂದಲೂ

ದಾನವ್ರತೈರ್ಯಥಾಸಂಖ್ಯೈರ್ಯಚ್ಚ ಯೋಗವ್ರತೈಸ್ತಥಾ ।
ತತ್ಫಲಂ ಸಮವಾಪ್ನೋತಿ ದೀಪೇ ಸಂವತ್ಸರೇ ಕೃತೇ || ೪೬ ||

ಗೋಭೂಹಿರಣ್ಯದಾನೇನ ಗೃಹಾದೀನಾಂ ವಿಶೇಷತಃ ।
ಯತ್ಫಲಂ ಲಭತೇ ವಿದ್ವಾಂಸ್ತತ್ಫಲಂ ದೀಪತೋ ಭವೇತ್ || ೪೭ ||

ದೀಪದಃ ಕಾಂತಿಮಾಪ್ನೋತಿ ದೀಪದೋ ಧನಮಕ್ಷಯಂ ।
ದೀಪದೋ ಜ್ಞಾನಮಾಪ್ನೋತಿ ದೀಪದಃ ಪರಮಂ ಸುಖಂ || ೪೮ ||

ದೀಪದಾನಾಚ್ಚ ಸೌಭಾಗ್ಯಂ ವಿದ್ಯಾಮತ್ಯಂತನಿರ್ಮಲಾಂ ।
ಆರೋಗ್ಯಂ ಪರಮಾಮೃದ್ಧಿಂ ಲಭತೇ ನಾತ್ರ ಸಂಶಯಃ || ೪೯ ||

ದೀಪದಸ್ಸುಭಗಾಂ ಭಾರ್ಯಾಂ ಸರ್ವಲಕ್ಷಣಸಂಯುತಾಂ ।
ಪುತ್ರಾನ್ಪೌತ್ರಾನ್ ಪ್ರಪೌತ್ರಾಂಶ್ಚ ಸಂತತಿಂ ಚಾಕ್ಷಯಾಂ ಲಭೇತ್ || ೫೦ ||

---

ಯೋಗವ್ರತಗಳಿಂದಲೂ, ಬರತಕ್ಕ ಫಲವನ್ನು ಹೊಂದುತ್ತಾನೆ. ಆದ್ದರಿಂದ ಈ ಸಂವತ್ಸರ ದೀಪ ವ್ರತವನ್ನು ಮಾಡಬೇಕು.

೪೭. ಗೋದಾನ, ಹಿರಣ್ಯದಾನ, ಭೂದಾನ, ಗೃಹದಾನಗಳಿಂದ ಮನುಷ್ಯನಿಗೆ ಬರುವ ಫಲವು ಈ ದೀಪದಾನದಿಂದ ಬರುತ್ತದೆ.

೪೮. ದೀಪದಾನಮಾಡುವವನು ಕಾಂತಿಯನ್ನೂ ನಾಶರಹಿತವಾದ ಧನವನ್ನೂ, ಜ್ಞಾನವನ್ನೂ ಸುಖವನ್ನೂ ಹೊಂದುತ್ತಾನೆ.

೪೯. ದೀಪದಾನದಿಂದ ಸೌಭಾಗ್ಯವನ್ನೂ, ಒಳ್ಳೆಯ ವಿದ್ಯೆಯನ್ನೂ ಆರೋಗ್ಯವನ್ನೂ ಅಭಿವೃದ್ಧಿಯನ್ನೂ ಹೊಂದುತ್ತಾನೆ. ಇದರಲ್ಲಿ ಸಂಶಯವೇ ಇಲ್ಲ.

೫೦. ದೀಪದಾನವನ್ನು ಮಾಡಿದವನು ಚೆನ್ನಾಗಿರುವ, ಲಕ್ಷಣಗಳಿಂದ ಕೂಡಿದ ಹೆಂಡತಿಯನ್ನು ಹೊಂದುತ್ತಾನೆ. ಮತ್ತು ಮಕ್ಕಳು, ಮೊಮ್ಮಕ್ಕಳು, ಮರಿಮಕ್ಕಳನ್ನು ಹೊಂದಿ ನಾಶರಹಿತವಾದ ಸಂತತಿಯನ್ನು ಹೊಂದುತ್ತಾನೆ.

ಬ್ರಾಹ್ಮಣಃ ಪರಮಂ ಜ್ಞಾನಂ ಕ್ಷತ್ರಿಯೋ ರಾಜ್ಯಮುತ್ತಮಂ ।
ವೈಶ್ಯೋ ಧನಂ ಪಶೂನ್ಸರ್ವಾನ್ ಶೂದ್ರಃ ಸುಖಮವಾಪ್ನುಯಾತ್ ॥ ೫೧ ॥

ಕುಮಾರೀ ಚಾಪಿ ಭರ್ತಾರಂ ಸರ್ವಲಕ್ಷಣಸಂಯುತಂ ।
ಪ್ರಾಪ್ನೋತಿ ಪರಮಾಯುಶ್ಚ ಪುತ್ರಾನ್ಪೌತ್ರಾಂಶ್ಚ ಪುಷ್ಕಲಾನ್ ॥ ೫೨ ॥

ವೈಧವ್ಯಂ ನೈವ ಯುವತೀ ಕದಾಚಿದಪಿ ಪಶ್ಯತಿ ।
ನ ವಿಯೋಗಮವಾಪ್ನೋತಿ ದೀಪದಾನಪ್ರಭಾವತಃ ॥ ೫೩ ॥

ನಾಧಯೋ ವ್ಯಾಧಯಶ್ಚೈವ ಜಾಯಂತೇ ದೀಪದಾನತಃ ।
ಭಯಾತ್ಪ್ರಮುಚ್ಯತೇ ಭೀತೋ ಬದ್ಧೋ ಮುಚ್ಯೇತ ಬಂಧನಾತ್ ॥ ೫೪ ॥

ಬ್ರಹ್ಮಹತ್ಯಾದಿಭಿಃ ಪಾಪೈಃ ದೀಪವ್ರತಪರಾಯಣಃ ।
ಮುಚ್ಯತೇ ನಾತ್ರ ಸಂದೇಹೋ ಬ್ರಹ್ಮಣೋ ವಚನಂ ತಥಾ ॥ ೫೫ ॥

---

೫೧. ಬ್ರಾಹ್ಮಣನು ಜ್ಞಾನವನ್ನೂ, ಕ್ಷತ್ರಿಯನು ರಾಜ್ಯವನ್ನೂ, ವೈಶ್ಯನು ಧನವನ್ನೂ, ಪಶುಗಳನ್ನೂ, ಶೂದ್ರನು ಸುಖವನ್ನೂ ಹೊಂದುತ್ತಾರೆ.

೫೨. ಮದುವೆಯಾಗದವಳು ಈ ದೀಪದಾನವನ್ನು ಮಾಡಿದರೆ ಎಲ್ಲಾ ಲಕ್ಷಣದಿಂದ ಕೂಡಿದ ಗಂಡನನ್ನು ಹೊಂದುತ್ತಾಳೆ. ಮತ್ತು ದೀರ್ಘಾಯುಷ್ಯವನ್ನೂ ಹೊಂದುತ್ತಾಳೆ. ಅನೇಕರಾದ ಮಕ್ಕಳುಗಳನ್ನೂ ಮುಮ್ಮಕ್ಕಳುಗಳನ್ನೂ ಹೊಂದುತ್ತಾಳೆ.

೫೩. ಇದನ್ನು ಮಾಡಿದರೆ ಮುತ್ತೈದೆಯಾದವಳು ವೈಧವ್ಯವನ್ನು ಹೊಂದುವುದೇ ಇಲ್ಲ. ಗಂಡನೊಡನೆ ವಿಯೋಗವನ್ನೂ ಹೊಂದುವುದಿಲ್ಲ.

೫೪. ಈ ದೀಪದಾನದಿಂದ ಮನೋವ್ಯಥೆಯೂ ರೋಗಗಳೂ, ಉಂಟಾಗುವುದೇ ಇಲ್ಲ. ಭಯಸ್ಥನಿಗೆ ಯಾವುದರಿಂದ ಭಯವಾಗುತ್ತದೆಯೋ ಅದು ತಪ್ಪಿ ಹೋಗುತ್ತದೆ. ಬಂಧನದಲ್ಲಿರುವವನು ಅದರಿಂದ ಬಿಡುಗಡೆ ಹೊಂದುತ್ತಾನೆ.

೫೫. ಈ ದೀಪದಾನದ ಮಹಿಮೆಯಿಂದ ಬ್ರಹ್ಮಹತ್ಯಾದಿ ಪಾಪಗಳೂ ಹೋಗುತ್ತವೆ. ಇದರಲ್ಲಿ ಸಂದೇಹವಿಲ್ಲ. ಹೀಗೆಂದು ಬ್ರಹ್ಮನೇ ಹೇಳಿರುವನು.

ಚಾಂದ್ರಾಯಣಾನಿ ಕೃಚ್ಛ್ರಾಣಿ ಚರಿತಾನಿ ನ ಸಂಶಯಃ ।
ಯೇನ ಸಾವಂತ್ಸರೋ ದೀಪೋ ಬೋಧಿತಃ ಶಾಶ್ವತೋ ಹರೇಃ ॥ ೫೬ ॥

ತೇ ಧನ್ಯಾಸ್ತೇ ಮಹಾತ್ಮನಸ್ತೈಃ ಪ್ರಾಪ್ತಂ ಜನ್ಮನಃ ಫಲಂ ।
ಯೈಃ ಸಂಪೂಜ್ಯ ಹರಿಂ ಭಕ್ತ್ಯಾ ದೀಪಸ್ಸಾಂವತ್ಸರಃ ಕೃತಃ ॥ ೫೭ ॥

ಯೇಽಪಿ ಸಂವರ್ತಯಂತೀಹ ದೀಪವರ್ತಿ ಶಲಾಕಯಾ ।
ತೇ ಯಾಂತಿ ಪರಮಂ ಸ್ಥಾನಂ ಯತ್ಸುರೈರಪಿ ದುರ್ಲಭಂ ॥ ೫೮ ॥

ಯೇ ಚ ತೈಲಂ ಚ ವರ್ತಿಂ ಚ ಯಥಾಶಕ್ತಿ ಪ್ರದೀಪಕೇ ।
ಪ್ರಕ್ಷೇಪಯಂತಿ ಸತತಂ ತೇ ಯಾಂತಿ ಪರಮಾಂ ಗತಿಂ ॥ ೫೯ ॥

ಗಚ್ಛಂತಂ ದೀಪಕಂ ಶಾಂತ್ತಮಶಕ್ತಾ ಯೇ ಪ್ರಬೋಧಿತುಂ ।
ಕಥಯಂತ್ಯನ್ಯಲೋಕಾನಾಂ ತೇಽಪಿ ತತ್ಫಲಭಾಗಿನಃ ॥ ೬೦ ॥

---

೫೬. ಯಾವನು ಈ ಸಂವತ್ಸರ ದೀಪವನ್ನು ಹಚ್ಚುವನೋ ಅವನು ಚಾಂದ್ರಾಯಣ, ಕೃಚ್ಛ್ರ, ಅತಿಕೃಚ್ಛ್ರಗಳನ್ನು ಮಾಡಿದಂತಾಗಿ ಆ ಫಲವು ಬರುತ್ತದೆ. ಸಂಶಯವಿಲ್ಲ.

೫೭. ಯಾರು ಹರಿಯನ್ನು ಭಕ್ತಿಯಿಂದ ಪೂಜಿಸಿ ಸಂವತ್ಸರ ದೀಪವನ್ನು ಹಚ್ಚುವರೋ ಅವರೇ ಧನ್ಯರು. ಅವರೇ ಮಹಿಮರು. ಅವರು ಹುಟ್ಟಿದುದಕ್ಕೆ ಜನ್ಮವು ಸಾರ್ಥಕವಾಯಿತು.

೫೮. ಯಾರು ಕಡ್ಡಿಯಿಂದ ಈ ದೀಪವನ್ನು ದೊಡ್ಡದು ಮಾಡುತ್ತಾರೆಯೋ ಅವರೂ ಕೂಡ ದೇವತೆಗಳಿಗೂ ಹೊಂದಲು ಅಸಾಧ್ಯವಾದ ಪುಣ್ಯಸ್ಥಾನವನ್ನು ಹೊಂದುತ್ತಾರೆ.

೫೯. ಯಾರು ಈ ದೊಡ್ಡದೀಪಕ್ಕೆ ಎಣ್ಣೆಯನ್ನೂ ಬತ್ತಿಯನ್ನೂ ಯಾವಾಗಲೂ ಭಕ್ತಿಯಿಂದ ಹಾಕುತ್ತಿರುವರೋ ಅವರಿಗೂ ಉತ್ತಮ ಗತಿಯು ಬರುತ್ತದೆ.

೬೦. ದೀಪವು ಆರಿಹೋಗುತ್ತಿರುವಾಗ ಅದನ್ನು ಸರಿಮಾಡಲು ತಮ್ಮ ಕೈಯಲ್ಲಾಗದಿದ್ದರೆ ಮತ್ತೊಬ್ಬರಿಗಾದರೂ ಯಾರು ಹೇಳುತ್ತಾರೆಯೋ ಅವರು ಆ ದೀಪವನ್ನು ಹಚ್ಚಿಸಿದ ಫಲಕ್ಕೆ ಭಾಗಿಗಳಾಗುತ್ತಾರೆ.

**ಸ್ತೋಕಂ ಸ್ತೋಕಂ ಚ ಭಿಕ್ಷಿತ್ವಾ ತೈಲಂ ದೀಪಾರ್ಥಮೇವ ಚ |**
**ಕರೋತಿ ದೀಪಕಂ ವಿಷ್ಣೋಃ ಪುಣ್ಯಂ ತೇನಾಪಿ ಲಭ್ಯತೇ || ೬೧ ||**

**ದೀಪಂ ಪ್ರಜ್ವಾಲ್ಯಮಾನಂ ತು ಯಃ ಪಶ್ಯತ್ಯಧಮೋ ನರಃ |**
**ಕೃತಾಂಜಲೀಪುಟೋ ವಿಷ್ಣೋಃ ವಿಷ್ಣುಲೋಕಮವಾಪ್ನುಯಾತ್|| ೬೨ ||**

**ದೀಪಪ್ರಜ್ವಾಲನೇ ಬುದ್ಧಿಂ ಯೋ ದದ್ಯಾತ್ಕುರುತೇ ಸ್ವಯಂ ;**
**ಸರ್ವಪಾಪವಿನಿರ್ಮುಕ್ತೋ ವಿಷ್ಣುಲೋಮವಾಪ್ನುಯಾತ್ || ೬೩ ||**

**ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಂ |**
**ಯಸ್ಯ ಶ್ರವಣಮಾತ್ರೇಣ ಮುಚ್ಯತೇ ಸರ್ವಕಿಲ್ಬಿಷೈಃ || ೬೪ ||**

**ಸರಸ್ವತ್ಯಾಸ್ತಟೇ ರಮ್ಯೇ ಸಿದ್ಧಾಶ್ರಮ ಇತಿ ಶ್ರುತಃ |**
**ತತ್ರಾವಸದ್ದ್ವಿಜಃ ಪೂರ್ವಂ ಕಪಿಲೋ ನಾಮ ವೇದವಿತ್ || ೬೫ ||**

---

೬೧. ಯಾವನು ದೀಪಕ್ಕೋಸ್ಕರವಾಗಿ ಮನೆ ಮನೆಗೂ ಹೋಗಿ ಸ್ವಲ್ಪ ಸ್ವಲ್ಪವಾಗಿ ಎಣ್ಣೆಯನ್ನು ಭಿಕ್ಷೆಬೇಡಿ ತಂದು ವಿಷ್ಣುವಿನ ಮುಂದೆ ದೀಪ ಹಚ್ಚುವನೋ ಅವನಿಗೂ ಈ ಫಲವು ಬರುತ್ತದೆ.

೬೨. ದೀಪವನ್ನು ಹತ್ತಿಸಿ ಅದರಿಂದ ವಿಷ್ಣುವಿನ ಮುಖವನ್ನು ಕೈಮುಗಿದು ಕೊಂಡು ನೋಡುವ ನೀಚಮನುಷ್ಯನೂ ಕೂಡ ವಿಷ್ಣುಲೋಕವನ್ನು ಹೊಂದುತ್ತಾನೆ.

೬೩. ದೀಪವನ್ನು ಹತ್ತಿಸುವುದರಲ್ಲಿ ಬುದ್ಧಿಯು ತನಗೆ ಹುಟ್ಟಿದರೂ ಸರಿ, ಅಥವಾ ಮತ್ತೊಬ್ಬರಿಗೆ ಆರೀತಿ ಮಾಡುವಂತೆ ಹೇಳಿದರೂ ಸರಿ. ಅವನು ಪಾಪ ಗಳನ್ನು ಕಳೆದುಕೊಂಡು ವಿಷ್ಣುಲೋಕವನ್ನು ಹೊಂದುತ್ತಾನೆ.

೬೪. ಇದರ ವಿಷಯದಲ್ಲಿ ಒಂದು ಕಥೆಯನ್ನು ಹೇಳುತ್ತೇನೆ ಕೇಳು. ಇದನ್ನು ಕೇಳುವುದರಿಂದಲೇ ಎಲ್ಲಾ ಪಾಪಗಳೂ ಹೋಗುವುವು.

೬೫. ಸರಸ್ವತೀ ನದಿಯ ದಡದಲ್ಲಿ ಸಿದ್ಧಾಶ್ರಮವೆಂಬುದೊಂದು ಪ್ರಸಿದ್ಧ ಆಶ್ರಮವಿದೆ. ಅಲ್ಲಿ ಕಪಿಲನೆಂಬ ಒಬ್ಬ ಬ್ರಾಹ್ಮಣನು ವೇದಾಧ್ಯಯನ ಮಾಡಿಕೊಂಡು ವಾಸವಾಗಿದ್ದನು.

ವ್ರತೋಪವಾಸನಿರತೋ ದರಿದ್ರಃ ಶ್ರೋತ್ರಿಯಸ್ತಥಾ ।
ಭಿಕ್ಷಾವೃತ್ತ್ಯಾ ಚ ಕುರುತೇ ಕುಟುಂಬಪರಿಪಾಲನಂ ॥ ೬೬ ॥

ವ್ರತೋಪವಾಸನಿಯಮೈರ್ವಿಷ್ಣುಮಾರಾಧಯತ್ಯಸೌ ।
ವಿಷ್ಣುಂ ಸಂಪೂಜ್ಯ ವಿಧಿವದ್ದೀಪಂ ಬೋಧಯತೇ ಸದಾ ॥ ೬೭ ॥

ಸಮಾದಾಯ ಚ ತತ್ತೈಲಂ ಸ್ವಗೃಹೇ ಪ್ರೂಜ್ಯ ಕೇಶವಂ ।
ದೀಪಂ ಭಕ್ತ್ಯಾ ಚ ಪರಯಾ ಬೋಧಯೇದ್ಧರಿತುಷ್ಟಯೇ ॥ ೬೮ ॥

ಏವಂ ಪ್ರವರ್ತಮಾನಸ್ಯ ಕಪಿಲಸ್ಯ ಮಹಾತ್ಮನಃ ।
ಮಾರ್ಜಾರಸ್ತೀಕ್ಷ್ಣದಂಷ್ಟ್ರಸ್ತು ಮೂಷಕಾನ್ಭಕ್ಷಯೇತ್ಸದಾ ॥ ೬೯ ॥

ತತ್ರಾಗಚ್ಛತಿ ಭಕ್ಷ್ಯಾರ್ಥಂ ಮೂಷಕಾಣಾಮಹರ್ನಿಶಂ ।
ಕೃತ್ವಾ ಧ್ಯಾನಂ ಸ್ವಭಕ್ಷ್ಯಾರ್ಥಂ ನಿತ್ಯಂ ನಾರಾಯಣಾಗ್ರತಃ ॥ ೭೦ ॥

---

೬೬. ಅವನು ವ್ರತಗಳನ್ನೂ ಉಪವಾಸಗಳನ್ನೂ ಮಾಡುತ್ತ ಶ್ರುತಿ ಕರ್ಮದಲ್ಲಿ ಆಸಕ್ತನಾಗಿ ಅದರಂತೆ ನಡೆಯುತ್ತಿದ್ದನು. ಭಿಕ್ಷೆಯನ್ನೂ ಮಾಡಿ ಕೊಂಡು ಸಂಸಾರವನ್ನು ಸಾಕುತ್ತಿದ್ದನು.

೬೭. ವ್ರತ ಉಪವಾಸ, ಇನ್ನೂ ಇತರ ನಿಯಮಗಳಿಂದ ವಿಷ್ಣುವನ್ನು ಪೂಜಿಸುತ್ತ ಯಾವಾಗಲೂ ದೀಪವನ್ನು ಹಚ್ಚಿಕೊಂಡಿದ್ದನು.

೬೮. ಮನೆ ಮನೆಗೂ ಹೋಗಿ ಎಣ್ಣೆಯನ್ನು ಭಿಕ್ಷಬೇಡಿ ತಂದು ಕೇಶವನಿಗೆ ಪೂಜಿಸಿ ಅವನ ಮುಂದೆ ಭಕ್ತಿಯಿಂದ ಯಾವಾಗಲೂ ದೀಪವನ್ನು ಹಚ್ಚುತ್ತಿದ್ದನು.

೬೯. ಹೀಗೆ ಇವನು ಪೂಜಿಸುತ್ತಿರಲು ಇವನ ಮನೆಯಲ್ಲಿ ಒಂದು ಬೆಕ್ಕು ಇದ್ದಿತು. ಅದು ಆ ಮನೆಯಲ್ಲಿರುವ ಇಲಿಗಳೆಲ್ಲವನ್ನೂ ತಿನ್ನುತ್ತಿದ್ದಿತು.

೭೦–೭೧. ಅಲ್ಲಿಗೆ ಎಣ್ಣೆ ಕುಡಿಯುವುದಕ್ಕೆ ಬರುವ ಇಲಿಗಳನ್ನು ತಿನ್ನು ವುದಕ್ಕೆ ಆ ಬೆಕ್ಕು ಬರುತ್ತಾ ಆ ನಾರಾಯಣ ಸ್ವಾಮಿಯ ಎದುರಿನಲ್ಲಿ ಇಲಿಗಳಿ ಗೋಸ್ಕರ ಧ್ಯಾನಮಾಡುವವನಂತೆ ಕುಳಿತಿರುತ್ತಿದ್ದಿತು. ಇದೇ ರೀತಿಯಿರುತ್ತಾ

ಭಕ್ಷಿತಾ ಬಹವಸ್ತೇನ ಮೂಷಿಕಾ ದ್ವಿಜವೇಶ್ಮನಿ ।
ಯೇ ಯೇ ತೈಲಾರ್ಥಮಾಯಾಂತಿ ವರ್ತಿಕಾಹರಣಾಯ ಚ ॥ ೭೦ ॥

ತಾಂಸ್ತಾಂಸ್ತು ಭಕ್ಷಯತ್ಯೇವ ಮೂಷಕಾನ್ಧ್ಯಾನತತ್ಪರಃ ।
ಏವಂ ಪ್ರವರ್ತಮಾನಸ್ಯ ಕದಾಚಿತ್ಕಾಲಪರ್ಯಯಾತ್ ॥ ೭೧ ॥

ಏಕಾದಶ್ಯಾಂ ಸಕಪಿಲೋ ಬ್ರಾಹ್ಮಣಸ್ಸ್ವಗೃಹೇ ಶುಚಿಃ ।
ಸೋಪವಾಸಸ್ಸಪತ್ನೀಕಃ ಪೂಜಯಾಮಾಸ ಚಾಚ್ಯುತಂ ॥ ೭೩ ॥

ತತೋ ಜಾಗರಣಂ ಚಕ್ರೇ ಸ್ತುತಿನೃತ್ಯಪರಾಯಣಃ ।
ಅರ್ಧರಾತ್ರೇ ತು ಸಂಪ್ರಾಪ್ತೇ ನಿದ್ರಯಾ ಮೋಹಿತೋ ದ್ವಿಜಃ ॥ ೭೪ ॥

ಮಾರ್ಜಾರಶ್ಚಾಗತಸ್ತತ್ರ ತೀಕ್ಷ್ಣದಂಷ್ಟ್ರೋ ಲಘುಕ್ರಮಃ ।
ಭಕ್ಷಯಾಮಾಸ ನೈವೇದ್ಯಂ ಗೃಹಕೋಣೆ ಸ್ಥಿತಸ್ಸದಾ ॥ ೭೫ ॥

---

ಅಲ್ಲಿಗೆ ಎಣ್ಣೆಯನ್ನು ಕುಡಿಯುವುದಕ್ಕೂ ಬತ್ತಿಯನ್ನು ತಿನ್ನುವುದಕ್ಕೂ ಬಂದ ಇಲಿಗಳನ್ನು ನಿತ್ಯವೂ ತಿನ್ನುತ್ತಿದ್ದಿತು.

೭೧-೭೩. ಹೀಗಿರುತ್ತಿರಲು ಒಂದು ಬಾರಿ ಕಾಲಪರಿಪಾಕದಿಂದ ಏಕಾದಶಿಯದಿನ ಆ ಬ್ರಾಹ್ಮಣನು ಶುಚಿಯಾಗಿ ಉಪವಾಸಮಾಡಿ ಹೆಂಡತಿಯೊಡನೆ ಮನೆಯಲ್ಲಿ ಲಕ್ಷ್ಮೀನಾರಾಯಣನನ್ನು ಪೂಜಿಸಿದನು.

೭೪. ಅನಂತರ ರಾತ್ರಿಯಲ್ಲಿ ಜಾಗರಣೆ ಮಾಡುತ್ತ ಸ್ತೋತ್ರಗಳನ್ನು ಹೇಳುತ್ತಲೂ ಹಾಡುತ್ತಲೂ ಕುಣಿಯುತ್ತಲೂ ಇದ್ದನು. ಆದರೂ ಅರ್ಧರಾತ್ರಿಯ ವೇಳೆಯಲ್ಲಿ ನಿದ್ರೆಯು ಬಂದು ಸ್ವಲ್ಪ ತೂಕಡಿಸಿದನು.

೭೫. ಆ ಸಮಯದಲ್ಲಿ ಚೂಪಾದ ಹಲ್ಲೂ ಜಾಗ್ರತೆಯಾಗಿ ಓಡಬಲ್ಲುದೂ ಆದ ಆ ಬೆಕ್ಕು ಅಲ್ಲಿಗೆ ಬಂದು ಕೋಣೆಯಲ್ಲಿಟ್ಟಿದ್ದ ನೈವೇದ್ಯವನ್ನು ತಿನ್ನುತ್ತಾ ಅಲ್ಲಿಯೇ ಇದ್ದಿತು.

ಅದ್ರಾಕ್ಷೀನ್ಮೂಷಿಕಾಂ ಕ್ಷುದ್ರಾಂ ತೈಲಪಾನಾರ್ಥಮಾಗತಾಂ ।
ಮಂದತೇಜಸಿ ದಿಪೇ ತು ವರ್ತ್ಯಪಾಹರಣೋಚಿತಾಂ　　|| ೭೬ ||

ಸಮುತ್ಪತ್ಯ ಪದಾಕ್ರಾಮತ್ತದಾ ಸಾ ಬಿಲಮಾವಿಶತ್ ।
ತಸ್ಯಾಃ ಪಾದೇನ ವೈ ವರ್ತ್ಯಾ ದೀಪಸ್ಸಂಬೋಧಿತೋ ಭೃಶಂ　　|| ೭೭ ||

ತೈಲಪಾತ್ರಂ ಚ ನಮಿತಂ ಸುಸ್ರಕಾಶೋಽಭವತ್ತದಾ ।
ಬ್ರಾಹ್ಮಣೋಽಪಿ ಜಜಾಗಾರ ತ್ಯಕ್ತ್ವಾ ನಿದ್ರಾಂ ಪ್ರಮೋಹಿನೀಮ್　　|| ೭೮ ||

ಮಾರ್ಜಾರೋಽಪಿ ಚ ತಾಂ ರಾತ್ರಿಮುಜಾಗ್ರದ್ಭಕ್ಷ ತತ್ಪರಃ ।
ತತಃ ಪ್ರಭಾತೇ ವಿಮಲೇ ಕೃತ್ವಾ ನಿತ್ಯಕ್ರಿಯಾಂ ದ್ವಿಜಃ　　|| ೭೯ ||

---

೭೬. ಆಗ ಆ ದೀಪದ ಎಣ್ಣೆಯನ್ನು ಕುಡಿದು ಅನಂತರ ದೀಪವು ಆರಿ ಹೋದ ಮೇಲೆ ಆ ಬತ್ತಿಯನ್ನು ಎತ್ತಿಕೊಂಡು ಹೋಗಲು ಬಂದ ಅಯೋಗ್ಯವಾದ ಇಲಿಯನ್ನು ನೋಡಿತು.

೭೭. ಆ ಇಲಿಯು ನೆಗೆದು ದೀಪದಲ್ಲಿ ಕುಳಿತುಕೊಂಡಿದ್ದಿತು. ಈ ಬೆಕ್ಕನ್ನು ನೋಡಿದ ಕೂಡಲೇ ಆ ಇಲಿಯು ಬಿಲಕ್ಕೆ ಓಡಿಹೋಯಿತು. ಆಗ ಆ ಇಲಿಯ ಕಾಲಿನಿಂದ ದೀಪದ ಬತ್ತಿಯು ಸ್ವಲ್ಪ ಅಲುಗಿ ಮುಂದೆ ಬಂದು ಉರಿಯು ಹೆಚ್ಚಿತು.

೭೮. ಇದರಿಂದ ಆ ದೀಪವೂ ಸ್ವಲ್ಪ ಮುಂದಕ್ಕೆ ಬಗ್ಗಿತು. ಎಣ್ಣೆಯು ಆ ಬತ್ತಿಗೆ ಬಂದುದರಿಂದ ದೀಪವು ಒಳ್ಳೆಯ ಪ್ರಕಾಶವಾಗಿ ಉರಿಯಿತು. ಇಷ್ಟರಲ್ಲಿ ಆ ಬ್ರಾಹ್ಮಣನು ಆ ಮೋಹಕವಾದ ನಿದ್ದೆಯಿಂದ ಎಚ್ಚೆತ್ತನು.

೭೯. ಈ ಬೆಕ್ಕೂ ಕೂಡ ತಿಂಡಿಯಲ್ಲಿ ಆಸೆಯಿಟ್ಟುಕೊಂಡು ಅಂದಿನ ರಾತ್ರಿಯೆಲ್ಲವೂ ಜಾಗರಣೆ ಮಾಡಿತು. ಅನಂತರ ಬೆಳಗಾಗುತ್ತಲೂ ಆ ಬ್ರಾಹ್ಮಣನು ಎದ್ದು ಸ್ನಾನಮಾಡಿ ನಿತ್ಯಕ್ರಿಯೆಗಳನ್ನು ಮಾಡಿ ಬ್ರಾಹ್ಮಣರೊಡನೆ ಪಾರಣೆಯನ್ನು ಮಾಡಿದನು.

ತತಶ್ಚ ಪಾರಣಂ ಚಕ್ರೇ ವಿಪ್ರಬಂಧುಜನೈಸ್ಸಹ ।
ಏವಂ ಪ್ರವರ್ತಮಾನಸ್ಯ ಕಪಿಲಸ್ಯ ಮಹಾತ್ಮನಃ ॥ ೮೦ ॥

ಬಭೂವುಃ ಪುತ್ರಪೌತ್ರಾಶ್ಚ ಧನಧಾನ್ಯಮನುತ್ತಮಂ ।
ಆರೋಗ್ಯಂ ಪರಮಾಂ ವೃದ್ಧಿಮವಾಪ ಮಹತೀಂ ಶ್ರಿಯಂ ॥ ೮೧ ॥

ದೀಪವ್ರತ ಪ್ರಭಾವೇನ ಕಪಿಲೋ ಮೋಕ್ಷಮಾಗತಃ ।
ಸಂಭೇದ್ಯ ಮಂಡಲಂ ಪುಣ್ಯಂ ಸವಿತುಶ್ಶಶಿನಸ್ತಥಾ ॥ ೮೨ ॥

ದೀಪಜ್ಯೋತಿಸ್ಸ್ವರೂಪೇಣ ಪರಮಾತ್ಮನಿ ಯುಕ್ತವಾನ್ ।
ಮೂಷಿಕಾಪಿ ಚ ಕಾಲೇನ ಮಮಾರ ಬಿಲಮಧ್ಯತಃ ॥ ೮೩ ॥

ವಿಮಾನವರಮಾಸಾದ್ಯ ವಿಷ್ಣುಲೋಕಂ ಜಗಾಮ ಸಾ ।
ಮಾರ್ಜಾರೋಪಿ ಚ ಕಾಲಾನ್ತೇ ಮೃತಃ ಸ್ವರ್ಗಂ ಜಗಾಮ ಸಃ ॥ ೮೪ ॥

ವಿಮಾನವರಮಾರುಹ್ಯ ದೇವಗಂಧರ್ವಸೇವಿತಂ ।
ಅಪ್ಸರೋಭಿಃ ಪರಿವೃತೋ ವಿದ್ಯಾಧರಗಣೈರ್ಯುತಃ ॥ ೮೫ ॥

---

೮೦–೮೧. ಕಪಿಲನು ಹೀಗೆ ಮಾಡುತ್ತಿರಲು ಅವನಿಗೆ ಮಕ್ಕಳೂ ಮೊಮ್ಮಕ್ಕಳೂ, ಧನಧಾನ್ಯವೂ ಬಹುವಾಗಿ ಉಂಟಾದುವು. ಆರೋಗ್ಯವೂ ಉಂಟಾಯಿತು. ಎಲ್ಲವೂ ವೃದ್ಧಿಹೊಂದುತ್ತ ಬಂದುವು. ಬಹುವಾದ ಸಂಪತ್ತನ್ನೂ ಹೊಂದಿದನು.

೮೨. ಈ ದೀಪವ್ರತದ ಮಹಿಮೆಯಿಂದ ಕಪಿಲನು ಮೋಕ್ಷವನ್ನು ಹೊಂದಿದನು. ಸೂರ್ಯಮಂಡಲವನ್ನು ಭೇದಿಸಿಕೊಂಡು ಚಂದ್ರ ಮಂಡಲವನ್ನೂ ದಾಟಿ ದೀಪಜ್ಯೋತಿಯ ರೂಪದಿಂದ ಪರಮಾತ್ಮನಲ್ಲಿ ಸೇರಿಹೋದನು.

೮೩-೮೬. ಕೆಲವು ಕಾಲದ ಮೇಲೆ ಆ ಇಲಿಯು ಬಿಲದೊಳಗೆ ಸತ್ತಿತು. ಒಡನೆಯೇ ವಿಮಾನವು ಬರಲು ಅದರಲ್ಲಿ ಕುಳಿತು ವಿಷ್ಣುಲೋಕವನ್ನು ಹೊಂದಿತು. ಇತ್ತ ಬೆಕ್ಕೂ ಕೂಡ ಕೆಲವು ಕಾಲದಮೇಲೆ ಸತ್ತು ಸ್ವರ್ಗವನ್ನು ಸೇರಲು ಒಳ್ಳೆಯ ವಿಮಾನದಲ್ಲಿ ಕುಳಿತುಕೊಂಡಿತು ಅದನ್ನು ವಿದ್ಯಾಧರರು ಸೇವಿಸುತ್ತಿದ್ದರು. ಅವರೆಲ್ಲರೂ ಜಯ, ಜಯ ಎಂಬ ಶಬ್ದದಿಂದಲೂ ಮಂಗಳ ಧ್ವನಿಗಳಿಂದಲೂ

ಸ್ತೂಯಮಾನೋ ಮಹಾತೇಜಾ ಜಯಶಬ್ದಾದಿಮಂಗಳೈಃ ।
ಸ್ತೂಯಮಾನಸ್ಸ ವೈ ನಾಗೈರ್ವಿಷ್ಣುಲೋಕಂ ಜಗಾಮ ಸಃ ॥ ೮೬ ॥

ಕಲ್ಪಕೋಟಿಸಹಸ್ರಾಣಿ ಕಲ್ಪಕೋಟಿಶತಾನಿ ಚ ।
ಭುಕ್ತ್ವಾ ಚ ವಿಪುಲಾನ್ ಭೋಗಾಂಸ್ತತೋ ರಾಜಾಽಭವದ್ಭುವಿ ॥ ೮೭ ॥

ಸುಧರ್ಮಾ ನಾಮ ಧರ್ಮಾತ್ಮಾ ದೇವಬ್ರಾಹ್ಮಣಪೂಜಕಃ ।
ರೂಪವಾನ್ಸುಭಗಶ್ಚೈವ ಮಹಾಬಲಪರಾಕ್ರಮಃ ॥ ೮೮ ॥

ತಸ್ಯ ಪ್ರಿಯತಮಾ ಭಾರ್ಯಾ ಸರ್ವಲಕ್ಷಣಸಂಯುತಾ ।
ಭರ್ತೃಭಕ್ತಾ ತಥಾ ಶೀಲಾ ನಾಮ್ನಾ ಸಾ ರೂಪಸುಂದರೀ ॥ ೮೯ ॥

ಸರ್ವಾಸಾಂ ಚೈವ ನಾರೀಣಾಂ ಮಧ್ಯೇ ಸಾ ಸುಭಗಾಭವತ್ ।
ಪುತ್ರಾಶ್ಚ ಬಹವೋ ಜಾತಾಸ್ತಸ್ಯಾ ದುಹಿತರಸ್ತಥಾ ॥ ೯೦ ॥

---

ಮಂಗಳಪಾಠಗಳಿಂದಲೂ ಅದನ್ನು ಹೊಗಳುತ್ತಿದ್ದರು. ನಾಗರೂ ಅದನ್ನು ಹೊಗಳುತ್ತಿದ್ದರು. ಈ ರೀತಿಯಾಗಿ ಹೊಗಳಿಸಿಕೊಳ್ಳುತ್ತ ಆ ವಿಮಾನವಲ್ಲಿ ಹೊರಟು ವಿಷ್ಣುಲೋಕವನ್ನು ಹೊಂದಿತು.

೮೭. ಸಾವಿರ ಕೋಟಿಕಲ್ಪಗಳೂ ಮತ್ತು ನೂರು ಕೋಟಿಕಲ್ಪಗಳೂ, ಆ ವಿಷ್ಣುಲೋಕದಲ್ಲಿ ನಾನಾ ಬಗೆಯಾದ ಭೋಗಗಳನ್ನು ಅನುಭವಿಸಿ ಅನಂತರ ಭೂಮಿಯಲ್ಲಿ ರಾಜನಾಗಿ ಹುಟ್ಟಿತು.

೮೮–೮೯. ಆ ರಾಜನ ಹೆಸರು ಸುಧರ್ಮನು. ದೇವ ಬ್ರಾಹ್ಮಣರಲ್ಲಿ ಭಕ್ತಿಯುಳ್ಳವನಾಗಿ ಅವರನ್ನು ಪೂಜಿಸುತ್ತಿದ್ದನು. ಸುಂದರನು, ಬಲಿಷ್ಠನು ಮತ್ತು ಪರಾಕ್ರಮಿಯು. ಅವನಿಗೆ ಸುಂದರಿಯೂ, ಲಕ್ಷಣವತಿಯೂ ಒಬ್ಬ ಹೆಂಡತಿಯಿದ್ದಳು. ಗಂಡನಲ್ಲಿ ಆಕೆಗೆ ಬಹಳ ಭಕ್ತಿ ಮತ್ತು ಶೀಲವತಿ. ಅವಳ ಹೆಸರು ರೂಪಸುಂದರಿ.

೯೦. ಆಕೆಯು ಹೆಂಗಸರಲ್ಲೆಲ್ಲಾ ಬಹಳ ಚೆನ್ನಾಗಿದ್ದಳು. ಆಕೆಗೆ ಬಹಳ ಜನ ಗಂಡುಮಕ್ಕಳೂ ಹೆಣ್ಣುಮಕ್ಕಳೂ ಆದರು.

ಏವಂ ವಿಹರತೋಸ್ತದ್ವದ್ದಂಪತ್ಯೋಃ ಪ್ರೀತಿಪೂರ್ವಕಂ ।
ಆಗತಃ ಕಾರ್ತಿಕೋ ಮಾಸೋ ಹರಿನೇತ್ರಾವಬೋಧಕೃತ್ ॥ ೯೧ ॥

ತಸ್ಮಿನ್ದೀಪಾಃ ಪ್ರಬೋಧ್ಯನ್ತೇ ನಾರಾಯಣಪರಾಯಣೈಃ ।
ಕೃಚ್ಛ್ರಚಾಂದ್ರಾಯಣಾದೀನಿ ವ್ರತಾನಿ ನಿಯಮಾಸ್ತಥಾ ॥ ೯೨ ॥

ಕ್ರಿಯನ್ತೇ ವಿಷ್ಣುಭಕ್ತೈಶ್ಚ ಸಂಸಾರಭಯಭೀರುಭಿಃ ।
ಅಥ ಪ್ರಬೋಧಿನೀಂ ಪ್ರಾಪ್ಯ ರಾಜಾ ರಾಜ್ಞೀಮಥಾಬ್ರವೀತ್ ॥ ೯೩ ॥

॥ ರಾಜೋವಾಚ ॥

ಭದ್ರೇ ಪ್ರಬೋಧಿನೀ ಪುಣ್ಯಾ ವಿಷ್ಣೋರ್ನಾಭಿಸರೋರುಹೇ ।
ಕರಿಷ್ಯಾಮ್ಯದ್ಯ ಪೂಜಾಂ ಚ ಸೋಪವಾಸೋ ಜಿತೇಂದ್ರಿಯಃ ॥ ೯೪ ॥

ಸ್ನಾತ್ವಾ ಚ ಪುಷ್ಕರೇ ತೀರ್ಥೇ ಪುಂಡರೀಕಾಕ್ಷಮಚ್ಯುತಂ ।
ಪೂಜಯಿಷ್ಯಾಮಿ ದೇವೇಶಂ ಲಕ್ಷ್ಮ್ಯಾ ಸಹ ಜನಾರ್ದನಂ ॥ ೯೫ ॥

---

೯೧. ಈರೀತಿಯಾದ ಗಂಡಹೆಂಡಿರು ಪ್ರೀತಿಯಿಂದಿರುತ್ತಾ ಸುಖದಿಂದಿರುತ್ತಿರಲು ಹರಿಯು ನಿದ್ದೆಯಿಂದೆಚ್ಚತ್ತುಕೊಳ್ಳುವ ಕಾರ್ತಿಕ ಮಾಸವು ಬಂದಿತು.

೯೨–೯೩. ಆ ಕಾರ್ತೀಕ ಮಾಸದಲ್ಲಿ ನಾರಾಯಣ ಭಕ್ತರು ದೀಪಗಳನ್ನು ಹಚ್ಚುತ್ತಾರೆ. ಕೃಚ್ಛ್ರ ಚಾಂದ್ರಾಯಣಾದಿ ವ್ರತಗಳನ್ನು ಮಾಡುತ್ತಾರೆ. ಹೀಗಿರಲು ಉತ್ಥಾನದ್ವಾದಶಿಯು ಬರಲು ರಾಜನು ರಾಣಿಯನ್ನು ಕುರಿತು ಇಂತೆಂದನು.

೯೪. ರಾಜನು ಹೇಳಿದನು– ಎಲೈ ಭದ್ರೆಯೆ! ಇಂದು ಪ್ರಬೋಧಿನೀ ಏಕಾದಶಿಯು, ನಾಳೆ ಉತ್ಥಾನದ್ವಾದಶಿಯು. ಆದ್ದರಿಂದ ನಿಯಮದಿಂದ ಉಪವಾಸವಿದ್ದು ವಿಷ್ಣುಪುಷ್ಕರದಲ್ಲಿ ಪೂಜೆಮಾಡುತ್ತೇನೆ.

೯೫. ಪುಷ್ಕರತೀರ್ಥದಲ್ಲಿ ಸ್ನಾನಮಾಡಿ ಪುಂಡರೀಕದಂತೆ ಕಣ್ಣುಗಳುಳ್ಳ ನಾಶರಹಿತನಾದ ಲಕ್ಷ್ಮೀನಾರಾಯಣನನ್ನು ಪೂಜಿಸುತ್ತೇನೆ.

|| ಶಿವ ಉವಾಚ ||

ಇತಿ ಸಾ ವಾಂಛಿತಂ ಶ್ರುತ್ವಾ ಭರ್ತುಃ ಪ್ರಿಯಹಿತೇ ರತಾ |
ಉವಾಚ ವಚನಂ ಗುಹ್ಯಂ ಭರ್ತಾರಂ ಚಾರುಹಾಸಿನೀ || ೯೬ ||

|| ರೂಪಸುಂದರ್ಯುವಾಚ ||

ಮಮಾಪಿ ಹೃದಯೇ ಕಾಮಃ ಸಮುತ್ಪನ್ನೋ ನರಾಧಿಪ |
ರೂಪಸೌಂದರ್ಯವಾಂಛಾ ಚ ಹೃದಯೇ ಮಮ ವರ್ತತೇ ||
ಪುಷ್ಕರಂ ಪ್ರಥಮಂ ತೀರ್ಥಂ ಗನ್ತುಮಿಚ್ಛೇ ತ್ವಯಾ ಸಹ || ೯೭ ||

|| ಶಿವ ಉವಾಚ ||

ತತೋ ರಾಜಾ ತಯಾ ಸಾರ್ಧಮಾಗತಃ ಪುಷ್ಕರಂ ತಥಾ ।
ಹಸ್ತ್ಯಶ್ವರಥವೃಂದೈಶ್ಚ ಸಮಾಗತ್ಯ ಪುರೋಹಿತೈಃ || ೯೮ ||

ತತಃ ಸ್ನಾತ್ವಾ ತಥಾ ಧ್ಯಾಯಂಸ್ತರ್ಪಯನ್ಪಿತೃದೇವತಾಃ |
ಪೂಜಯಾಮಾಸ ದೇವೇಶಂ ಪುಂಡರೀಕಾಕ್ಷಮಚ್ಯುತಂ | || ೯೯ ||

---

೯೬. ಶಿವನು ಹೇಳಿದನು– ಈ ರೀತಿಯಾದ ಗಂಡನ ಇಷ್ಟವನ್ನು ತಿಳಿದು ಗಂಡನ ಹಿತದಲ್ಲಿಯೇ ಆಸಕ್ತಳಾದ ಆ ಸತಿಯು ಗಂಡನಿಗೆ ತನ್ನ ಇಷ್ಟವನ್ನು ತಿಳಿಸಿದಳು.

೯೭. ರೂಪಸುಂದರಿಯು ಹೇಳಿದಳು– ಎಲೈ ದೊರೆಯೆ! ನನಗೂ ಆ ಇಚ್ಛೆಯು ಇದ್ದೇ ಇರುವುದು. ರೂಪದಲ್ಲಿಯೂ, ಸೌಂದರ್ಯದಲ್ಲಿಯೂ ನನಗೆ ಆಸೆಯು ಮನಸ್ಸಿನಲ್ಲಿ ಓಡಾಡುತ್ತಲೇ ಇದೆ. ಮೊದಲು ನಿನ್ನ ಜೊತೆಯಲ್ಲಿ ಪುಷ್ಕರಕ್ಕೆ ಹೋಗಿ ಸ್ನಾನಮಾಡಬೇಕೆಂದು ಬಯಸುತ್ತೇನೆ.

೯೮-೯೯. ಶಿವನು ಹೇಳಿದನು– ಆಗ ಆ ರಾಜನು ಆ ಹೆಂಡತಿಯೊಡನೆ ಪುಷ್ಕರಕ್ಕೆ ಬಂದನು. ಜೊತೆಯಲ್ಲಿ ಆನೆ, ಕುದುರೆ, ರಥ, ಕಾಲಾಳು ಪುರೋಹಿತರೆಲ್ಲರೂ ಬಂದರು. ಅನಂತರ ಆ ತೀರ್ಥದಲ್ಲಿ ಸ್ನಾನಮಾಡಿ ದೇವರನ್ನು ಧ್ಯಾನಿಸುತ್ತ ದೇವತರ್ಪಣ, ಪಿತೃತರ್ಪಣಗಳನ್ನು ಮಾಡಿ, ಅನಂತನೂ, ನಾಶರಹಿತನೂ, ದೇವದೇವನೂ ಆದ ಆ ಅಚ್ಯುತನನ್ನು ಪೂಜಿಸಿದನು.

ದೀಪವ್ಯಾಲಾಕುಲೇ ನೇತ್ರೇ ಸರ್ವತಸ್ಸುಮನೋಹರೇ ।
ದದರ್ಶ ಲಿಖಿತಂ ತತ್ರ ಮಾರ್ಜಾರಂ ದೇವತಾಲಯೇ ॥ ೧೦೦ ॥

ತಂ ದೃಷ್ಟ್ವಾ ಪ್ರಾಕೃತಂ ಕರ್ಮ ಜನ್ಮ ಸ್ಮೃತ್ವಾ ನೃಪಸ್ತದಾ ।
ಮುಖಪಂಕಜಮಾಲೋಕ್ಯ ಪ್ರಿಯಾಯಾಃ ಪ್ರಜಹಾಸ ಚ ॥ ೧೦೧ ॥

॥ ರೂಪಸುಂದರ್ಯುವಾಚ ॥

ಮಮ ಸಮ್ಮುಖಮಾಲೋಕ್ಯ ಭರ್ತಃ ಕಿಂ ಸ್ಮಿತಕಾರಣಂ ॥ ೧೦೨ ॥

॥ ಶಿವ ಉವಾಚ ॥

ಕಥಯಾಮಾಸ ಹೃಷ್ಟಾತ್ಮಾ ಪ್ರಾಕ್ತನಂ ಕರ್ಮಣಃ ಫಲಂ ॥ ೧೦೩ ॥

॥ ರಾಜೋವಾಚ ॥

ಅಹಮಾಸಂ ಪುರಾ ದೇವೀ ಮಾರ್ಜಾರೋ ಬ್ರಾಹ್ಮಣಾಲಯೇ ।
ಭಕ್ಷಿತಾ ಮೂಷಕಾಸ್ತತ್ರ ಮಯಾ ಶತಸಹಸ್ರಶಃ ॥ ೧೦೪ ॥

---

೧೦೦-೧೦೧. ಅಲ್ಲೆಲ್ಲವೂ ದೀಪವನ್ನು ಹಚ್ಚಿರಲು ಅದರಲ್ಲಿ ನಟ್ಟ ಕಣ್ಣು ಗಳುಳ್ಳವನಾಗಿ ಆ ದೇವಸ್ಥಾನದಲ್ಲಿ ಕೆತ್ತಿದ್ದ ಒಂದು ಬೆಕ್ಕನ್ನು ನೋಡಿ ಒಡನೆಯೇ ತನ್ನ ಪೂರ್ವಜನ್ಮದ ಸ್ಮರಣೆಯು ಬರಲು ಹೆಂಡತಿಯ ಮುಖವನ್ನು ನೋಡಿ ಕೂಡಲೆ ನಕ್ಕನು.

೧೦೨. ರೂಪಸುಂದರಿಯು ಹೇಳಿದಳು– ಎಲೈ ಪ್ರಿಯನೆ! ನನ್ನ ಮುಖ ವನ್ನು ನೋಡಿ ನಗಲು ಕಾರಣವೇನು?

೧೦೩. ಶಿವನು ಹೇಳಿದನು– ಆಗ ಆ ರಾಜನು ಸಂತೋಷಗೊಂಡು ಹಿಂದಿನ ಕರ್ಮದ ಫಲವನ್ನು ಹೇಳಿದನು.

೧೦೪-೧೦೫. ರಾಜನು ಹೇಳಿದನು–ಎಲೈ ದೇವಿಯೆ! ನಾನು ಒಬ್ಬ ಬ್ರಾಹ್ಮಣನ ಮನೆಯಲ್ಲಿ ಬೆಕ್ಕಾಗಿದ್ದೆನು. ಅಲ್ಲಿ ಅನೇಕವಾಗಿ ಇಲಿಗಳನ್ನು ತಿಂದು ಕೊಂಡಿದ್ದೆನು. ಆಗ ನಾನು ನಾರಾಯಣನ ಎದುರಿನಲ್ಲಿ ಉರಿಯುತ್ತಿದ್ದ ದೀಪವನ್ನು ಯಾವುದೋ ನೆವದಿಂದ ಆರಿಹೋಗುತ್ತಿದ್ದಾಗ ಉರಿಯುವಂತೆ

ತತೋ ನಾರಾಯಣಸ್ಯಾಗ್ರೇ ದೀಪಸ್ಸಂರಕ್ಷಿತೋ ಯತಃ ।
ವ್ಯಾಜೇನಾಪಿ ಮಯಾ ದೇವಿ ಪ್ರಾಪ್ತಂ ತತ್ಕರ್ಮಣಃ ಫಲಂ ॥
ವಿಷ್ಣುಲೋಕಮನುಪ್ರಾಪ್ಯ ರಾಜ್ಯಂ ಪ್ರಾಪ್ತಂ ಮಯಾಧುನಾ ॥ ೧೧೫ ॥

॥ ರೂಪಸುಂದರ್ಯುವಾಚ ॥

ಮಮಾಪಿ ಸ್ಮರಣಂ ಜಾತಂ ಪ್ರಾಕ್ತನಸ್ಯ ಚ ಜನ್ಮನಃ ।
ಮೂಷಿಕಾ ಚಾಹಮಸ್ಯಾಸಂ ಕ್ಷುದ್ರಾ ಬ್ರಾಹ್ಮಣವೇಶ್ಮನಿ ॥ ೧೧೬ ॥

ಕಾರ್ತಿಕೇ ಚ ಪ್ರಬೋಧಿನ್ಯಾಂ ಮಂದೀಭೂತೇ ಚ ದೀಪಕೇ ।
ವರ್ತ್ಯಪಾಹರಣಾರ್ಥಾಯ ನಿರ್ಗತಾಹಂ ತದಾ ಬಿಲಾತ್ ॥ ೧೧೭ ॥

ದೃಷ್ಟ್ವಾ ನಾರಾಯಣಂ ದೇವಂ ಪೂಜಿತಂ ಕುಸುಮೈಸ್ತಥಾ ।
ನಿದ್ರಾಭಿಭೂತಂ ವಿಪ್ರಂ ಚ ವರ್ತಿಸ್ಸ್ಪೃಷ್ಟಾ ಮಯಾ ತದಾ ॥ ೧೧೮ ॥

---

ಮಾಡಿದೆನು. ಆ ಕರ್ಮಕ್ಕೆ ಫಲವನ್ನು ಹೊಂದಿದೆನು. ಆ ಕರ್ಮಕ್ಕೆ ಫಲವು ಮೊದಲು ವೈಕುಂಠವು ಸಿಕ್ಕಿ ಅಲ್ಲಿ ಸುಖವನ್ನು ಅನುಭವಿಸಿದೆನು. ಈಗ ಇಲ್ಲಿ ರಾಜನಾಗಿ ಹುಟ್ಟಿದ್ದೇನೆ.

೧೧೬. ರೂಪಸುಂದರಿಯು ಹೇಳಿದಳು– ನನಗೂ ಕೂಡ ಪೂರ್ವಜನ್ಮ ಸ್ಮರಣೆಯುಂಟಾಯಿತು. ಒಬ್ಬ ಬ್ರಾಹ್ಮಣನ ಮನೆಯಲ್ಲಿ ಒಂದು ಅಯೋಗ್ಯವಾದ ಹೆಣ್ಣು ಇಲಿಯಾಗಿದ್ದೆನು.

೧೧೭. ಕಾರ್ತೀಕ ಮಾಸದ ಪ್ರಬೋಧಿನಿಯ ಏಕಾದಶಿಯ ದಿನ ರಾತ್ರಿ ದೀಪದಲ್ಲಿರುವ ಬತ್ತಿಯನ್ನು ಕದ್ದು ತಿನ್ನಲು ಬಿಲದಿಂದ ಹೊರಟೆನು.

೧೧೮. ಅಲ್ಲಿ ನಾರಾಯಣಸ್ವಾಮಿಯನ್ನು ಹೂವಿನಿಂದ ಪೂಜಿಸಿರುವುದನ್ನು ದರ್ಶನ ಮಾಡಿದೆನು. ಅದರ ಎದುರಿಗೆ ಕುಳಿತಿದ್ದ ಬ್ರಾಹ್ಮಣನು ನಿದ್ರೆಯಿಂದ ತೂಕಡಿಸುತ್ತ ಸ್ವಲ್ಪ ನಿದ್ದೆಯಲ್ಲಿದ್ದುದನ್ನು ಕಂಡು ಮೆಲ್ಲಗೆ ಹೋಗಿ ಆ ಬತ್ತಿಯನ್ನು ಮುಟ್ಟಿದೆನು.

ಉತ್ಥಿತಸ್ತ್ವಂ ಯದಾ ತತ್ರ ಮಯಾ ಗ್ರಹೀತುಂ ಕೃತಕ್ಷಣಃ ।
ದೃಷ್ಟ್ವಾ ತ್ವಾಂ ಚ ಪ್ರಣಷ್ಟಾಹಂ ಪ್ರವಿಷ್ಟಾ ಬಿಲಮಧ್ಯತಃ ॥ ೧೦೯ ॥

ವಿಶಂತ್ಯಾ ಮಮ ಪಾದೇನ ದೀಪವರ್ತಿರ್ವ್ಯಜೃಂಭಿತಾ ।
ತೈಲಪಾತ್ರಂ ಚ ನಮಿತಂ ತೇನಾಹಂ ಸುಖಭಾಗಿನೀ ॥ ೧೧೦ ॥

ತಸ್ಮಯಾ ರಾಜರಾಜೇಂದ್ರ ದೀಪಶ್ಚೈವ ಪ್ರಕಾಶಿತಃ ।
ಇದಾನೀಂ ಚ ಮಯಾ ಪ್ರಾಪ್ತಂ ರೂಪಲಾವಣ್ಯಮುತ್ತಮಂ ॥ ೧೧೧ ॥

ತ್ವಂ ಚ ಭರ್ತಾ ತಥಾ ರಾಜ್ಯಂ ಪುತ್ರಾಶ್ಚ ವಿವಿಧಂ ಸುಖಂ ।
ದೀಪಪ್ರಬೋಧನಾಜ್ಜಾತಂ ಜ್ಞಾನಮತ್ಯಂತದುರ್ಲಭಂ ॥ ೧೧೨ ॥

---

೧೦೯. ನೀನು ಆ ಮನೆಯಲ್ಲಿಯೇ ಬೆಕ್ಕಾಗಿದ್ದುಕೊಂಡು ನನ್ನನ್ನು ಹಿಡಿಯಲು ಹೊಂಚು ಹಾಕುತ್ತ ನೋಡುತ್ತಿದ್ದೆ. ಆಗ ನೀನು ಸಿದ್ಧವಾಗಿ ಇರುವುದನ್ನು ನೋಡಿ ನಾನು ಓಡಿಹೋಗಿ ಬಿಲದೊಳಗೆ ಸೇರಿಕೊಂಡೆನು.

೧೧೦. ನಾನು ಆತುರದಿಂದ ಓಡಿಹೋಗುವಾಗ ನನ್ನ ಕಾಲಿಗೆ ತಗುಲಿ ಆ ದೀಪದ ಬತ್ತಿಯು ಸ್ವಲ್ಪ ಎದ್ದಿತು. ಉರಿಯು ದಪ್ಪವಾಯಿತು. ಎಣ್ಣೆಯ ಪಾತ್ರೆಯು ಬಗ್ಗಿ ದೀಪಕ್ಕೆ ಎಣ್ಣೆಯು ಬಂದಿತು. ಇದರಿಂದ ನಾನು ಈ ರೀತಿಯಾಗಿ ಸುಖವನ್ನು ಅನುಭವಿಸುತ್ತಿರುವೆನು. ವೈಕುಂಠದಲ್ಲಿಯೂ ಸುಖವಾಗಿದ್ದೆನು.

೧೧೧. ಎಲೈ ರಾಜನೇ! ಆಗ ನಾನು ಆ ದೀಪವನ್ನು ಪ್ರಕಾಶವಾಗಿ ಉರಿಯುವಂತೆ ಮಾಡಿದುದರಿಂದ ಈಗ ಈ ರೀತಿಯಾದ ಸೌಂದರ್ಯವನ್ನು ಹೊಂದಿರುವೆನು.

೧೧೨. ಆ ದೀಪವನ್ನು ಹೆಚ್ಚಿಸಿದ ಮಹಿಮೆಯಿಂದಲೇ ನೀನು ನನಗೆ ಗಂಡನಾದೆ. ಈ ರೀತಿಯಾದ ರಾಜ್ಯವೂ ಸಿಕ್ಕಿತು. ಮಕ್ಕಳು ಮೊಮ್ಮಕ್ಕಳೆಲ್ಲರೂ ಆದರು. ಉತ್ತಮವಾದ ಸುಖವೂ ಸಿಕ್ಕಿತು. ಲೋಕದಲ್ಲಿ ಇತರರು ಹೊಂದ ಲಾರದ ಉತ್ತಮವಾದ ಜ್ಞಾನವನ್ನೂ ಹೊಂದಿದ್ದೇನೆ.

ತಸ್ಮಾತ್ಸರ್ವಪ್ರಯತ್ನೇನ ದೀಪವ್ರತಮನುತ್ತಮಂ ।
ಆವಾಂ ಹಿ ಪರಯಾ ಭಕ್ತ್ಯಾ ಕುರ್ಯಾವ ಚ ವಿಶೇಷತಃ ॥ ೧೧೩ ॥

ತದೇತತ್ಕರ್ಮಣಃ ಪ್ರಾಪ್ತಂ ಫಲಂ ರಾಜ್ಯಾದಿಸಂಪದಃ ।
ಪೂರ್ವಜನ್ಮ ಸ್ಮೃತಂ ಚಾಪಿ ಸರ್ವಪಾಪಕ್ಷಯಸ್ತಥಾ ॥ ೧೧೪ ॥

ತಸ್ಮಾತ್ಸರ್ವಪ್ರಯತ್ನೇನ ವಿಧಿಮಂತ್ರಾದಿಪೂರ್ವಕಂ ।
ದೀಪವ್ರತಂ ಕೃತಂ ಪುಂಭಿಃ ಪುಣ್ಯಮಾಚಂದ್ರತಾರಕಂ ॥ ೧೧೫ ॥

॥ ಶಿವ ಉವಾಚ ॥

ಇತಿ ಶ್ರುತ್ವಾ ವಚೋ ರಾಜಾ ಚಕ್ರೇ ದೀಪವ್ರತಂ ತದಾ ।
ಪ್ರಿಯಯಾ ಸಹ ದೇವರ್ಷೇ ಸಮ್ಯಕ್ ಶ್ರದ್ಧಾಸಮನ್ವಿತಃ ॥ ೧೧೬ ॥

---

೧೧೩. ಆದ್ದರಿಂದ ನಾವಿಬ್ಬರೂ ಈ ಉತ್ತಮವಾದ ವ್ರತವನ್ನು ಪ್ರಯತ್ನಪಟ್ಟು ಹೆಚ್ಚು ಭಕ್ತಿಯಿಂದಲೂ, ಆದರದಿಂದಲೂ ಮಾಡೋಣ.

೧೧೪. ಆ ಕೆಲಸದಿಂದಲೇ ರಾಜ್ಯವೇ ಮುಂತಾದ ಸಂಪತ್ತೆಲ್ಲವೂ ಸಿಕ್ಕಿರುವುವು. ಪೂರ್ವಜನ್ಮದ ಸ್ಮರಣೆಯೂ ಬಂದಿತು. ಎಲ್ಲಾ ಪಾಪಗಳೂ ಕಳೆದುಹೋದುವು.

೧೧೫. ಆದ್ದರಿಂದ ಎಲ್ಲಾ ಪ್ರಯತ್ನವನ್ನೂ ಹೊಂದಿ ಶಾಸ್ತ್ರದಂತೆಯೂ, ಮಂತ್ರಪೂರ್ವಕವಾಗಿಯೂ, ಈ ವ್ರತವನ್ನು ಮನುಷ್ಯರು ಮಾಡಿದರೆ ಚಂದ್ರ, ಸೂರ್ಯ, ನಕ್ಷತ್ರಗಳಿರುವವರೆಗೂ ಸುಖವಾಗಿರುವ ಪುಣ್ಯವು ಲಭಿಸುತ್ತದೆ.

೧೧೬. ಶಿವನು ಹೇಳಿದನು–ರಾಜನು ಈ ಮಾತನ್ನು ಕೇಳಿ ಈ ದೀಪವ್ರತವನ್ನು ಶ್ರದ್ಧೆಯಿಂದ ಹೆಂಡತಿಯೊಡನೆ ಮಾಡಿದನು.

ತಸ್ಮಿಂಸ್ತು ಪುಷ್ಕರೇ ತೀರ್ಥೇ ಕೃತ್ವಾ ದೀಪವ್ರತಂ ತು ತೌ ।
ಅವಾಪತುಃ ಪರಾಂ ಮುಕ್ತಿಂ ದೇವದಾನವದುರ್ಲಭಂ ॥ ೧೧೭ ॥

ಏತದ್ದೀಪಸ್ಯ ಮಾಹಾತ್ಮ್ಯಂ ಯೇ ಶೃಣ್ವಂತಿ ನರಾ ಭುವಿ ।
ಸರ್ವಪಾಪವಿನಿರ್ಮುಕ್ತಾಃ ಪ್ರಯಾನ್ತಿ ಹರಿಮಂದಿರಂ ॥ ೧೧೮ ॥

ಯೇ ಚ ಕುರ್ವಂತಿ ಪುರುಷಾಃ ಸ್ತ್ರೀಯೋ ವಾ ಭಕ್ತಿತತ್ಪರಾಃ ।
ತೇ ಸರ್ವೇ ಪಾಪನಿರ್ಮುಕ್ತಾ ಯಾನ್ತಿ ಬ್ರಹ್ಮ ಸನಾತನಂ ॥ ೧೧೯ ॥

ದೀಪವ್ರತಮಿದಂ ವಿದ್ವನ್ಕಥಿತಂ ತೇ ವಿಮುಕ್ತಿದಂ ।
ಸರ್ವಸೌಖ್ಯಪ್ರದಂ ಧನ್ಯಂ ಮಹಾವ್ರತಮಿದಂ ತವ ॥ ೧೨೦ ॥

---

೧೧೭. ಆಗ ಆ ದಂಪತಿಗಳು ಆ ಪುಷ್ಕರತೀರ್ಥದಲ್ಲಿ ಸ್ನಾನಮಾಡಿ ದೀಪ ವ್ರತ ಮಾಡುತ್ತಲೂ, ದೇವತೆಗಳೂ ದಾನವರೂ ಹೊಂದಲಾರದ ಉತ್ತಮವಾದ ಮುಕ್ತಿಯನ್ನು ಹೊಂದಿದರು.

೧೧೮. ಈ ದೀಪದ ಮಹಿಮೆಯನ್ನು ಭೂಮಿಯಲ್ಲಿ ಯಾರು ಕೇಳುತ್ತಾ ಇರುವರೋ ಅವರು ಪಾಪಗಳನ್ನು ಕಳೆದುಕೊಂಡು ಹರಿಯ ಮಂದಿರವಾದ ವೈಕುಂಠವನ್ನು ಹೊಂದುತ್ತಾರೆ.

೧೧೯. ಹೆಂಗಸರಾಗಲೀ ಗಂಡಸರಾಗಲಿ ಯಾರು ಭಕ್ತಿಯಿಂದ ಈ ವ್ರತವನ್ನು ಮಾಡುತ್ತಾರೆಯೋ ಅವರು ಪಾಪವನ್ನು ಕಳೆದುಕೊಂಡು ಸನಾತನ ಬ್ರಹ್ಮನಲ್ಲಿ ಐಕ್ಯರಾಗುತ್ತಾರೆ.

೧೨೦. ಎಲೈ ವಿದ್ವಾಂಸನೆ! ಮುಕ್ತಿಯನ್ನು ಕೊಡುವ ಈ ವ್ರತವನ್ನು ನಿನಗೆ ಹೇಳಿದೆನು. ಇದು ಸರ್ವಸೌಖ್ಯಗಳನ್ನೂ ಕೊಡುತ್ತದೆ. ಧನ್ಯತೆಯನ್ನು ಉಂಟುಮಾಡುವುದು. ಇದು ಮಹಾವ್ರತವು.

ನೇತ್ರರೋಗಾ ವಿನಶ್ಯಂತಿ ಯಥಾ ಪಾಪಪ್ರಭಾವಜಾಃ ।
ಆಧಯೋ ವ್ಯಾಧಯಸ್ಸರ್ವೇ ನಶ್ಯಂತೇ ಹಿ ಕೃತೇ ಕ್ಷಣಾತ್ ॥ ೧೨೧ ॥

ನ ದಾರಿದ್ರ್ಯಂ ನ ಶೋಕಶ್ಚ ನ ಮೋಹೋ ನ ಚ ವಿಭ್ರಮಃ ।
ಗೃಹೇ ಲಕ್ಷ್ಮೀಸ್ಸಮಾಯಾತಿ ಜನ್ಮಜನ್ಮನಿ ಬಾಡಬ ॥ ೧೨೨ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಪತಿ ನಾರದ ಸಂವಾದೇ ದೀಪವ್ರತ ಮಾಹಾತ್ಮ್ಯ ಕಥನಂ ನಾಮ ಏಕತ್ರಿಂಶೋಽಧ್ಯಾಯಸ್ಸಮಾಪ್ತಃ

---

೧೨೧ ಈ ವ್ರತವನ್ನು ಮಾಡಿದರೆ ಪಾಪದಿಂದ ಹುಟ್ಟಿದ ಕಣ್ಣಿನ ರೋಗಗಳೆಲ್ಲವೂ ಹೋಗುತ್ತವೆ. ಮನೋವ್ಯಥೆ, ದೇಹದ ರೋಗ ಇವುಗಳೆಲ್ಲವೂ ನಾಶವಾಗುತ್ತವೆ.

೧೨೨. ದಾರಿದ್ರ್ಯ ಬರುವುದಿಲ್ಲ. ದುಃಖವನ್ನು ಹೊಂದುವುದಿಲ್ಲ. ಅಜ್ಞಾನ, ಭ್ರಮಣೆಗಳು ತಲೆದೋರುವುದಿಲ್ಲ. ಜನ್ಮ ಜನ್ಮಕ್ಕೂ ಮನೆಯಲ್ಲಿ ಲಕ್ಷ್ಮಿಯು ತಾಂಡವವನ್ನು ಆಡುತ್ತಿರುವಳು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಪತಿ ನಾರದರ ಸಂವಾದದಲ್ಲಿ ದೀಪವ್ರತ ಮಹಿಮೆಯ ಕಥನವೆಂಬ ಮೂವತ್ತೊಂದನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

-x-

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ದ್ವಾತ್ರಿಂಶೋಽಧ್ಯಾಯಃ ||



|| ನಾರದ ಉವಾಚ ||

ದೇವ ದೇವ ಜಗನ್ನಾಥ ಭಕ್ತಾನಾಮಭಯಪ್ರದ ।
ವ್ರತಂ ಬ್ರೂಹಿ ಮಹಾದೇವ ಕೃಪಾಂ ಕೃತ್ವಾ ಮಮೋಪರಿ || ೧ ||

|| ಮಹಾದೇವ ಉವಾಚ ||

ಸಾರ್ವಭೌಮಃ ಪುರಾಹ್ಯಾಸೀದ್ಧರಿಶ್ಚಂದ್ರೋ ಮಹಿಪತಿಃ ।
ತಸ್ಯ ತುಷ್ಟೋಽದದಾದ್ಬ್ರಹ್ಮಾ ಪುರೀಂ ಕಾಮದುಘಾಂ ಶುಭಾಂ || ೨ ||

---

## ಮೂವತ್ತೆರಡನೆಯ ಅಧ್ಯಾಯವು



೧. ನಾರದನು ಹೇಳಿದನು- ಎಲೈ ದೇವದೇವನಾದ ಜಗನ್ನಾಥನೆ! ಭಕ್ತರಿಗೆ ಅಭಯವನ್ನು ಕೊಡತಕ್ಕವನೆ! ನನ್ನಮೇಲೆ ದಯೆಯಿಟ್ಟು ವ್ರತವನ್ನು ಹೇಳು.

೨. ಮಹಾದೇವನು ಹೇಳಿದನು-ಹಿಂದೆ ಚಕ್ರವರ್ತಿಯಾದ ಹರಿಶ್ಚಂದ್ರನೆಂಬ ರಾಜನೊಬ್ಬನಿದ್ದನು. ಅವನಿಗೆ ಬ್ರಹ್ಮನು ಸಂತೋಷದಿಂದ ಮಂಗಳಕರವಾದ ಇಷ್ಟಾರ್ಥಗಳೆಲ್ಲವನ್ನೂ ಕೊಡುವ ಒಂದು ಪಟ್ಟಣವನ್ನು ಕೊಟ್ಟಿದ್ದನು.

ಸರ್ವರತ್ನಮಯೀಂ ದಿವ್ಯಾಂ ಬಾಲಾರ್ಕಸದೃಶಪ್ರಭಾಂ ।
ತತ್ರಾಸ್ಥಿತೋ ಮಹೀಪಾಲೋ ದೇವಗಂಧರ್ವಪನ್ನಗಾಃ ॥ ೩ ॥

ಉಪಾಸತೇ ಮಹಾತ್ಮಾನಂ ತೇಜಸಾತೀವ ಭಾಸ್ಕರಂ ।
ತತ್ರ ಸ್ಥಿತೋ ಮಹೀಪಾಲೋ ಸಪ್ತದ್ವೀಪಾಂ ವಸುಂಧರಾಂ ॥ ೪ ॥

ಪಾಲಯಾಮಾಸ ಧರ್ಮೇಣ ಪಿತಾಪುತ್ರಮಿವೌರಸಂ ।
ಪ್ರಭೂತಧನಧಾನ್ಯಸ್ತು ಪುತ್ರ ದೌಹಿತ್ರವಾನ್ನೃಪಃ ॥ ೫ ॥

ಸ ಪಾಲಯನ್ ಶುಭಂ ರಾಜ್ಯಂ ಪರಂ ವಿಸ್ಮಯಮಾಗತಃ ।
ನ ತಾದೃಶಮಭೂತ್ಪೂರ್ವಂ ರಾಜ್ಯಂ ಕಸ್ಯ ಹಿ ಕರ್ಹಿಚಿತ್ । ॥ ೬ ॥

ನ ಚೇದೃಶಂ ನರೈರನ್ಯೈರ್ವಿಮಾನಮಧಿರೋಹಿತಂ ।
ಕಸ್ಯೇಯಂ ಕರ್ಮಣೋವ್ಯುಷ್ಟಿರ್ಯೇನಾಹಂ ಸುರರಾಡಿವ ॥ ೭ ॥

---

೩–೫. ಆ ಪಟ್ಟಣವು ಸಮಸ್ತವಾದ ರತ್ನಗಳಿಂದಲೂ ತುಂಬಿದ್ದಿತು. ಬಾಲಸೂರ್ಯನಂತೆ ಯಾವಾಗಲೂ ಹೊಳೆಯುತ್ತಿದ್ದಿತು. ಅಲ್ಲಿದ್ದುಕೊಂಡು ಇರುವ ರಾಜನನ್ನು ದೇವತೆಗಳೂ, ಗಂಧರ್ವರೂ, ಪನ್ನಗರೂ ತೇಜೋವಂತನಾದ ಸೂರ್ಯನನ್ನು ಸೇವಿಸುವಂತೆ ಸೇವಿಸುತ್ತಿದ್ದರು. ರಾಜನ ಆ ಪಟ್ಟಣದಲ್ಲಿದ್ದುಕೊಂಡು ಏಳುದ್ವೀಪಗಳಿಂದ ಕೂಡಿದ ಭೂಮಿಯನ್ನು ತಂದೆಯು ಹೊಟ್ಟೆಯಲ್ಲಿ ಹುಟ್ಟಿದ ಮಗನನ್ನು ಕಾಪಾಡುವಂತೆ ಧರ್ಮದಿಂದ ಕಾಪಾಡುತ್ತಿದ್ದನು. ಈ ರೀತಿ ಇರಲು ಅವನಿಗೆ ಬಹಳವಾದ ಧನವೂ, ಧಾನ್ಯವೂ ತುಂಬಿತು. ಮಕ್ಕಳೂ ಮುಮ್ಮಕ್ಕಳೂ ಆದರು. ಅಷ್ಟೇ ಅಲ್ಲದೆ ಹೆಣ್ಣುಮಕ್ಕಳಿಗೂ ಮಕ್ಕಳಾಗಿದ್ದರು.

೬–೭. ಅವನು ಇಂತು ರಾಜ್ಯವಾಳುತ್ತಿರಲು ತನಗೇ ಬಹುವಾದ ಆಶ್ಚರ್ಯ ಉಂಟಾಯಿತು. ಈ ತರಹದ ರಾಜ್ಯವು ಹಿಂದೆ ಯಾರಿಗೂ ಯಾವಾಗಲೂ ಇರಲಿಲ್ಲ. ಈ ರೀತಿಯಾದ ವಿಮಾನವನ್ನು ಹಿಂದೆ ಯಾರೂ ಹತ್ತಿರಲಿಲ್ಲ. ನಾನು ಮಾತ್ರ ಈ ರಾಜ್ಯದಿಂದಲೂ, ಈ ವಿಮಾನದಿಂದಲೂ ಇಂದ್ರನಂತೆ ಸುಖಿಸುತ್ತ ಇರುವೆನಲ್ಲ! ಈ ಪುಣ್ಯವು ಯಾವ ಕರ್ಮದ ಪರಿಪಾಕವು?

ಇತಿ ಚಿಂತಾಪರೋ ಭೂತ್ವಾ ವಿಮಾನವರಮಾಸ್ಥಿತಃ ।
ದದರ್ಶ ಪಾರ್ಥಿವವರೋ ಮೇರುಂ ಶಿಖರಿಣಾಂ ವರಂ ॥ ೮ ॥

ತತ್ರಾಸ್ತೇ ಚ ಮಹಾತ್ಮಾಸೌ ದ್ವಿತೀಯ ಇವ ಭಾಸ್ಕರಃ ।
ಆಸೀನಂ ಪರ್ವತವರೇ ಶೈಲಪಟ್ಟೇ ಹಿರಣ್ಮಯೇ ॥ ೯ ॥

ಸನತ್ಕುಮಾರಂ ಬ್ರಹ್ಮರ್ಷಿಂ ಜ್ಞಾನಯೋಗ ಪರಾಯಣಂ ।
ದೃಷ್ಟ್ವಾ ಹ್ಯವತರದ್ರಾಜಾ ಪ್ರಷ್ಟುಕಾಮೋಥ ವಿಸ್ಮಯಂ ॥ ೧೦ ॥

ವವಂದೇ ಚರಣೌ ಹೃಷ್ಟಃ ತೇನಾಪಿ ಸ ಚ ನಂದಿತಃ ।
ಸುಖೋಪವಿಷ್ಟಸ್ತು ನೃಪಃ ಪಪ್ರಚ್ಛ ಮುನಿಪುಂಗವಂ ॥ ೧೧ ॥

ಭಗವನ್ ದುರ್ಲಭಾ ಲೋಕೇ ಸಂಪದೇಯಂ ಯಥಾ ಮಮ ।
ಕರ್ಮಣಾ ಕೇನ ಲಭ್ಯೇತ ಕಶ್ಚಾಹಂ ಪೂರ್ವಜನ್ಮನಿ ।
ತತ್ವಂ ಕಥಯ ಮೇ ಸರ್ವಮನುಗ್ರಾಹ್ಯೋಽಸ್ಮಿ ತೇ ಯದಿ ॥ ೧೨ ॥

---

೮. ವಿಮಾನದಲ್ಲಿ ಕುಳಿತುಕೊಂಡು ಹೋಗುತ್ತ ಹೀಗೆ ಯೋಚಿಸುತ್ತಿರಲು ಆ ರಾಜನು ಪರ್ವತಶ್ರೇಷ್ಠವಾದ ಮೇರುವನ್ನು ನೋಡಿದನು.

೯-೧೧. ಅಲ್ಲಿ ಎರಡನೆಯ ಸೂರ್ಯನೋ ಎಂಬಂತೆ ಕಾಂತಿಯಿಂದ ಕೂಡಿರುವ ಮಹಾತ್ಮನಾದ ಸನತ್ಕುಮಾರನಿದ್ದನು. ಆ ಪರ್ವತದ ಚಿನ್ನದ ಚಪ್ಪಡಿಯ ಮೇಲೆ ಕುಳಿತುಕೊಂಡು ಜ್ಞಾನಯೋಗದಲ್ಲಿ ಆಸಕ್ತನಾದ ಆ ಸನತ್ಕುಮಾರನನ್ನು ನೋಡಿದನು. ಆ ಮಹರ್ಷಿಯನ್ನು ನೋಡಿ ರಾಜನು ತನ್ನ ಆಶ್ಚರ್ಯಕ್ಕೆ ಕಾರಣವನ್ನು ಕೇಳಬೇಕೆಂದು ಕೆಳಗಿಳಿದನು ಇಳಿದು ಆ ಋಷಿಯ ಪಾದಗಳಿಗೆ ನಮಸ್ಕರಿಸಿದನು. ಅವನೂ ಕೂಡ ಆಶೀರ್ವದಿಸಿದನು. ಅನಂತರ ರಾಜನು ಸುಖವಾಗಿ ಕುಳಿತುಕೊಂಡು ಆ ಋಷಿಯನ್ನು ಇಂತು ಪ್ರಶ್ನಿಸಿದನು.

೧೨. ಎಲೈ ಭಗವಂತನೇ! ನನ್ನ ಸಂಪತ್ತಿನಂತೆ ಎಲ್ಲರಿಗೂ ಸಂಪತ್ತು ಇರುವುದು ದುರ್ಲಭವು. ಇದು ನನ್ನ ಯಾವ ಕರ್ಮದಿಂದ ಲಭಿಸಿದೆ? ನಾನು ಪೂರ್ವಜನ್ಮದಲ್ಲಿ ಏನಾಗಿದ್ದೆ? ನನ್ನಲ್ಲಿ ಅನುಗ್ರಹ ಮಾಡಬೇಕೆಂದಿದ್ದರೆ ಇದರ ವಿಷಯಗಳನ್ನು ಹೇಳಿರಿ.

ಶೃಣು ರಾಜನ್ ಪ್ರವಕ್ಷ್ಯಾಮಿ ಪೂರ್ವವೃತ್ತಸ್ಯ ಕಾರಣಂ ।
ಯೇನ ಕೃತ್ವಾ ವಿಶೇಷೇಣ ತವ ಚಾನುಗ್ರಹೋಽಭವತ್ ॥ ೧೩ ॥

ತ್ವಮಾಸೀಃ ಪೂರ್ವಜನ್ಮನಿ ಸುವೈಶ್ಯಃ ಸತ್ಯವಾಕ್ ಶುಚಿಃ ।
ಸ್ವಕರ್ಮ ತೇ ಪರಿತ್ಯಕ್ತಂ ತತಸ್ತ್ಯಕ್ತಸ್ತು ಬಾಂಧವೈಃ ॥ ೧೪ ॥

ಸ ತ್ವಂ ವೃತ್ತಿ ಪರಿಕ್ಷೀಣೋ ಭಾರ್ಯಯಾನುಗತಸ್ತಥಾ ।
ನಿರ್ಗತಸ್ಸ್ವಜನಾಂಸ್ತ್ಯಕ್ತ್ವಾ ಪರಪ್ರೇಷಣಲಿಪ್ಸಯಾ ॥ ೧೫ ॥

ನ ಚ ಪ್ರೇಷಣದೋಽಪ್ಯಾಸೀತ್ ಕಾಲೇ ದುರ್ಭಿಕ್ಷಪೀಡಿತೇ ।
ತತಃ ಕದಾಚಿದ್ಗಹನೇ ಸರಶ್ಶೋತ್ಫುಲ್ಲಪಂಕಜಂ ॥ ೧೬ ॥

ದೃಷ್ಟ್ವಾ ತತ್ರ ಕೃತೋ ಭಾವೋ ಗೃಹ್ಣೀವಃ ಪಂಕಜಾನಿ ವೈ ।
ಏತಾವದುಕ್ತ್ವಾ ಪುಷ್ಪಾಣಿ ತಾನ್ಯಾದಾಯ ಪದೇ ಪದೇ ॥ ೧೭ ॥

---

೧೩. ಎಲೈ ದೊರೆಯೇ! ನೀನು ಯಾವ ಕೆಲಸವನ್ನು ಮಾಡಿ ಇಂತಹ ಅನುಗ್ರಹವನ್ನು ಹೊಂದಿರುವೆಯೋ ಅಂತಹ ಪೂರ್ವಜನ್ಮದ ಪುಣ್ಯವನ್ನು ಹೇಳುತ್ತೇನೆ, ಕೇಳು.

೧೪. ನೀನು ಪೂರ್ವಜನ್ಮದಲ್ಲಿ ಶುಚಿಯಾದ ಸತ್ಯವಂತನಾದ ಒಬ್ಬ ವೈಶ್ಯನಾಗಿದ್ದೆ. ನಿನ್ನ ಜಾತಿಯ ಕಸುಬನ್ನು ನೀನು ಬಿಟ್ಟುಬಿಟ್ಟೆ. ಆದ್ದರಿಂದ ನಿನ್ನ ಬಂಧುಗಳೆಲ್ಲರೂ ನಿನ್ನನ್ನು ಬಿಟ್ಟುಬಿಟ್ಟರು.

೧೫. ಅನಂತರ ನೀನು ಜೀವನಕ್ಕೆ ದಾರಿಯಿಲ್ಲದೆ ಹೆಂಡತಿಯೊಡನೆ ಯಾರಲ್ಲಿಯಾದರೂ ಆಳಾಗಿರಬೇಕೆಂಬ ಇಚ್ಛೆಯಿಂದ ಹೊರಟುಹೋದೆ.

೧೬-೨೦. ಆ ಕಾಲವು ದುರ್ಭಿಕ್ಷದ ಕಾಲವಾದುದರಿಂದ ಆಳನ್ನಿಟ್ಟು ಕೊಳ್ಳುವವನಾಗಲೀ, ಕಳುಹಿಸುವವನಾಗಲೀ ಇರಲಿಲ್ಲ. ಅನಂತರ ಒಂದುಸಾರಿ ಒಂದು ಕಾಡಿನಲ್ಲಿ ಹೋಗುತ್ತಿರುವಾಗ ಕಮಲಗಳು ಅರಳಿರುವ ಒಂದು ಸರೋವರ ವನ್ನು ನೋಡಿ ಅವನ್ನು ಕೊಯ್ದುಕೊಳ್ಳಬೇಕೆಂದು ನೀನು ಮನಸ್ಸುಮಾಡಿದೆ.

ಆಸ್ಥಿತೋ ನಗರೀಂ ಪುಣ್ಯಾಂ ನಾಮ್ನಾ ವಾರಾಣಸೀಂ ಶುಭಾಂ ।
ತತೋ ವಿಕ್ರೀಣತಃ ಕಶ್ಚಿನ್ನೈವ ಗೃಹ್ಣಾತಿ ಪಂಕಜಂ ॥ ೧೭ ॥

ತನ್ಮಠಾನ್ನಿರ್ಗತಃ ಕಶ್ಚಿತ್ತತ್ರೈವ ಪ್ರಾಂಗಣೇ ಸ್ಥಿತಃ ।
ತತ್ರ ಸ್ಥಾನೇ ನಿವಸತಾ ಶ್ರುತೋ ವಾದಿತ್ರನಿಸ್ಸ್ವನಃ ॥ ೧೮ ॥

ತಸ್ಮಿಂಶ್ಚ ಶ್ರೂಯತೇ ಹ್ಯೇಷಃ ವಾದಿತ್ರಸ್ಯ ಚ ನಿಸ್ಸ್ವನಃ ।
ಇತಿ ಪೃಷ್ಟೇ ತದಾ ತೂರ್ಯೇ ತೇನೋಕ್ತೇ ಪ್ರಸ್ಥಿತೋಂತರಂ ॥ ೨೦ ॥

ಕಾಶಿರಾಜಸ್ತುವಿಖ್ಯಾತ ಇಂದ್ರದ್ಯುಮ್ನಸ್ತು ಪಾರ್ಥಿವಃ ।
ತಸ್ಯಾಸ್ತಿ ದುಹಿತಾ ಖ್ಯಾತಾ ನಾಮ್ನಾ ಚಂದ್ರಾವತೀ ಸತೀ ॥ ೨೧ ॥

ಉಪೋಷಿತಾ ಮಹಾಭಾಗಾ ಜಯನ್ತೀಮಷ್ಟಮೀಂ ಶುಭಾಂ ।
ತತ್ರಾಗತೋಽಸೌ ವೈಶ್ಯಸ್ತು ಸವ್ರತಾ ಯತ್ರ ತಿಷ್ಠತಿ ॥ ೨೨ ॥

---

ಹೀಗೆಂದು ಹೇಳಿ ಆ ಹೂವುಗಳನ್ನು ಕುಯ್ದುಕೊಂಡು ಪ್ರಸಿದ್ಧವಾದ ವಾರಣಾಸಿ ಎಂಬ ನಗರಿಗೆ ನೀನು ಹೋದೆ. ನೀನು ಮಾರುತ್ತ ಹೋಗುತ್ತಿರಲು ಆ ಕಮಲವನ್ನು ಯಾರೂ ತೆಗೆದುಕೊಳ್ಳಲಿಲ್ಲ. ಆಗ ಅಲ್ಲಿದ್ದ ಮಠದಿಂದ ಹೊರಗೆ ಹೊರಟ ಒಬ್ಬನು ಅಲ್ಲಿಯೇ ಅಂಗಳದಲ್ಲಿ ನಿಂತಿದ್ದನು. ಅಲ್ಲಿಯೇ ನೀನು ನಿಂತಿರಲು ವಾದ್ಯಗಳ ಧ್ವನಿಯು ಅಲ್ಲಿ ಕೇಳಿಸಿತು. ಈ ವಾದ್ಯದ ಧ್ವನಿಯು ಎಲ್ಲಿಂದ ಕೇಳಿ ಬರುತ್ತದೆ? ಎಂಬುದಾಗಿ ನೀನು ಆತನನ್ನು ಕೇಳಲು, ಅವನು ನಿನ್ನನ್ನು ಒಳಗೆ ಬರಲು ಹೇಳಿ ಹೊರಟುಹೋದನು.

೨೧–೨೨. ಆ ಕಾಲದಲ್ಲಿ ಕಾಶಿಯಲ್ಲಿ ಇಂದ್ರದ್ಯುಮ್ನನೆಂಬ ರಾಜನಿದ್ದನು. ಅವನಿಗೆ ಒಬ್ಬಳು ಮಗಳಿದ್ದಳು. ಅವಳ ಹೆಸರು ಚಂದ್ರಾವತಿಯು. ಆಕೆಯು ಜಯಂತಿಯಾದ ಅಷ್ಟಮಿಯನ್ನು ಮಾಡಲು ಉಪವಾಸಮಾಡಿ ವ್ರತವನ್ನು ಮಾಡುತ್ತಿದ್ದಳು. ವ್ರತಕ್ಕೆ ಸಿದ್ಧಳಾಗಿ ನಿಂತಿದ್ದ ಆಕೆಯ ಬಳಿಗೆ ನೀನು ಹೋದೆ.

ಸಂತುಷ್ಟಚಿತ್ತಸ್ಸ ತದಾ ಹರ್ಷಾತ್ತತ್ರ ಗತೋ ಭವಾನ್ ।
ತತ್ರ ಸ್ಥಾನೇ ತ್ವಯಾ ದೃಷ್ಟೋ ದೇವವೈತಾನಿಕೋ ವಿಧಿಃ ॥ ೨೩ ॥

ಆದಿತ್ಯಸಹಿತೋ ಯತ್ರ ಪೂಜ್ಯತೇ ಭಗವಾನ್ ಹರಿಃ ।
ಕೃತಾ ಚ ಮಹತೀ ಪೂಜಾ ಪುಷ್ಪೈಃಶ್ಚಾನ್ಯೈರಲಂಕೃತಃ ॥ ೨೪ ॥

ಘಟಸ್ಯೋಪರಿಸಂಸ್ಥೋ ವೈ ಯತ್ರ ಸಂಪೂಜ್ಯತೇ ಹರಿಃ ।
ತ್ವದ್ಭಕ್ತ್ಯಾ ಚ ತ್ವಯಾ ಪತ್ನ್ಯಾ ಸಹ ಪುಷ್ಪಾರ್ಚನಂಕೃತಂ ॥ ೨೫ ॥

ಶೇಷೈಸ್ತು ಪ್ರಕರಸ್ತತ್ರ ಕೃತಃ ಪುಷ್ಪಮಯಸ್ತಥಾ ।
ತಂ ದೃಷ್ಟ್ವಾ ವಿಸ್ಮಿತಾ ಸಾಹ ಕೇನೇಹಾಭ್ಯರ್ಚನಂ ಕೃತಂ ॥ ೨೬ ॥

ಜ್ಞಾತ್ವಾ ತ್ವತ್ಕರ್ಮ ತತ್ಸರ್ವಂ ಕೃತಂ ಸಂರಕ್ಷಣಂ ತವ ।
ತತಸ್ತುಷ್ಟಾವ ಸಾ ತುಭ್ಯಂ ದದೌ ವಿತ್ತಂ ತತಸ್ಸ್ವಯಂ ॥ ೨೭ ॥

ತ್ವಯಾ ವಿತ್ತಂ ನೋ ಗೃಹೀತಂ ಭೋಜನಾಯಾನುಮಂತ್ರಿತಃ ।
ನ ಗೃಹೀತಂ ಭೋಜನಂ ಚ ನ ಚ ವಿತ್ತಂ ತ್ವಯಾ ತದಾ ॥ ೨೮ ॥

---

೨೩—೨೭. ನೀನು ಆಗ ಸಂತೋಷಗೊಂಡು ಅಲ್ಲಿಗೆ ಹೋದೆ. ಅಲ್ಲಿ ಮಾಡುತ್ತಿದ್ದ ಪೂಜೆಯನ್ನು ನೀನು ನೋಡಿದೆ. ಅಲ್ಲಿ ಆದಿತ್ಯನೊಡಗೂಡಿದ ಹರಿಯನ್ನು ಪೂಜೆಮಾಡುತ್ತಿದ್ದರು. ಅವರು ಒಂದು ಕಲಶದ ಮೇಲೆ ಆ ಆದಿತ್ಯ ಹರಿಯರ ಪ್ರತಿಮೆಗಳನ್ನಿಟ್ಟುಕೊಂಡು ಪುಷ್ಪಗಳಿಂದ ಬಹುವಾಗಿ ಪೂಜಿಸಿದ್ದರು. ಆಗ ಆ ದೇವರಲ್ಲಿ ಭಕ್ತಿಯಿಂದ ನಿನ್ನ ಹೆಂಡತಿಯೂ ನೀನೂ, ನೀವು ತಂದಿದ್ದ ಹೂವಿನಿಂದ ಆ ದೇವರನ್ನು ಪೂಜಿಸಿದಿರಿ. ಹೆಚ್ಚಾದ ಹೂವಿನಿಂದ ಆ ದೇವರ ಸುತ್ತಲೂ ಮಂಟಪದಂತೆ ಹೂವನ್ನು ಕಟ್ಟಿದಿರಿ. ಅದನ್ನು ನೋಡಿ ಆಕೆಯು ಆಶ್ಚರ್ಯಗೊಂಡಳು. ಈ ಪೂಜೆಯನ್ನು ಯಾರು ಮಾಡಿದರು? ಎಂದು ಕೇಳಿದಳು. ಅನಂತರ ಆ ಕೆಲಸವೆಲ್ಲವನ್ನೂ ನೋಡಿ ಆ ದೇವರು ವ್ಯತ್ಯಾಸವಾಗದಿರುವುದನ್ನೂ ತಿಳಿದು ಆಕೆಯು ನಿನ್ನನ್ನು ಹೊಗಳಿದಳು. ಅಲ್ಲದೆ ಹಣವನ್ನೂ ಕೂಡ ನಿನಗೆ ಕೊಟ್ಟಳು.

೨೮. ನೀನು ಆ ಹಣವನ್ನೂ ತೆಗೆದುಕೊಳ್ಳಲಿಲ್ಲ. ಆಮೇಲೆ ಊಟ ಮಾಡುವಂತೆ ಹೇಳಲು ಅದಕ್ಕೂ ಒಪ್ಪಲಿಲ್ಲ. ಅಂತು ಹಣ, ಊಟ ಒಂದಕ್ಕೂ ಒಪ್ಪಲಿಲ್ಲ.

ಆದಿತ್ಯೋ ವಿಷ್ಣುಸಂಯುಕ್ತಃ ಪೂಜಿತೋಽಸೌ ಯಥಾವಿಧಿ ।
ತತಃ ಪ್ರಭಾತಸಮಯೇ ರಕ್ಷ್ಯಮಾಣಸ್ತ್ವಯಾ ಸದಾ ॥ ೨೯ ॥

ವಿಶ್ರಂಭಯಿತ್ವಾ ತಾನ್ಸರ್ವಾನ್ನಿರ್ಗತೋಽಸಿ ಯಥೇಚ್ಛಯಾ ।
ತದೇತದನ್ಯಜನುಷಿ ಸುಕೃತಂ ಚಾರ್ಜಿತಂ ತ್ವಯಾ ॥ ೩೦ ॥

ಪಂಚತ್ವಂ ಚ ತ್ವಯಾ ಪ್ರಾಪ್ತಂ ಸ್ವೀಯಕರ್ಮಾನುಯೋಗತಃ ।
ತೇನ ಪುಣ್ಯೇನ ಮಹತಾ ವಿಮಾನಮುಗಮತ್ತದಾ ॥ ೩೧ ॥

ತತ್ಫಲಂ ಭುಜ್ಯತೇ ಭೂಪ ಪೂರ್ವಜನ್ಮಕೃತಂ ಚ ಯತ್ ॥ ೩೨ ॥

॥ ಹರಿಶ್ಚಂದ್ರ ಉವಾಚ ॥

ಕೇನೈವ ಚ ವಿಧಾನೇನ ಕಸ್ಮಿನ್ಮಾಸೇ ಚ ಸಾ ತಿಥಿಃ ।
ಕರ್ತವ್ಯಾ ತನ್ಮಮಾಚಕ್ಷ್ವ ಹ್ಯನುಗ್ರಾಹ್ಯೋಽಸ್ಮಿ ತೇ ಯದಿ ॥ ೩೩ ॥

---

೨೯–೩೦. ಈ ರೀತಿಯಾಗಿ ವಿಷ್ಣುವಿನೊಡನೆ ಕೂಡಿದ ಆದಿತ್ಯನನ್ನೂ ಕ್ರಮವಾಗಿ ಪೂಜಿಸಿದೆ. ಬೆಳಗಿನವರೆಗೂ ನೀನು ಅವಳೊಡನೆ ಮಾತುಕತೆಗಳನ್ನು ಆಡಿಕೊಂಡು ಜಾಗರಣೆಯಲ್ಲಿಯೇ ಇದ್ದೆ. ಬೆಳಗಾದಮೇಲೆ ಅವರೆಲ್ಲರಿಗೂ ಒಳ್ಳೆಯ ಮಾತನ್ನು ಹೇಳಿ ಒಪ್ಪಿಸಿ ನೀನು ಹೊರಟುಹೋದೆ. ಈ ರೀತಿಯಾಗಿ ಹಿಂದಿನ ಜನ್ಮದಲ್ಲಿ ಪುಣ್ಯವನ್ನು ಸಂಪಾದಿಸಿದೆ.

೩೧–೩೨. ಆಮೇಲೆ ನಿನ್ನ ಕರ್ಮಕ್ಕೆ ಅನುಸಾರವಾದ ಸಾವನ್ನೂ ಹೊಂದಿದೆ. ಅನಂತರ ಆ ಪುಣ್ಯದಿಂದಲೇ ವಿಮಾನವು ಬಂದಿತು. ಅದರಲ್ಲಿ ಕುಳಿತು ಸ್ವರ್ಗಕ್ಕೆ ಹೋದೆ. ಈ ರೀತಿಯಾಗಿ ಪೂರ್ವಜನ್ಮದಲ್ಲಿ ಮಾಡಿದ ಪುಣ್ಯದ ಫಲವನ್ನು ಅನುಭವಿಸುತ್ತಿದ್ದೀಯೆ.

೩೩. ಹರಿಶ್ಚಂದ್ರನು ಹೇಳಿದನು–ಅದರ ವಿಧಾನವೇನು? ಆ ತಿಥಿಯು ಯಾವ ಮಾಸದಲ್ಲಿ ಬರುತ್ತದೆ? ನನ್ನಲ್ಲಿ ಅನುಗ್ರಹವಿಟ್ಟು ಅವೆಲ್ಲವನ್ನೂ ಹೇಳು.

|| ಸನತ್ಕುಮಾರ ಉವಾಚ ||

ಶೃಣುಷ್ವಾವಹಿತೋ ರಾಜನ್ ಕಥ್ಯಮಾನಂ ಮಯಾ ತವ |
ಶ್ರಾವಣಸ್ಯ ತು ಮಾಸಸ್ಯ ಕೃಷ್ಣಾಷ್ಟಮ್ಯಾಂ ನರಾಧಿಪ || ೩೪ ||

ರೋಹಿಣೀ ಯದಿ ಲಭ್ಯೇತ ಜಯಂತೀ ನಾಮ ಸಾ ತಿಥಿಃ |
ಭೂಯೋ ಭೂಯೋ ಮಹಾರಾಜಾ ನ ಭವೇಜ್ಜನ್ಮಕಾರಣಂ || ೩೫ ||

ವಿಧಾನಮಸ್ಯಾ ವಕ್ಷ್ಯಾಮಿ ಯಥೋಕ್ತಂ ಬ್ರಹ್ಮಣಾ ಮಮ |
ಯತ್ಕೃತ್ವಾ ಮುಕ್ತಪಾಪಸ್ತು ವಿಷ್ಣುಲೋಕಂ ಸ ಗಚ್ಛತಿ || ೩೬ ||

ಉಪೋಷಿತಃ ತತಃ ಕೃತ್ವಾ ಸ್ನಾನಂ ಕೃಷ್ಣತಿಲೈಸ್ಸಹ |
ಸ್ಥಾಪಯೇದವ್ರಣಂ ಕುಂಭಂ ಪಂಚರತ್ನ ಸಮನ್ವಿತಂ || ೩೭ ||

ವಜ್ರ ಮೌಕ್ತಿಕ ವೈಡೂರ್ಯ ಪುಷ್ಪರಾಗೇಂದ್ರನೀಲಕಂ |
ಪಂಚರತ್ನಂ ಪ್ರಶಸ್ತಂ ತು ಇತಿ ಕಾತ್ಯಾಯನೋಽಬ್ರವೀತ್ || ೩೮ ||

---

೩೪–೩೫　ಸನತ್ಕುಮಾರನು ಹೇಳಿದನು– ಎಲೈ ರಾಜನೆ! ನಿನಗೆ ನಾನು ಹೇಳುವುದನ್ನು ಮನಸ್ಸಿಟ್ಟು ಕೇಳು. ಶ್ರಾವಣಮಾಸದ ಕೃಷ್ಣ ಅಷ್ಟಮಿಯದಿನ ರೋಹಿಣೀ ನಕ್ಷತ್ರವಿದ್ದರೆ ಆ ತಿಥಿಗೆ ಜಯಂತಿಯೆಂದು ಹೆಸರು. ಆ ಜಯಂತಿಯನ್ನು ಆಚರಿಸಿದರೆ ಮತ್ತೆ ಮತ್ತೆ ಜನ್ಮವನ್ನು ಹೊಂದುವ ಹಾಗಿರುವುದಿಲ್ಲ.

೩೬. ಬ್ರಹ್ಮನು ನನಗೆ ಹೇಳಿದ ರೀತಿಯಲ್ಲಿ ಆ ಜಯಂತಿಯ ವಿಧಾನವನ್ನು ಹೇಳುತ್ತೇನೆ. ಅದನ್ನು ಮಾಡಿದರೆ ಪಾಪವನ್ನು ನಾಶಮಾಡಿಕೊಂಡು ವಿಷ್ಣುಲೋಕವನ್ನು ಹೊಂದುತ್ತಾನೆ.

೩೭. ಕಪ್ಪಾದ ಎಳ್ಳಿನ ಎಣ್ಣೆಯನ್ನು ಮೈಗೆ ಬಳಿದುಕೊಂಡು ಸ್ನಾನಮಾಡಿ ಉಪವಾಸವಿರಬೇಕು. ತೂತು ತಗ್ಗುಗಳಿಲ್ಲದ ಒಂದು ಕಲಶವನ್ನು ಇಟ್ಟು ಅದಕ್ಕೆ ಪಂಚ (ಐದು) ಬಗೆಯ ರತ್ನಗಳನ್ನು ಹಾಕಬೇಕು.

೩೮. ವಜ್ರ ಮುತ್ತು ವೈಡೂರ್ಯ, ಪುಷ್ಪರಾಗ, ಇಂದ್ರನೀಲ, ಇವೇ ಪಂಚರತ್ನಗಳು. ಇವು ಪ್ರಶಸ್ತವಾದುವೆಂದು ಕಾತ್ಯಾಯನನು ಹೇಳಿದ್ದಾನೆ.

ತಸ್ಯೋಪರಿ ನ್ಯಸೇತ್ಪಾತ್ರಂ ಸೌವರ್ಣಂ ಲಕ್ಷಣಾನ್ವಿತಂ ।
ಸೌವರ್ಣಂ ವಿನ್ಯಸೇತ್ತತ್ರ ಯಶೋದಾಂ ನಂದಗೇಹಿನೀಂ ॥ ೩೯ ॥

ದದಮಾನಂ ತು ಪುತ್ರಸ್ಯ ಸ್ತನಂ ವೈ ವಿಸ್ಮಿತಾನನಂ ।
ಪಿಬಮಾನಂ ಸ್ತನಂ ಮಾತುರಪರಂ ಪಾಣಿನಾ ಸ್ಪೃಶೇ ॥ ೪೦ ॥

ಆಲೋಕ್ಯ ಮಾತರಂ ಪ್ರೇಮ್ಣಾ ಸುಖಯಂತಂ ಮುಹುರ್ಮುಹುಃ ।
ಸೌವರ್ಣಂ ಕಾರಯೇದ್ದೇವಂ ಯಾವಚ್ಛಕ್ತಿಶ್ಚ ವಿದ್ಯತೇ ॥ ೪೧ ॥

ದ್ವಿನಿಷ್ಕಮಾತ್ರಂ ಕರ್ತವ್ಯಂ ಯದಿ ಶಕ್ತಿಶ್ಚ ವಿದ್ಯತೇ ।
ತ್ರಿಲೋಹೇನೈವ ಕರ್ತವ್ಯಂ ಸೌವರ್ಣೇನಾಥವಾ ಪುನಃ ॥ ೪೨ ॥

---

೩೯-೪೦. ಆ ಕಲಶದ ಮೇಲೆ ಒಂದು ಚಿನ್ನದ ತಟ್ಟೆಯನ್ನಿಡಬೇಕು. ಅದು ಲಕ್ಷಣವಾಗಿ ಚೆನ್ನಾಗಿರಬೇಕು. ಅದರೊಳಗೆ ಒಂದು ಚಿನ್ನದಲ್ಲಿ ಮಾಡಿದ ಯಶೋದೆಯ ವಿಗ್ರಹವಿರಬೇಕು. ಆ ಯಶೋದೆಯು ಮಗನಿಗೆ ಮೊಲೆಯನ್ನು ಕೊಡುತ್ತ ಆಶ್ಚರ್ಯದಿಂದ ಕೂಡಿದ ಮುಖದಿಂದ ಕೂಡಿರಬೇಕು. ಆ ಕೃಷ್ಣನು ಒಂದು ಮೊಲೆಯನ್ನು ಕುಡಿಯುತ್ತ ಮತ್ತೊಂದನ್ನು ಕೈಯಲ್ಲಿ ಹಿಡಿದುಕೊಂಡಿರಬೇಕು.

೪೧. ತಾಯಿಯನ್ನು ಪ್ರೀತಿಯಿಂದ ನೋಡುತ್ತ ಸಂತೋಷಪಡಿಸುವಂತಿರಬೇಕು. ಇಂತಹ ವಿಗ್ರಹಗಳನ್ನು ಶಕ್ತಿಗನುಗುಣವಾಗಿ ಚಿನ್ನದಿಂದ ಮಾಡಿಸಿರಬೇಕು.

೪೨. ಶಕ್ತಿಯಿದ್ದರೆ ಎರಡು ನಿಷ್ಕ (ಒಂದು ಬಗೆ ಪ್ರಮಾಣ) ಗಳ ಚಿನ್ನದಿಂದ ಮಾಡಿಸಿರಬೇಕು. ಚಿನ್ನದಿಂದ ಮಾಡಿಸಿದರೂ ಸರಿಯೆ, ಅಥವಾ ಮೂರು ಲೋಹಗಳಿಂದಲಾದರೂ ಮಾಡಿಸಬಹುದು.

ತದ್ವಚ್ಚ ರೋಹಿಣೀಂ ಕುರ್ಯಾತ್ಸೌವರ್ಣಾಂ ರಾಜತಶ್ಶಶೀ ।
ಅಂಗುಷ್ಠಮಾತ್ರಸ್ತು ಶಶೀ ರೋಹಿಣೀ ಚತುರಂಗಳಾ　　　॥ ೪೩ ॥

ಕರ್ಣಯೋಃ ಕುಂಡಲೇ ದದ್ಯಾತ್ಕಂಠಾಭರಣಂಕಂ ಗಳೇ ।
ಏವಂ ಕೃತ್ವಾ ತು ಗೋವಿಂದಂ ಮಾತ್ರಾ ಸಾಕಂ ಜಗತ್ಪತಿಂ　　　॥ ೪೪ ॥

ಕ್ಷೀರಾದಿಸ್ನಾಪನಂ ಕೃತ್ವಾ ಚಂದನೇನಾನು ಲೇಪಯೇತ್ ।
ಶ್ವೇತವಸ್ತ್ರಯುಗಚ್ಛನ್ನಂ ಪುಷ್ಪಮಾಲೋಪಶೋಭಿತಂ　　　॥ ೪೫ ॥

ನೈವೇದ್ಯೈರ್ವಿವಿಧೈರ್ಭಕ್ಷ್ಯೈಃಫಲೈರ್ನಾನಾವಿಧೈರಪೀ ।
ದೀಪಂ ಚ ಕಾರಯೇತ್ತತ್ರ ಪುಷ್ಪಮಂಡಪಶೋಭಿತಂ　　　॥ ೪೬ ॥

---

೪೩. ರೋಹಿಣಿಯ ಪ್ರತಿಮೆಯನ್ನು ಚಿನ್ನದಿಂದಾಗಲೀ ಮೂರು ಲೋಹಗಳಿಂದಾಗಲೀ ಮಾಡಿಸಬೇಕು. ಚಂದ್ರನನ್ನು ಮಾತ್ರ ಬೆಳ್ಳಿಯಲ್ಲಿ ಮಾಡಿಸಿರಬೇಕು. ಆ ಚಂದ್ರನು ಒಂದು ಹೆಬ್ಬೆರಳಿನಷ್ಟು ಉದ್ದವಿರಬೇಕು. ರೋಹಿಣಿಯು ನಾಲ್ಕು ಅಂಗುಲ ಉದ್ದವಿರಬೇಕು.

೪೪. ಕಿವಿಗಳಿಗೆ ಕುಂಡಲಗಳನ್ನು ಹಾಕಿರಬೇಕು. ಕತ್ತಿಗೆ ಸರಪಣಿಯನ್ನು ಹಾಕಿರಬೇಕು. ಈ ರೀತಿಯಾಗಿ ಗೋವಿಂದನನ್ನೂ ಅವನ ತಾಯಿಯನ್ನೂ ಮಾಡಬೇಕು.

೪೫. ಅನಂತರ ಪಂಚಾಮೃತ ಸ್ನಾನಗಳನ್ನು ಮಾಡಿಸಬೇಕು. ಗಂಧವನ್ನು ಪೂಸಬೇಕು. ಬಿಳಿಯ ಬಟ್ಟೆಯನ್ನು ಹೊದ್ದಿಸಿ, ಮತ್ತೊಂದನ್ನು ಉಡಿಸಿರಬೇಕು. ಹೂ ಮಾಲೆಯನ್ನು ಹಾಕಿ ಅಲಂಕರಿಸಬೇಕು.

೪೬-೪೭. ಬಗೆ ಬಗೆಯ ಭಕ್ಷ್ಯಗಳನ್ನು ಮಾಡಿ ನೈವೇದ್ಯ ಮಾಡಬೇಕು. ಬಗೆ ಬಗೆಯ ಹಣ್ಣುಗಳನ್ನು ತಂದು ನೈವೇದ್ಯ ಮಾಡಬೇಕು. ದೀಪವನ್ನು ಬೆಳಗ

**ಗೀತಂ ನೃತ್ಯಂ ಚ ವಾದ್ಯಂ ಚ ಕಾರಯೇದ್ಭಕ್ತಿಮಾನ್ಸುಧೈಃ ।**
**ಏವಂ ಕೃತ್ವಾ ವಿಧಾನಂ ತು ಯಥಾವಿಭವಸಾರತಃ ॥ ೪೭ ॥**

**ಗುರುಂ ಸಂಪೂಜಯೇತ್ಪಶ್ಚಾತ್ ಪೂಜಾಂ ತತ್ರ ಸಮಾಪಯೇತ್ ॥ ೪೮ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಪತಿ**
**ನಾರದ ಸಂವಾದೇ ಜನ್ಮಾಷ್ಟಮಿವ್ರತಂ ನಾಮ**
**ದ್ವಾತ್ರಿಂಶೋಽಧ್ಯಾಯಸ್ಸಮಾಪ್ತಃ**

---

ಬೇಕು. ಹೂ ಮಾಲೆಯನ್ನು ಹಾಕಬೇಕು. ನೃತ್ಯಗೀತಗಳನ್ನೂ ವಾದ್ಯವನ್ನೂ ಭಕ್ತಿಯಿಂದಲೂ, ಬಂಧುಗಳೊಡನೆಯೂ ಮಾಡಬೇಕು.

೪೮. ಈ ರೀತಿಯಾಗಿ ತನ್ನ ಶಕ್ತಿಗನುಗುಣವಾಗಿ ವೈಭವದಿಂದ ಪೂಜಿಸಬೇಕು. ಅನಂತರ ಗುರುವನ್ನು ಪೂಜಿಸಿ ಉತ್ತರ ಪೂಜೆ ಮಾಡಿ ಪೂಜೆಯನ್ನು ಮುಗಿಸಬೇಕು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಪತಿ
ನಾರದರ ಸಂವಾದದಲ್ಲಿ ಜನ್ಮಾಷ್ಟಮೀ ವ್ರತವೆಂಬ
ಮೂವತ್ತೆರಡನೆಯ ಅಧ್ಯಾಯವು ಮುಗಿದುದು



॥ ಶ್ರೀಃ ॥

-X-

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ತ್ರಯಸ್ತ್ರಿಂಶೋಽಧ್ಯಾಯಃ ॥



**॥ ಮಹಾದೇವ ಉವಾಚ ॥**

**ದೃಷ್ಟ್ವಾ ಕ್ರತುಶತಂ ಸಿದ್ಧಂ ಸಮಾಪ್ತವರದಕ್ಷಿಣಂ ।**
**ಮಘವಾನ್ ಜಾತಸಂಕಲ್ಪಃ ಪರ್ಯಪೃಚ್ಛದ್ಬೃಹಸ್ಪತಿಂ ॥ ೧ ॥**

**॥ ಇಂದ್ರ ಉವಾಚ ॥**

**ಭಗವನ್ಕೇನ ದಾನೇನ ಸರ್ವತಸ್ಸುಖಮೇಧತೇ ;**
**ಯದಕ್ಷಯಂ ಮಹಾರ್ಥಂ ಚ ತನ್ಮೇ ಬ್ರೂಹಿ ಮಹಾತಪಃ ॥ ೨ ॥**

---

### ಮೂವತ್ತಮೂರನೆಯ ಅಧ್ಯಾಯವು



೧. ಇಂದ್ರನು ನೂರುಯಾಗಗಳು ಪೂರೈಸುವಂತೆ ಮಾಡಿ ಋತ್ವಿಕ್ಕುಗಳಿಗೆ ದಕ್ಷಿಣೆಯನ್ನು ಕೊಟ್ಟು ದಾನಕ್ಕೆ ಸಂಕಲ್ಪಮಾಡಿ ಗುರುವನ್ನು ಕುರಿತು ಇಂತೆಂದನು.

೨. ಇಂದ್ರನು ಹೇಳಿದನು- ಎಲೈ ಮಹಾತಪಸ್ವಿಯಾದ ಬೃಹಸ್ಪತಿಯೇ! ಯಾವ ದಾನವನ್ನೂ ಮಾಡಿದರೆ ಎಲ್ಲಾ ವಿಷಯದಲ್ಲಿಯೂ ಸುಖವನ್ನು ಹೊಂದಿ ಅಕ್ಷಯ ಪುಣ್ಯವನ್ನು ಹೊಂದಿ ಬಹುವಾಗಿ ಹಣವನ್ನು ಹೊಂದುತ್ತಾನೆ. ಎಂಬುದನ್ನು ನನಗೆ ಹೇಳು.

|| ಮಹಾದೇವ ಉವಾಚ ||

ಏವಮಿಂದ್ರೇಣ ಚೋಕ್ತೋಽಸೌ ದೇವದೇವಪುರೋಹಿತಃ ।
ಪ್ರಹಸ್ಯ ತಂ ಮಹಾಬಾಹೋ ಬೃಹಸ್ಪತಿರುವಾಚ ಹ || ೩ ||

|| ಬೃಹಸ್ಪತಿರುವಾಚ ||

ಹಿರಣ್ಯವಸ್ತ್ರಗೋದಾನಂ ಭೂಮಿದಾನಂ ಚ ವಾಸವ ।
ಏತತ್ಪ್ರಯಚ್ಛಮಾನಸ್ತು ಸರ್ವಪಾಪೈಃ ಪ್ರಮುಚ್ಯತೇ || ೪ ||

ಸುವರ್ಣಂ ರಜತಂ ವಸ್ತ್ರಂ ಮಣಿರತ್ನಂ ಚ ವಾಸವ ।
ಸರ್ವಮೇವ ಭವೇದ್ದತ್ತಂ ವಸುಧಾಂ ಯಃ ಪ್ರಯಚ್ಛತಿ || ೫ ||

ಫಾಲಕೃಷ್ಟಾಂ ಮಹೀಂ ದತ್ವಾ ಸಬೀಜಾಂ ಸಸ್ಯಮಾಲಿನೀಂ ।
ಯಾವತ್ಸೂರ್ಯಕೃತಾಲೋಕಸ್ತಾವತ್ಸ್ವರ್ಗೇ ಮಹೀಯತೇ || ೬ ||

ಯತ್ಕಿಂಚಿತ್ಕುರುತೇ ಪಾಪಂ ಪುರುಷೋ ವೃತ್ತಿಕರ್ಶಿತಃ ।
ಅಪಿ ಗೋಚರ್ಮಮಾತ್ರೇಣ ಭೂಮಿದಾನೇನ ಶುಧ್ಯತಿ || ೭ ||

---

೩. ಮಹಾದೇವನು ಹೇಳಿದನು- ಇಂದ್ರನು ಹೀಗೆಂದು ಕೇಳಲು ದೇವೇಂದ್ರನ ಪುರೋಹಿತನಾದ ಬೃಹಸ್ಪತಿಯು ಅವನನ್ನು ನೋಡಿ ನಕ್ಕು ಇಂತೆಂದನು.

೪. ಬೃಹಸ್ಪತಿಯು ಹೇಳಿದನು– ಎಲೈ ವಾಸವನೆ ! ಚಿನ್ನ ಬಟ್ಟೆ ಗೋವು ಭೂಮಿ ಇವನ್ನು ಕೊಡುವವನಿಗೆ ಎಲ್ಲಾ ಪಾಪಗಳೂ ಹೋಗುತ್ತವೆ.

೫. ಭೂಮಿದಾನ ಒಂದನ್ನು ಕೊಟ್ಟರೇನೆ ಚಿನ್ನ, ಬೆಳ್ಳಿ, ಬಟ್ಟೆ, ಮಣಿಗಳು ರತ್ನಗಳು, ಎಲ್ಲಾ ದಾನವನ್ನೂ ಕೊಟ್ಟಂತಾಗುತ್ತದೆ.

೬. ನೇಗಿಲಿನಿಂದ ಉತ್ತು ಹಸನುಮಾಡಿ ಬೀಜಬಿತ್ತಿದ ಭೂಮಿಯಲ್ಲಿ ಸಸ್ಯಗಳಿದ್ದು ಚೆನ್ನಾಗಿರಬೇಕು. ಅಂತಹ ಭೂಮಿಯನ್ನು ದಾನಮಾಡಿದರೆ ಸೂರ್ಯನು ಪ್ರಪಂಚದಲ್ಲಿ ಪ್ರಕಾಶಿಸುವವರೆವಿಗೂ ಸ್ವರ್ಗದಲ್ಲಿ ಸುಖಿಸುತ್ತಾನೆ.

೭. ಹೊಟ್ಟೆಗಿಲ್ಲದ ಮನುಷ್ಯನು ತೊಂದರೆಗಳಿಗೆ ಒಳಪಟ್ಟು ಪಾಪಗಳನ್ನು ಮಾಡುತ್ತಾನೆ. ಅವನು ಗೋಚರ್ಮದಷ್ಟು ಭೂಮಿಯನ್ನು ದಾನಮಾಡಿದರೆ ಆ ಪಾಪಗಳನ್ನು ಕಳೆದುಕೊಂಡು ಶುದ್ಧನಾಗುತ್ತಾನೆ.

ದಶಹಸ್ತೇನದಂಡೇನ ತ್ರಿಂಶದ್ದಂಡ ನಿವರ್ತನಂ ।
ದಶತಾನ್ಯೇವ ಗೋಚರ್ಮ ಬ್ರಹ್ಮಗೋಚರ್ಮ ಲಕ್ಷಣಂ ।    ॥ ೮ ॥

ಸವೃಷಂ ಗೋಸಹಸ್ರಂ ತು ಯತ್ರ ತಿಷ್ಠತ್ಯತಂದ್ರಿತಂ ।
ಬಾಲವತ್ಸಪ್ರಸೂತಾನಾಂ ತದ್ಗೋಚರ್ಮ ಇತಿ ಸ್ಮೃತಂ    ॥ ೯ ॥

ವಿಪ್ರಾಯ ದದ್ಯಾಚ್ಚ ಗುಣಾನ್ವಿತಾಯ
ತಪೋನ್ವಿತಾಯಾಥ ಜಿತೇಂದ್ರಿಯಾಯ ।
ಯಾವನ್ಮಹೀ ತಿಷ್ಠತಿ ಸಾಗರಾಂತಾ
ತಾವತ್ಫಲಂ ತಸ್ಯ ಭವೇದನಂತಂ    ॥ ೧೦ ॥

ಯಥಾಶು ಪತಿತಶ್ಶಕ್ರ ತೈಲಬಿಂದುಃ ಪ್ರಸರ್ಪತಿ ।
ಏವಂ ಭೂಮಿಕೃತಂ ದಾನಂ ಸಸ್ಯೇನಾಸ್ಯ ಪ್ರಸರ್ಪತಿ    ॥ ೧೧ ॥

---

೮. ಹಸ್ತವೆಂದರೆ ಮೊಳಕ್ಕೆ ಹೆಸರು. ಹತ್ತು ಮೊಳ ಅಗಲವೂ, ಮೂವತ್ತು ಮೊಳ ಉದ್ದವೂ ಇರುವ ಭೂಮಿಗೆ ಗೋಚರ್ಮವೆಂದು ಹೆಸರು. ಅಂತಹ ಹತ್ತು ಗೋಚರ್ಮಗಳುಳ್ಳ ಭೂಮಿಯು ಅಗಲವು ಬ್ರಹ್ಮಗೋಚರ್ಮ ಎನ್ನಿಸಿಕೊಳ್ಳುವುದು.

೯, ಹೋರಿ ಕರುಗಳು, ಎಳೆಗರುಗಳು, ಮೊಲೆಯನ್ನು ಬಿಡಲು ಸಮೀಪಿಸಿರುವ ಕರುಗಳು, ಇವುಗಳೊಡನೆ ಕೂಡಿದ ಸಾವಿರ ಹಸುಗಳು ನಿರ್ಬಾಧಕವಾಗಿ ( ಇಕ್ಕಟ್ಟಿಲ್ಲದೆ ) ನಿಂತು ಕೊಳ್ಳುವ ಜಾಗಕ್ಕೆ ಗೋಚರ್ಮವೆಂದು ಹೆಸರು ಬಂದಿರುವುದು.

೧೦. ಒಳ್ಳೆಯ ಗುಣಗಳಿಂದ ಕೂಡಿದವನೂ, ನಿಯಮವಂತನೂ, ತಪೋನಿಷ್ಠನೂ, ಜಿತೇಂದ್ರಿಯನೂ ಆದ ಬ್ರಾಹ್ಮಣನಿಗೆ ಭೂದಾನವನ್ನು ಕೊಡಬೇಕು. ಹಾಗೆ ಕೊಟ್ಟರೆ ಆ ಫಲವು ಸಮುದ್ರದೊಡನೆ ಕೂಡಿದ ಈ ಭೂಮಿಯಿರುವ ಪರ್ಯಂತವೂ ನಾಶವಾಗುವುದಿಲ್ಲ.

೧೧. ಬಟ್ಟೆ ಮುಂತಾದ ಪದಾರ್ಥಗಳ ಮೇಲೆ ಬಿದ್ದ ಎಣ್ಣೆಯು ಯಾವ ರೀತಿಯಾಗಿ ಹರಡಿಕೊಳ್ಳುತ್ತದೆಯೋ ಆ ರೀತಿಯಾಗಿ ಭೂಮಿಯದಾನವು. ಅದರಲ್ಲಿ ಬೆಳೆಯುವ ಪೈರಿನಿಂದ ಕೂಡಿಕೊಂಡು ಇದ್ದರೆ ಹೆಚ್ಚುತ್ತದೆ.

ಯಥಾ ಬೀಜಾನಿ ರೋಹನ್ತಿ ಪ್ರಕೀರ್ಣಾನಿ ಮಹೀತಳೇ ।
ಏವಂ ಕಾಮಾಸ್ಸ್ರರೋಹಂತಿ ಭೂಮಿದಾನಸಮನ್ವಿತಾಃ ॥ ೧೨ ॥

ಅನ್ನದಾಸ್ಸುಖಿನೋ ನಿತ್ಯಂ ವಸ್ತ್ರದೋ ರೂಪವಾನ್ಭವೇತ್ ।
ಸ ನರಸ್ಸರ್ವದೋ ಭೂಯೋ ಯೋ ದದಾತಿ ವಸುಂಧರಾಂ ॥ ೧೩ ॥

ಯಥಾ ಗೌರ್ಭರತೇ ವತ್ಸಂ ಕ್ಷೀರಮುತ್ಸೃಜ್ಯ ಜೀರಣಂ ।
ಏವಂ ದತ್ತಾ ಸಹಸ್ರಾಕ್ಷ ಭೂಮಿರ್ಭರತಿ ಭೂಮಿದಂ ॥ ೧೪ ॥

ಶಂಖಭದ್ರಾಸನಂ ಛತ್ರಂ ವರಾಶ್ವವರವಾರಣಾಃ ।
ಭೂಮಿದಾನಸ್ಯ ಪುಣ್ಯಸ್ಯ ಫಲಂ ಸ್ವರ್ಗಃ ಪುರಂದರ ॥ ೧೫ ॥

ಆದಿತ್ಯಾ ವರುಣೋ ವಹ್ನಿರ್ಬ್ರಹ್ಮಾ ಸೋಮೋ ಹುತಾಶನಃ ।
ಶೂಲಪಾಣಿಶ್ಚ ಭಗವಾನಭಿನಂದತಿ ಭೂಮಿದಂ ॥ ೧೬ ॥

---

೧೨. ಭೂಮಿಯಲ್ಲಿ ಬಿತ್ತಿದ ಬೀಜಗಳು ಮೊಳಕೆ ಬಂದು ಹುಟ್ಟುವಂತೆ ಭೂ ದಾನವನ್ನು ತೆಗೆದುಕೊಂಡವರು ಇಷ್ಟಾರ್ಥಗಳನ್ನು ಹೆಚ್ಚಿಸಿ ಪೂರೈಸಿ ಕೊಡುತ್ತಾರೆ.

೧೩. ಅನ್ನದಾನ ಮಾಡುವವರು ಯಾವಾಗಲೂ ಸುಖವಾಗಿರುತ್ತಾರೆ. ವಸ್ತ್ರದಾನ ಮಾಡುವವರು ಸೌಂದರ್ಯವನ್ನು ಹೊಂದುತ್ತಾರೆ. ಭೂಮಿದಾನ ಮಾಡಿದವರು ಯಾವಾಗಲೂ ಕೇಳಿದುದನ್ನು ಕೊಡುವವರಾಗುತ್ತಾರೆ.

೧೪. ಹಸುವು ತಾನು ತಿಂದ ಹುಲ್ಲಿನಿಂದ ಜೀರ್ಣವಾಗಿ ಬಂದ ಹಾಲನ್ನು ಕೊಟ್ಟು ಕರುವನ್ನು ಕಾಪಾಡುವಂತೆ ಭೂಮಿಯು ಭೂದಾನಮಾಡಿದವನನ್ನು ಕಾಪಾಡುತ್ತದೆ.

೧೫. ಉತ್ತಮವಾದ ಶಂಖ, ಭದ್ರಾಸನ, ಛತ್ರಿ, ಒಳ್ಳೆಯ ಕುದುರೆ, ಆನೆಗಳು ಇವುಗಳ ಫಲವನ್ನೂ ಈ ಭೂಮಿದಾನವು ಹೊಂದಿರುವುದು.

೧೬. ಭೂಮಿದಾನ ಮಾಡಿದವನನ್ನು ಆದಿತ್ಯ, ವರುಣ, ಅಗ್ನಿ, ಬ್ರಹ್ಮ, ಸೋಮ, ವಿಷ್ಣು, ರುದ್ರ ಇವರೆಲ್ಲರೂ ಗೌರವಿಸುತ್ತಾರೆ.

ಆಸ್ಫೋಟಯಂತಿ ಪಿತರೋ ವರ್ಣಯಂತಿ ಪಿತಾಮಹಾಃ ।
ಭೂಮಿದಾತಾ ಕುಲೇ ಜಾತಃ ಸ ನಸ್ತ್ರಾತಾ ಭವಿಷ್ಯತಿ || ೧೭ ||

ತ್ರೀಣ್ಯಾಹುರತಿದಾನಾನಿ ಗಾವಃ ಪೃಥ್ವೀ ಸರಸ್ವತೀ ।
ನರಕಾದುದ್ಧರಂತ್ಯೇತೇ ಜಪವಾಸನದೋಹನಾತ್ || ೧೮ ||

ದುರ್ಗತಿಂ ತಾರಯಂತ್ಯೇತೇ ವಿದ್ವದ್ಭಿರ್ವಿಪ್ರಧಾರಣೈಃ ।
ಪ್ರಾವೃತಾ ವಸ್ತ್ರದಾ ಯಾಂತಿ ನಗ್ನಾ ಯಾಂತಿ ತ್ವವಸ್ತ್ರದಾಃ || ೧೯ ||

ತೃಪ್ತಾ ಯಾಂತ್ಯನ್ನದಾತಾರಃ ಕ್ಷುಧಿತಾ ಯಾಂತಿ ನಾನ್ನದಾಃ ।
ಕಾಂಕ್ಷಂತಿ ಪಿತರಸ್ಸರ್ವೇ ನರಕಾದ್ಭಯಭೀರವಃ || ೨೦ ||

ಗಯಾಂ ಯಾಸ್ಯತಿ ಯಃ ಪುತ್ರಃ ಸ ನಸ್ತ್ರಾತಾ ಭವಿಷ್ಯತಿ ।
ಏಷ್ಟವ್ಯಾ ಬಹವಃ ಪುತ್ರಾ ಯದ್ಯೇಕೋಽಪಿ ಗಯಾಂ ವ್ರಜೇತ್ || ೨೧ ||

---

೧೭. ಭೂಮಿದಾನಮಾಡಿದರೆ ನಮ್ಮ ವಂಶದಲ್ಲಿ ಭೂದಾನಮಾಡುವವನು ಹುಟ್ಟಿ ನಮ್ಮನ್ನೆಲ್ಲಾ ಉದ್ಧಾರಮಾಡಿದನಲ್ಲಾ ! ಎಂದು ಪಿತೃಗಳು ಭುಜವನ್ನು ತಟ್ಟಿಕೊಳ್ಳುತ್ತಾರೆ. ಪಿತಾಮಹರು ಹೊಗಳುತ್ತಾರೆ.

೧೮. ಗೋದಾನ, ಭೂದಾನ, ವಿದ್ಯಾದಾನಗಳನ್ನು ಮೂರನ್ನೇ ಬಹು ಉತ್ತಮವಾದ ದಾನಗಳೆಂದು ಹೊಗಳುತ್ತಾರೆ. ಸರಸ್ವತಿಯು (ವಿದ್ಯೆಯು) ಜಪ ಮಾಡುವುದರಿಂದಲೂ, ಭೂಮಿಯು ವಾಸಿಸುವುದರಿಂದಲೂ, ಗೋವು ಕರೆಯು ವುದರಿಂದಲೂ ಮನುಷ್ಯರನ್ನು ನರಕದಿಂದ ಕಾಪಾಡುತ್ತವೆ.

೧೯. ಇದನ್ನು ದಾನಮಾಡಿದ ಪುಣ್ಯಾತ್ಮರು ನರಕದಿಂದ ಪಾರಾಗುತ್ತಾರೆ. ವಸ್ತ್ರದಾನ ಮಾಡಿದವರು ವಸ್ತ್ರಗಳನ್ನು ಹಾಕಿಕೊಂಡು ಹೋಗುತ್ತಾರೆ.

೨೦. ಅನ್ನದಾನ ಮಾಡಿದವರು ತೃಪ್ತರಾಗಿಯೂ ಅನ್ನದಾನಮಾಡದವರು ಹಸಿದುಕೊಂಡೂ ಹೋಗುತ್ತಾರೆ. ನರಕದಿಂದ ಹೆದರಿದ ಪಿತೃಗಳು ಇವೆಲ್ಲಾ ದಾನವನ್ನೂ ಅಪೇಕ್ಷಿಸುತ್ತಾರೆ.

೨೧–೨೮. ಪಿತೃಗಳು ಯಾವನಾದರೂ ಮಗನು ಗಯೆಗೆ ಹೋಗಿ ನಮ್ಮನ್ನು ನರಕದಿಂದ ಕಾಪಾಡಿಯಾನೆ? ಎಂದುಕೊಳ್ಳುವರು. ಆದ್ದರಿಂದಲೇ

**ಯಜೇತ ವಾಶ್ವಮೇಧೇನ ನೀಲಂ ವಾ ವೃಷಮುತ್ಸೃಜೇತ್ ।**
**ಲೋಹಿತೋ ಯಸ್ತು ವರ್ಣೇನ ಪುಚ್ಛಾಗ್ರೇ ಯಸ್ತು ಪಾಂಡುರಃ ॥ ೨೨ ॥**

**ಶ್ವೇತಃ ಖುರವಿಷಾಣಾಭ್ಯಾಂ ಸ ನೀಲೋ ವೃಷ ಉಚ್ಯತೇ ।**
**ನೀಲಂ ಪಾಂಡುರಲಾಂಗೂಲ ಸ್ತೋಯಮುದ್ಧರತೇ ತು ಯಃ ॥ ೨೩ ॥**

**ಷಷ್ಟಿರ್ವರ್ಷಸಹಸ್ರಾಣಿ ಪಿತರಸ್ತೇನ ತರ್ಪಿತಾಃ ।**
**ಯಶ್ಚ ಶೃಂಗಗತಂ ಪಂಕಂ ಕೂಲಾತ್ತಿಷ್ಠತಿ ಚೋದ್ಧೃತಂ ॥ ೨೪ ॥**

**ಪಿತರಸ್ತಸ್ಯ ಚಾಶ್ನಂತಿ ಸೋಮಲೋಕಂ ಮಹಾದ್ಯುತಿಂ ।**
**ಆಸೀದ್ರಾಜ್ಞೋ ದಿಲೀಪಸ್ಯ ನೃಗಸ್ಯ ನಹುಷಸ್ಯ ಚ ॥ ೨೫ ॥**

**ಅನ್ಯೇಷಾಂ ತು ನರೇಂದ್ರಾಣಾಂ ಪುನರನ್ಯಾನುಗಚ್ಛತಿ ।**
**ಬಹುಭಿರ್ವಸುಧಾ ದತ್ತಾ ರಾಜಭಿಸ್ಸಗರಾದಿಭಿಃ ॥ ೨೬ ॥**

---

ಬಹಳಜನ ಮಕ್ಕಳಾಗಬೇಕು ಎಂದು ಹೇಳಿ, ಅವರನ್ನು ಹೊಂದುವುದು, ಅವರಲ್ಲಿ ಒಬ್ಬನಾದರೂ ಗಯೆಗೆ ಹೋಗಿ ನಮ್ಮನ್ನು ಕಾಪಾಡುವನೆಂದೆಂದುಕೊಳ್ಳುವರು. ಅವರಲ್ಲಿ ಯಾವನಾದರೂ ಒಬ್ಬನು ಅಶ್ವಮೇಧಯಾಗವನ್ನು ಮಾಡಿಯಾನು! ಒಬ್ಬನಾದರೂ ನೀಲವೆಂಬ ವೃಷಭನನ್ನು ಬಿಟ್ಟಾನು! ಎಂದೆಂದುಕೊಳ್ಳುವರು. ಮೈಗಳು ಕೆಂಪಗಿದ್ದು ಬಾಲದ ತುದಿಯಲ್ಲಿ ಬೂದುಬಣ್ಣವಾಗಿಯೂ ಗೊರಸು ಕೊಂಬುಗಳ ಹತ್ತಿರ ಬೆಳ್ಳಗೂ ಇದ್ದರೆ ಆ ಬಸವನಿಗೆ ನೀಲವೆಂದು ಹೆಸರು. ಈ ನೀಲವೆಂಬ ಬಸವನು ಬೂದುಬಣ್ಣದ ಬಾಲದಿಂದ ಎರಚಿದ ನೀರಿನಿಂದ ಪಿತೃಗಳು ಅರವತ್ತುಸಾವಿರ ವರ್ಷಗಳಕಾಲ ನರಕದಲ್ಲಿ ತೃಪ್ತಿ ಹೊಂದಿರುತ್ತಾರೆ. ಈ ವೃಷಭವು ಕೊಬ್ಬಿನಿಂದ ಎತ್ತರ ಪ್ರದೇಶದ ಮಣ್ಣನ್ನು ಮೇಲಕ್ಕೆ ಕೊಂಬಿನಿಂದ ಆಟವಾಡುವಾಗ ತೆಗೆದರೆ ಅದರಿಂದ ಪಿತೃಗಳು ಸೋಮಲೋಕದ ಮಹಾಕಾಂತಿ ಉಳ್ಳ ಅಮೃತವನ್ನು ತಿನ್ನುತ್ತಾರೆ. ಈ ಭೂಮಿಯು ರಾಜರುಗಳಾದ ದಿಲೀಪ, ನೃಗ, ನಹುಷ ಇವರೇ ಮುಂತಾದವರಿಗಿದ್ದಿತು. ಮತ್ತೆ ಮುಂದಿನವರನ್ನೂ ಅನುಸರಿಸಿ ಹೋಗುತ್ತದೆ. ಸಗರನೇ ಮುಂತಾದವರಾದ ಬಹು ಜನರಿಂದ ಈ ಭೂಮಿಯು ದಾನಮಾಡಲ್ಪಟ್ಟಿತು. ಯಾವ ಯಾವ ಕಾಲದಲ್ಲಿ ಯಾರು ಯಾರಿಗೆ ಭೂಮಿಯು ಇದ್ದಿತೋ ಆಗಾಗಿನ ಭೂಮಿಯ ಫಲವು ಅವರವರಿಗೇ ಸೇರಿದುದು.

**ಯಸ್ಯ ಯಸ್ಯ ಯದಾ ಭೂಮಿಃ ತಸ್ಯ ತಸ್ಯ ತದಾ ಫಲಂ ।**
**ಬ್ರಹ್ಮಘ್ನೋ ವಾಥ ಸ್ತ್ರೀಹಸ್ತಾ ಬಾಲಘ್ನಃ ಪತಿತೋಽಥವಾ　　|| ೨೭ ||**

**ಗವಾಂ ಶತಸಹಸ್ರಾಣಿ ಹಂತಾ ತತ್ತಸ್ಯ ದುಷ್ಕೃತಂ ।**
**ಸ್ವದತ್ತಾಂ ಪರದತ್ತಾಂ ವಾ ಯೋ ಹರೇತ್ತು ವಸುಂಧರಾಂ　　|| ೨೮ ||**

**ಸ ಚ ವಿಷ್ಠಾಕೃತಿರ್ಭೂತ್ವಾ ಪಿತೃಭಿಸ್ಸಹ ಪಚ್ಯತೇ ।**
**ಷಷ್ಠಿವರ್ಷಸಹಸ್ರಾಣಿ ಸ್ವರ್ಗೇ ತಿಷ್ಠತಿ ಭೂಮಿದಃ　　|| ೨೯ ||**

**ಆಹರ್ತಾ ಚಾನುಮಂತಾ ಚ ತಾವದ್ವೈ ನರಕಂ ವ್ರಜೇತ್ ।**
**ಭೂಮಿದಾದ್ಭೂಮಿಹರ್ತುಶ್ಚ ನಾಪರಃ ಪುಣ್ಯಪಾಪವಾನ್　　|| ೩೦ ||**

**ಊರ್ಧ್ವಾಧಸ್ತೌ ಚ ತಿಷ್ಠೇತೇ ಯಾವದಾಭೂತಸಂಪ್ಲವಂ　　|| ೩೧ ||**

---

ತಾನು ದಾನ ಮಾಡಿದುದೇ ಆಗಲಿ, ಮತ್ತೊಬ್ಬರು ದಾನ ಮಾಡಿದುದೇ ಆಗಲಿ ಆದ ಭೂಮಿಯನ್ನು ಯಾವನು ಅಪಹರಿಸುತ್ತಾನೆಯೋ ಅವನಿಗೆ ಬ್ರಹ್ಮಹತ್ಯೆ ಮಾಡಿದ ಪಾಪವೂ, ಸ್ತ್ರೀಹತ್ಯೆ ಮಾಡಿದ ಪಾಪವೂ, ಭ್ರೂಣಹತ್ಯೆ, ಬಾಲಹತ್ಯೆ ಇವುಗಳೆನ್ನು ಮಾಡಿದ ಪಾಪವೂ ಬರುವುದಲ್ಲದೆ, ಒಂದು ಲಕ್ಷ ಗೋವುಗಳನ್ನು ಕೊಂದ ಪಾಪವೂ ಬರುತ್ತದೆ.

೨೯. ಅಲ್ಲದೆ ಮಲದಲ್ಲಿ ಬಿದ್ದಿರುವ ಹುಳುವಾಗಿ ಪಿತೃಗಳೊಡನೆ ನರಕದಲ್ಲಿ ಬಿದ್ದಿರುತ್ತಾನೆ. ಭೂದಾನ ಮಾಡಿದವನು ಅರವತ್ತುಸಾವಿರ ವರ್ಷಗಳವರೆಗೂ ಸುಖಿಸುತ್ತಾನೆ.

೩೦–೩೧. ಆ ಭೂಮಿಯನ್ನು ಕದ್ದವನು, ಅದಕ್ಕೆ ಒಪ್ಪಿಗೆ ಕೊಟ್ಟವನು, ಇಬ್ಬರೂ ಕೂಡ ಅರವತ್ತುಸಾವಿರ ವರ್ಷಗಳವರೆಗೂ ನರಕಭಾಗಿಗಳಾಗುತ್ತಾರೆ. ಭೂಮಿದಾನಮಾಡಿದವನಿಗಿಂತಲೂ ಪುಣ್ಯಶಾಲಿಯಿಲ್ಲ. ಭೂಮಿಯನ್ನು ಅಪಹರಿಸಿದವನಿಗಿಂತಲೂ ಪಾಪಿಯಿಲ್ಲ. ಅವರಿಬ್ಬರಲ್ಲಿ ಪುಣ್ಯವಂತನು ಮೇಲೆ ಸ್ವರ್ಗದಲ್ಲೂ, ಪಾಪಿಯು ಕೆಳಗೆ ನರಕದಲ್ಲೂ ಪ್ರಳಯಕಾಲದವರೆಗೂ ಇರುತ್ತಾರೆ.

ಅಗ್ನೇರಪತ್ಯಂ ಪ್ರಥಮಂ ಸುವರ್ಣಂ
ಭೂ ರ್ವೈಷ್ಣವೀ ಸೂರ್ಯಸುತಾಸ್ತು ಗಾವಃ ।
ತೇಷಾಮನಂತಂ ಫಲಮಶ್ನುವೀತ
ಯಃ ಕಾಂಚನಂ ಗಾಂ ಚ ಮಹೀಂ ಚ ದದ್ಯಾತ್ ॥ ೩೨ ॥

ಭೂಮಿಂ ಯಃ ಪ್ರತಿಗೃಹ್ಣಾತಿ ಯಶ್ಚ ಭೂಮಿಂ ಪ್ರಯಚ್ಛತಿ ।
ಉಭೌ ತೌ ಪುಣ್ಯಕರ್ಮಾಣೌ ನಿಯತೌ ಸ್ವರ್ಗಗಾಮಿನೌ ॥ ೩೩ ॥

ಅನ್ಯಾಯೇನ ಹೃತಾ ಭೂಮಿರ್ಯೈರ್ನರೈರಪಹಾರಿತಾ ।
ಹರನ್ತೋ ಹಾರಯನ್ತಶ್ಚ ಹನ್ಯುರಾಸಪ್ತಮಂಕುಲಂ ॥ ೩೪ ॥

ಹರೇದ್ವಾ ಹಾರಯೇದ್ಯಸ್ತು ಮಂದಬುದ್ಧಿಸ್ತಮೋವೃತಃ ।
ಸ ಬದ್ಧೋ ದಾರುಣೈಃ ಪಾಶೈಸ್ತಿರ್ಯಗ್ಯೋನಿಷು ಜಾಯತೇ ॥ ೩೫ ॥

---

೩೨. ಅಗ್ನಿಯ ಮಗುವು ಚಿನ್ನವು. (ಅವನಿಂದ ಹುಟ್ಟಿದುದು) ವಿಷ್ಣುವಿನಿಂದ ಹುಟ್ಟಿದುದು ಭೂಮಿಯು. ಸೂರ್ಯನ ಮಕ್ಕಳು ಗೋವುಗಳು. ಇವನ್ನು ದಾನಮಾಡಿದರೆ ಅನಂತಫಲವುಂಟು. ಆದ್ದರಿಂದಲೇ ಗೋವು, ಹಿರಣ್ಯ, ಭೂಮಿ ಇವುಗಳನ್ನು ಕೊಟ್ಟು ಆ ಫಲವನ್ನು ಅನುಭವಿಸಬೇಕು.

೩೩. ಭೂದಾನ ಮಾಡಿದವನೂ, ಅದನ್ನು ತೆಗೆದುಕೊಂಡವನೂ ಇವರು ಇಬ್ಬರೂ ಪುಣ್ಯವಂತರು. ಇಬ್ಬರೂ ನಿಶ್ಚಯವಾಗಿಯೂ ಸ್ವರ್ಗವನ್ನು ಹೊಂದುತ್ತಾರೆ.

೩೪. ಯಾರು ಅನ್ಯಾಯದಿಂದ ಭೂಮಿಯನ್ನು ಕದಿಯುತ್ತಾರೆಯೋ ಅಥವಾ ಇತರರಿಗೆ ಹೇಳಿ ಕದಿಸುತ್ತಾರೆಯೋ (ಮೋಸಪಡಿಸಿ ವಶಪಡಿಸಿಕೊಳ್ಳುತ್ತಾರೆಯೋ) ಅವರು ತಮ್ಮ ಏಳುತಲೆಗಳವರೆವಿಗೂ ವಂಶವನ್ನು ನಾಶಮಾಡಿಕೊಳ್ಳುತ್ತಾರೆ.

೩೫. ಯಾವನು ಕ್ರೋಧಾದಿಗಳಿಗೆ ಒಳಗಾಗಿ ಆ ರೀತಿಯಾಗಿ ಭೂಮಿಯನ್ನು ಅಪಹರಿಸುತ್ತಾನೆಯೋ ಅವನು ಕ್ರೂರವಾದ ಯಮಪಾಶಗಳಿಂದ ಕಟ್ಟಲ್ಪಟ್ಟವನಾಗಿ ನರಕವನ್ನು ಅನುಭವಿಸಿ ಅನಂತರ ಕೀಳು ಪ್ರಾಣಿಗಳಲ್ಲಿ ಹುಟ್ಟುತ್ತಾನೆ.

ಅಶ್ರುಭಿಃ ಪತಿತೈಸ್ತೇಷಾಂ ದಾತೄಣಾಮನುಕೀರ್ತನಂ ।
ಬ್ರಾಹ್ಮಣಸ್ಯ ಹೃತೇ ಕ್ಷೇತ್ರೇ ಹತಂ ತ್ರಿಪುರುಷಂ ಕುಲಂ ॥ ೩೬ ॥

ವಾಪೀಕೂಪಸಹಸ್ರೇಣ ಅಶ್ವಮೇಧಶತೇನ ಚ ।
ಗವಾಂ ಕೋಟಿಸಹಸ್ರೇಣ ಭೂಮಿಹರ್ತಾ ನ ಶುದ್ಧ್ಯತಿ ॥ ೩೭ ॥

ಕೃತಂ ದತ್ತಂ ತಪೋಽಧೀತಂ ಯತ್ಕಿಂಚಿದ್ಧರ್ಮಸಂಸ್ಥಿತಂ ।
ಅರ್ಧಾಂಗುಲಸ್ಯ ಸೀಮಾಯಾ ಹರಣೇನ ಪ್ರಣಶ್ಯತಿ ॥ ೩೮ ॥

ಗೋತೀರ್ಥಂ ಗ್ರಾಮರಥ್ಯಾಂ ಚ ಶ್ಮಶಾನಂ ಗ್ರಾಮಮೇವ ಚ ।
ಸಂಪೀಡ್ಯ ನರಕಂ ಯಾತಿ ಯಾವದಾಭೂತಸಂಪ್ಲವಂ ॥ ೩೯ ॥

ಪಂಚ ಕನ್ಯಾನೃತೇ ಹಂತಿ ದಶಹಂತಿ ಗವಾನೃತೇ ।
ಶತಮಶ್ವಾನೃತೇ ಹಂತಿ ಸಹಸ್ರಂ ಪುರುಷಾನೃತೇ ॥ ೪೦ ॥

---

೩೬. ಆ ಭೂಮಿಯವರು ದುಃಖಪಟ್ಟ ಕಣ್ಣೀರಿನಿಂದ ಅದನ್ನು ದಾನ ಮಾಡಿದವರಿಗೆ ಕೆಟ್ಟದ್ದಾಗುತ್ತದೆ. ಬ್ರಾಹ್ಮಣನ ಭೂಮಿಯನ್ನು ಅಪಹರಿಸಿದರೆ ಅದು ಮೂರು ತಲೆಗಳನ್ನು ನಾಶಮಾಡುತ್ತದೆ.

೩೭. ಸಾವಿರಾರು ಕೆರೆಗಳನ್ನು ಕಟ್ಟಿಸಿದರೂ, ಕೊಳಗಳನ್ನು ತೋಡಿಸಿದರೂ, ನೂರು ಅಶ್ವಮೇಧಯಾಗಗಳನ್ನು ಮಾಡಿದರೂ ಭೂಮಿಯನ್ನು ಅಪಹರಿಸಿದ ಪಾಪವು ಹೋಗುವುದಿಲ್ಲ.

೩೮. ನಾವು ಮಾಡಿದ ಕೆಲಸಗಳೂ, ದಾನಗಳೂ, ತಪಸ್ಸೂ, ಅಧ್ಯಯನವೂ ಮತ್ತೆ ಏನಾದರೂ ಧರ್ಮಸಂಬಂಧವಾದುದು ಇದ್ದರೆ ಅವೆಲ್ಲವೂ ಅರ್ಧ ಅಂಗುಲ ಭೂಮಿಯನ್ನು ಅಪಹರಿಸಿದರೂ ಕೂಡ ನಾಶವಾಗುತ್ತವೆ.

೩೯. ಗೋವುಗಳು ನೀರು ಕುಡಿಯುವ ಕಟ್ಟೆಗಳನ್ನೂ, ಗ್ರಾಮದ ದಾರಿಗಳನ್ನೂ, ಶ್ಮಶಾನವನ್ನೂ, ಊರುಗಳನ್ನೂ ನಾಶಪಡಿಸಿದರೆ ಅಥವಾ ತೊಂದರೆ ಪಡಿಸಿದರೆ ಪ್ರಾಣಗಳಿರುವವರೆಗೂ ನರಕಯಾತನೆಯನ್ನು ಹೊಂದುತ್ತಾನೆ.

೪೦–೪೧. ಕನ್ಯೆಯ ವಿಷಯದಲ್ಲಿ ಸುಳ್ಳನ್ನು ಹೇಳಿದರೆ ಐದು ಜನರನ್ನೂ, ಗೋವಿನ ವಿಷಯದಲ್ಲಿ ಸುಳ್ಳನ್ನು ಹೇಳಿದರೆ ಹತ್ತು ಜನರನ್ನೂ, ಕುದುರೆಯ ವಿಷಯದಲ್ಲಿ ಸುಳ್ಳನ್ನು ಹೇಳಿದರೆ, ನೂರು ಜನರನ್ನೂ, ಮನುಷ್ಯನ ವಿಷಯದಲ್ಲಿ

ಹಂತಿ ಜಾತಾನಜಾತಾಂಶ್ಚ ಹಿರಣ್ಯಾರ್ಥೇಽನೃತಂ ವದನ್ ।
ಸರ್ವಂ ಭೂಮ್ಯನೃತೇ ಹಂತಿಮಾ ಸ್ಮ ಭೂಮ್ಯಂನೃತಂ ವದ ॥ ೪೧ ॥

ಬ್ರಹ್ಮಸ್ವೇ ನೋ ರತಿಂ ಕುರ್ಯಾತ್ ಪ್ರಾಣೈಃ ಕಂಠಗತೈರಪಿ ।
ಅಗ್ನಿದಗ್ಧಾಃ ಪ್ರರೋಹಂತಿ ಬ್ರಹ್ಮದಗ್ಧೋ ನ ರೋಹತಿ ॥ ೪೨ ॥

ಅಗ್ನಿದಗ್ಧಾಃ ಪ್ರರೋಹಂತಿ ಸೂರ್ಯದಗ್ಧಾಃ ತಥೈವ ಚ ।
ರಾಜದಂಡಹತಾಶ್ಚೈವ ಬ್ರಹ್ಮಪಾಶಹತಾ ಹತಾಃ ॥ ೪೩ ॥

ಬ್ರಹ್ಮಸ್ವೇನ ಚ ಪುಷ್ಟಾನಿ ಅಂಗಾನಿ ಚ ಮುಹುರ್ಮುಹುಃ ।
ಬ್ರಹ್ಮಸ್ವಹರಣಂ ಕುರ್ವನ್ ನರೋ ಯಾತಿ ಹ ರೌರವಂ ॥ ೪೪ ॥

---

ಸುಳ್ಳನ್ನು ಹೇಳಿದರೆ ಸಾವಿರ ಜನರನ್ನೂ ನಾಶಮಾಡಿದ ಪಾಪವು ಬರುತ್ತದೆ. ಭೂಮಿಯ ವಿಷಯದಲ್ಲಿ ಸುಳ್ಳನ್ನು ಹೇಳಿದರೆ ಪ್ರಪಂಚವನ್ನೇ ನಾಶಮಾಡಿದ ಪಾಪವು ಬರುತ್ತದೆ. ಆದುದರಿಂದ ಭೂಮಿಯ ವಿಷಯದಲ್ಲಿ ಸುಳ್ಳನ್ನು ಹೇಳಬೇಡ.

೪೨. ಪ್ರಾಣಗಳು ಹೋಗಲು ಕುತ್ತಿಗೆಗೆ ಚಾಚಿಕೊಂಡಿದ್ದಾಗಲಾದರೂ ಬ್ರಾಹ್ಮಣರ ವಸ್ತುವಿನಲ್ಲಿ ಸುಖಿಸಬಾರದು. ಬೆಂಕಿಯಿಂದ ಸುಟ್ಟುಹೋದ ಪದಾರ್ಥಗಳು ಮತ್ತೆ ಹುಟ್ಟುತ್ತವೆ. ಬ್ರಹ್ಮಶಾಪದಿಂದ ನಾಶವಾದವರು ಮತ್ತೆ ಏಳುವುದೇ ಇಲ್ಲ.

೪೩. ಸೂರ್ಯನಿಂದ ಸುಟ್ಟುವೂ ಕೂಡ ಹುಟ್ಟುತ್ತವೆ. ರಾಜನ ಶಿಕ್ಷೆಯಿಂದ ನಾಶವಾದರೂ ತಲೆಯೆತ್ತುತ್ತಾರೆ. ಬ್ರಹ್ಮಶಾಪಕ್ಕೆ ಒಳಗಾದವರು ನಾಶವಾಗಿಯೇ ಹೋಗುತ್ತಾರೆ.

೪೪. ಬ್ರಾಹ್ಮಣನ ವಸ್ತುವನ್ನು ಕದ್ದು ಅದರಿಂದ ವೃದ್ಧಿಹೊಂದಿದ ಅವಯವಗಳೂ ಆಗಾಗ್ಗೆ ಪೀಡಿಸುತ್ತವೆ. ಬ್ರಾಹ್ಮಣನ ಸ್ವತ್ತನ್ನು ಕದ್ದವನು ರೌರವಾದಿ ನರಕಗಳನ್ನು ಹೊಂದುತ್ತಾನೆ.

**ಸ ವಿಷಂ ವಿಷಮಿತ್ಯಾಹುರ್ಬ್ರಹ್ಮಸ್ವಂ ವಿಷಮುಚ್ಯತೇ ।**
**ವಿಷಮೇಕಾಕಿನಂ ಹಂತಿ ಬ್ರಹ್ಮಸ್ವಂ ಪುತ್ರಪೌತ್ರಕಂ　　　　|| ೪೫ ||**

**ಲೋಹಚೂರ್ಣಂ ಚಾಶ್ಮಚೂರ್ಣಂ ವಿಷಂ ಸಂಜರಯೇನ್ನರಃ ।**
**ಬ್ರಹ್ಮಸ್ವಂ ತ್ರಿಷು ಲೋಕೇಷು ಕಃ ಪುಮಾನ್ ಜರಯಿಷ್ಯತಿ　　　　|| ೪೬ ||**

**ಬ್ರಹ್ಮಸ್ವೇನ ತು ಯತ್ಸೌಖ್ಯಂ ದೇವಸ್ವೇನ ತು ಯಾ ರತಿಃ ।**
**ತದ್ಧನಂ ಕುಲನಾಶಾಯ ಭವತ್ಯಾತ್ಮವಿನಾಶಕಂ　　　　|| ೪೭ ||**

**ಬ್ರಹ್ಮಸ್ವಂ ಬ್ರಹ್ಮಹತ್ಯಾ ಚ ದರಿದ್ರಸ್ಯ ತು ಯದ್ಧನಂ ।**
**ಗುರುಮಿತ್ರಹಿರಣ್ಯಂ ಚ ಸ್ವರ್ಗಸ್ಥಮಪಿ ಪೀಡಯೇತ್　　　　|| ೪೮ ||**

**ಶ್ರೋತಿಯಾಯ ಕುಲೀನಾಯ ದರಿದ್ರಾಯ ಚ ವಾಸವ ।**
**ಸಂತುಷ್ಟಾಯ ವಿನೀತಾಯ ಸರ್ವಸ್ವಸಹಿತಾಯ ಚ　　　　|| ೪೯ ||**

---

೪೫. ವಿಷವನ್ನು ವಿಷವೆಂದು ಹೇಳಲಾಗುವುದಿಲ್ಲ. ಬ್ರಾಹ್ಮಣನ ಸ್ವತ್ತನ್ನು ವಿಷವೆಂದು ಹೇಳುತ್ತಾರೆ. ವಿಷವು ತನ್ನನ್ನು ಕುಡಿದವನೊಬ್ಬನನ್ನು ಕೊಲ್ಲುತ್ತದೆ. ಬ್ರಾಹ್ಮಣನ ವಸ್ತುವನ್ನು ಅಪಹರಿಸಿದರೆ ಅದು ತನ್ನನ್ನೂ, ಮಕ್ಕಳು, ಮೊಮ್ಮಕ್ಕಳನ್ನೂ ಕೊಲ್ಲುತ್ತದೆ.

೪೬. ಕಬ್ಬಿಣದಪುಡಿ, ಕಲ್ಲಿನಪುಡಿ, ವಿಷ ಇವುಗಳನ್ನು ತಿಂದು ಮನುಷ್ಯನು ಅರಗಿಸಿಕೊಳ್ಳಬಹುದು. (ಬದುಕಬಹುದು) ಬ್ರಾಹ್ಮಣನ ವಸ್ತುವನ್ನು ತಿಂದು ಜೀರ್ಣಿಸಿಕೊಳ್ಳುವವನು ಮೂರು ಲೋಕದಲ್ಲಿಯೂ ಯಾವನೂ ಇಲ್ಲ.

೪೭. ಬ್ರಾಹ್ಮಣನ ವಸ್ತುವಿನಿಂದಲೂ, ದೇವರ ಪದಾರ್ಥದಿಂದಲೂ ಹೊಂದತಕ್ಕ ಸುಖವು ತನ್ನನ್ನು ನಾಶಮಾಡುವುದಲ್ಲದೆ ಅವರ ಕುಲವನ್ನೇ ನಾಶ ಮಾಡುತ್ತದೆ.

೪೮. ಬ್ರಾಹ್ಮಣನ ಕದ್ದ ವಸ್ತು, ಬ್ರಹ್ಮಹತ್ಯೆ, ದರಿದ್ರನ ಹಣ, ಗುರು ಮಿತ್ರರ ಹಣ ಇವು ಸ್ವರ್ಗದಲ್ಲಿದ್ದರೂ ಪೀಡಿಸುತ್ತವೆ.

೪೯–೫೦. ಶ್ರೋತ್ರಿಯ, ಕುಲೀನ, ದರಿದ್ರ, ತೃಪ್ತ, ವಿನೀತ, ಮಕ್ಕಳು ಮರಿಗಳುಳ್ಳವನು, ವೇದಾಭ್ಯಾಸ, ತಪಸ್ಸು, ಯಜ್ಞ, ಜ್ಞಾನ, ಇಂದ್ರಿಯನಿಗ್ರಹ

ವೇದಾಭ್ಯಾಸತಪೋಜ್ಞಾನೇಂದ್ರಿಯಸಂಯಮಶಾಲಿನೇ ।
ಈದೃಶಾಯ ಸುರಶ್ರೇಷ್ಠ ಯದ್ದತ್ತಂ ಹಿ ತದಕ್ಷಯಂ ॥ ೫೦ ॥

ಆಮಪಾತ್ರೇ ಯಥಾ ನ್ಯಸ್ತಂ ಕ್ಷೀರಂ ದಧಿ ಘೃತಂ ಮಧು ।
ಭಿನತ್ತ್ಯಪಾತ್ರಂ ದೌರ್ಬಲ್ಯಾನ್ನ ಚ ಪಾತ್ರಂ ವಿನಶ್ಯತಿ ॥ ೫೧ ॥

ಏವಂ ಗಾಂ ಚ ಹಿರಣ್ಯಂ ಚ ವಸ್ತ್ರಮನ್ನಂ ಮಹೀಂ ತಿಲಾನ್ ।
ಅವಿದ್ವಾನ್ಪ್ರತಿಗೃಹ್ಣಾತಿ ಭಸ್ಮೀಭವತಿ ಕಾಷ್ಠವತ್ ॥ ೫೨ ॥

ಯಸ್ತಟಾಗಂ ನವಂ ಕುರ್ಯಾತ್ ಪುರಾಣಂ ವಾಪಿ ಖಾನಯೇತ್ ।
ಸರ್ವಂ ಕುಲಂ ಸಮುದ್ಧೃತ್ಯ ಸ್ವರ್ಗಲೋಕೇ ಮಹೀಯತೇ ॥ ೫೩ ॥

---

ಇವೆಲ್ಲವನ್ನುಳ್ಳವನೂ ಆಗಿರುವಂತಹ ಬ್ರಾಹ್ಮಣನಿಗೆ ದಾನಮಾಡಿದ ಪದಾರ್ಥವು ಅಕ್ಷಯಫಲವನ್ನು ಕೊಡುತ್ತದೆ.

೫೧. ಬೇಯಿಸದ (ಹಸಿಯ) ಮಡಕೆಯಲ್ಲಿ ಇಟ್ಟ ಹಾಲು, ಮೊಸರು, ತುಪ್ಪ, ಜೇನು ಮುಂತಾದುವು ತಮ್ಮ ಶಕ್ತಿಯಿಂದ ದೌರ್ಬಲ್ಯವಾಗಿರುವ ಆ ಪಾತ್ರೆಯನ್ನು ನಾಶಮಾಡುತ್ತವೆ. ಆದರೆ ಸರಿಯಾದ ಪಾತ್ರೆಯನ್ನು ನಾಶ ಮಾಡಲಾರವು. [ಹಾಗೆಯೇ ಅಯೋಗ್ಯನಲ್ಲಿ ದಾನಮಾಡಿದರೆ ಆತನೂ ನಾಶ ವಾಗುವನು. ಪದಾರ್ಥವೂ ಸಾರ್ಥಕವಿಲ್ಲದೆ ಹೋಗುವುದು. ಯೋಗ್ಯನಲ್ಲಿ ದಾನಮಾಡಿದರೆ ಆತನೂ ನಾಶವಾಗುವುದಿಲ್ಲ. ಪದಾರ್ಥವೂ ಸುರಕ್ಷಿತವಾಗಿ ಇರುತ್ತದೆ.]

೫೨. ಇದೇ ರೀತಿಯಾಗಿ ಗೋವು, ಹಿರಣ್ಯ, (ಸುವರ್ಣ) ವಸ್ತ್ರ, ಅನ್ನ, ಭೂಮಿ, ಎಳ್ಳು ಈ ದಾನಗಳನ್ನು ತಿಳುವಳಿಕೆಯಿಲ್ಲದವನು ತೆಗೆದುಕೊಂಡರೆ ಅವನು ಸೌದೆಯಂತೆ ಬೂದಿಯಾಗಿ ಹೋಗುತ್ತಾನೆ.

೫೩. ಯಾವನು ಹಳೆಯ ಕೆರೆಯನ್ನು ಅಥವಾ ಒಡೆದುಹೋದ ಕೆರೆಯನ್ನು ಕಟ್ಟಿಸಿ ಸರಿಮಾಡಿಸುತ್ತಾನೆಯೋ ಅಥವಾ ಹೊಸದಾಗಿ ಕಟ್ಟಿಸುತ್ತಾನೆಯೋ ಅವನು ತನ್ನ ವಂಶದವರನ್ನೆಲ್ಲಾ ಉದ್ಧಾರಮಾಡಿ ಸ್ವರ್ಗದಲ್ಲಿ ಸುಖಿಸುತ್ತಾನೆ.

ವಾಪೀಕೂಪತಟಾಗಾನಿ ಉದ್ಯಾನಪ್ರಭವಾನಿ ಚ ।
ಪುನರ್ನಿರ್ಣೀತಾನಿ ಸಂಸ್ಕಾರಂ ದದತೇ ಮೌಕ್ತಿಕಂ ಫಲಂ    || ೫೪ ||

ನಿದಾಘಕಾಲೇ ಪಾನೀಯಂ ಯಸ್ಯ ತಿಷ್ಠತಿ ವಾಸವ ।
ಸ ದುರ್ಗವಿಷಮಂ ಕೃಚ್ಛ್ರಂ ನ ಕದಾಚಿದವಾಪ್ನುಯಾತ್    || ೫೫ ||

ಏಕಾಹಂ ತು ಸ್ಥಿತಂ ತೋಯಂ ಪೃಥಿವ್ಯಾಂ ದೇವಸತ್ತಮ ।
ಕುಲಾನಿ ತಾರಯೇತ್ತಸ್ಯ ಸಪ್ತಪೂರ್ವಾಪರಾಣ್ಯಪಿ    || ೫೬ ||

ದೀಪಾಲೋಕಪ್ರದಾನೇನ ವಪುಷ್ಮಾನ್ಸ ಭವೇನ್ನರಃ ।
ದಕ್ಷಿಣಾಯಾಃ ಪ್ರದಾನೇನ ಸ್ಮೃತಿಂ ಮೇಧಾಂ ಚ ವಿಂದತಿ    || ೫೭ ||

---

೫೪. ಹಳೆಯ ಭಾವಿ, ಕೊಳ, ಕೆರೆ, ಉದ್ಯಾನ ಮುಂತಾದುವನ್ನು ಮತ್ತೆ ಸರಿಪಡಿಸಿದರೆ ಮುಕ್ತಿಯ ಫಲವನ್ನು ಕೊಡುತ್ತವೆ.

೫೫. ಯಾವನು ತೋಡಿಸಿದ ನೀರಾಸರೆಯಲ್ಲಿ ಬೇಸಗೆಯಲ್ಲಿ ನೀರು ಇರುತ್ತದೆಯೋ ಆತನು ಕಷ್ಟಗಳನ್ನಾಗಲೀ, ನರಕವನ್ನಾಗಲೀ ನೋಡುವುದೇ ಇಲ್ಲ.

೫೬. ಯಾವನು ತೋಡಿಸಿದ ಕೆರೆ, ಕಟ್ಟೆ ಮುಂತಾದುವುಗಳಲ್ಲಿ ಒಂದು ದಿವಸ ನೀರು ನಿಂತರೂ ಅದು, ಅದನ್ನು ಕಟ್ಟಿಸಿದವನು, ಅವನ ಹಿಂದಿನ ಏಳು, ಮುಂದಿನ ಏಳು ಜನರನ್ನು ಉದ್ಧಾರ ಮಾಡುತ್ತದೆ.

೫೭. ದೀಪವನ್ನು ದಾನಮಾಡಿದರೆ ಮನುಷ್ಯನು ಸುಂದರನಾಗುತ್ತಾನೆ. ದಕ್ಷಿಣೆಯನ್ನು ಕೊಟ್ಟರೆ ಜ್ಞಾಪಕಶಕ್ತಿಯನ್ನೂ ಬುದ್ಧಿಯನ್ನೂ ಹೊಂದುತ್ತಾನೆ.

ಕೃತ್ವಾಪಿ ಪಾತಕಂ ಕರ್ಮ ಯೋದದ್ಯಾದನುಸಂಧಿನೇ ;
ಬ್ರಾಹ್ಮಣಾಯ ವಿಶೇಷೇಣ ನ ಸ ಪಾಪೈರ್ಲಿಪ್ಯತೇ || ೫೮ ||

ಭೂಮಿರ್ಗಾವಸ್ತಥಾ ದಾರಾಃ ಪ್ರಸಹ್ಯ ಪ್ರಹೃತಾ ಯದಾ ।
ನ ನಿವೇದಯತೇ ಯಸ್ತು ತಮಾಹುರ್ಬ್ರಹ್ಮಘಾತಕಂ || ೫೯ ||

ತೇ ವೇದಿತೇ ಚ ರಾಜ್ಞಾ ವೈ ಬ್ರಹ್ಮಣೋ ಮೃತ್ಯುಪೀಡಿತೈಃ ।
ನ ವಿಚಾರಯತೇ ಯಸ್ತು ತಮಾಹುರ್ಬ್ರಹ್ಮಘಾತಕಂ || ೬೦ ||

ಉಪಸ್ಥಿತೇ ವಿವಾಹೇ ಚ ಯಜ್ಞೇ ದಾನೇ ಚ ವಾಸವ ।
ಮೋಹಾಚ್ಚರತಿ ವಿಘ್ನಂ ಯಃ ಸ ಮೃತೋ ಜಾಯತೇ ಕೃಮಿಃ || ೬೧ ||

---

೫೮. ಪಾಪವನ್ನು ಮಾಡಿದ್ದರೂ ಕೂಡ ತನ್ನನ್ನೇ ಆಶ್ರಯಿಸಿಕೊಂಡಿರುವವನಿಗೆ ದಾನ ಮಾಡಿದರೆ, ಅದರಲ್ಲಿಯೂ ಬ್ರಾಹ್ಮಣನಾದವನಿಗೆ ಕೊಟ್ಟರೆ ಪಾಪವು ಸ್ವಲ್ಪವೂ ಬರುವುದಿಲ್ಲ. ಪಾಪ ವಿದ್ದರೂ ಅದು ಇವನಿಗೆ ಅಂಟುವುದಿಲ್ಲ.

೫೯ ಭೂಮಿ, ಗೋವು, ಹೆಂಡಿರುಗಳನ್ನು ಬಲಾತ್ಕಾರದಿಂದ ಅಪಹರಿಸಿರೂ ಅಥವಾ ಕದ್ದು ಹೇಳದೇ ಇದ್ದರೆ ಅವನನ್ನು ಬ್ರಹ್ಮಘಾತುಕನೆಂದು ಹೇಳುತ್ತಾರೆ.

೬೦. ಈರೀತಿ ತೊಂದರೆಗೆ ಒಳಗಾದವರು ರಾಜನಿಗೆ ಹೇಳಿದರೂ ಸರಿಯೆ. ರಾಜನಿಗೆ ಕರ್ಣಾಕರ್ಣಿಕೆಯಾಗಿ ತಿಳಿದರೂ ಸರಿಯೆ. ಅವನು ವಿಚಾರಿಸದಿದ್ದರೆ ಅವನೂ ಬ್ರಹ್ಮಘಾತುಕನು.

೬೧. ಮದುವೆಯ ವಿಷಯದಲ್ಲಿ, ಯಜ್ಞದ ವಿಷಯದಲ್ಲಿ, ದಾನದ ವಿಷಯದಲ್ಲಿ ಯಾವನು ಬುದ್ಧಿಯಿಲ್ಲದೆ ವಿಘ್ನವನ್ನು ಮಾಡುತ್ತಾನೆಯೋ ಅವನು ಸತ್ತಮೇಲೆ ಹುಳುವಾಗಿ ಹುಟ್ಟುತ್ತಾನೆ.

**ಧನಂ ಫಲತಿ ದಾನೇನ ಜೀವಿತಂ ಜೀವರಕ್ಷಣಾತ್ ।**
**ರೂಪಮೈಶ್ವರ್ಯ ಮಾರೋಗ್ಯ ಮಹಿಂಸಾ ಫಲಮಶ್ನುತೇ ॥ ೬೨ ॥**

**ಫಲಮೂಲಾಶನಾತ್ಪೂಜಾಂ ಸ್ವರ್ಗಸ್ಸತ್ಯೇನ ಲಭ್ಯತೇ ।**
**ಪ್ರಾಯೋಪವೇಶನಾದ್ರಾಜ್ಯಂ ಸರ್ವತ್ರ ಸುಖಮಶ್ನುತೇ ॥ ೬೩ ॥**

**ಸುಖಾಢ್ಯಃ ಶಕ್ರ ದೀಕ್ಷಾಯಾಂ ಸುಗಾಮೀ ಚ ತೃಣಾಶನಃ ।**
**ರೂಪೀ ತ್ರಿಷವಣಸ್ನಾಯೀ ವಾಯುಂ ಪೀತ್ವಾ ಕ್ರತುಂ ಲಭೇತ್ ॥ ೬೪ ॥**

**ನಿತ್ಯಸ್ನಾಯೀ ಭವೇದ್ದಕ್ಷಃ ಸಂಧ್ಯಾವೇದಜಪಾನ್ವಿತಃ ।**
**ಅಹಿಂಸಯೈವ ವೈ ರಾಜ್ಯಂ ನಾಕಪೃಷ್ಠಮನಾಶಕಂ ॥ ೬೫ ॥**

---

೬೨. ಧನವನ್ನು ದಾನಮಾಡುವುದರಿಂದ ಧನವು ಹೆಚ್ಚುತ್ತದೆ. ಪ್ರಾಣಿಗಳನ್ನು ಕಾಪಾಡುವುದರಿಂದ ತನ್ನ ಪ್ರಾಣ ಉಳಿಯುತ್ತದೆ. ಅಹಿಂಸೆಯಿಂದ ರೂಪವೂ, ಐಶ್ವರ್ಯವೂ, ಆರೋಗ್ಯವೂ ಉಂಟಾಗುತ್ತವೆ.

೬೩. ಫಲ, ಗೆಡ್ಡೆ, ಗೆಣಸುಗಳನ್ನು ತಿನ್ನುವುದರಿಂದ ಪೂಜೆಯನ್ನು ಹೊಂದುತ್ತಾನೆ. ಸತ್ಯದಿಂದ ಸ್ವರ್ಗವು ಸಿಕ್ಕುತ್ತದೆ. ಪ್ರಾಯೋಪವೇಶನ ಪುಣ್ಯದಿಂದ ರಾಜ್ಯವು ಸಿಕ್ಕುತ್ತದೆ. ಅಲ್ಲದೆ ಎಲ್ಲಾ ಕಡೆಯಿಂದಲೂ ಸುಖವನ್ನು ಹೊಂದುತ್ತಾನೆ.

೬೪. ಎಲೈ ಶಕ್ರನೇ! ದೀಕ್ಷೆಯನ್ನು ಹೊಂದಿದವನು ಸುಖಿಯಾಗಿಯೂ, ತೃಣವನ್ನು ಭಕ್ಷಿಸುವವನು (ಹುಲ್ಲನ್ನು ದನಗಳಿಗೆ ಹಾಕುವವನು) ಚೆನ್ನಾಗಿ ನಡೆಯುವವನಾಗಿಯೂ, ಮೂರು ಹೊತ್ತು ಸ್ನಾನಮಾಡುವವನು ಸುಂದರನಾಗಿಯೂ, ವಾಯುವನ್ನೇ ಆಹಾರವಾಗಿ ಉಳ್ಳವನು ಯಜ್ಞದ ಫಲವನ್ನೂ ಹೊಂದುತ್ತಾರೆ.

೬೫. ನಿತ್ಯವೂ ಸ್ನಾನಮಾಡಿಕೊಂಡು ಸಂಧ್ಯಾವಂದನೆ, ವೇದಾಧ್ಯಯನ, ಜಪಮಾಡುವವನು ದಕ್ಷನಾಗಿಯೂ ಆಗುವನು. ಅಹಿಂಸೆಯಿಂದ ಇರುವವನು ರಾಜ್ಯವನ್ನೂ, ಉಪವಾಸ ಮಾಡಿದವನು ಸ್ವರ್ಗವನ್ನೂ ಹೊಂದುತ್ತಾರೆ.

ಅಗ್ನಿಪ್ರವೇಶೀ ನಿಯತಂ ಬ್ರಹ್ಮಲೋಕೇ ಮಹೀಯತೇ ।
ರಸಾನಾಂ ಪ್ರತಿಸಂಹಾರೇ ಪಶೂನ್ಪುತ್ರಾಂಶ್ಚ ವಿಂದತಿ ॥ ೬೬ ॥

ನಾಕೇ ಚಿರಂ ಸ ವಸತಿ ಉಪವಾಸೀ ಚ ಯೋ ಭವೇತ್ ।
ಸತತಂ ಭೂಮಿಶಾಯೀ ಯಃ ಸ ಲಭೇದೀಪ್ಸಿತಾಂ ಗತಿಂ ॥ ೬೭ ॥

ವೀರಾಸನಂ ವೀರಶಯಂ ವೀರಸ್ಥಾನಮುಪಾಸತಃ ।
ಅಕ್ಷಯಾಸ್ತಸ್ಯ ಲೋಕಾಸ್ಸ್ಯುಃ ಸರ್ವಕಾಮಾಗಮಾಸ್ತಥಾ ॥ ೬೮ ॥

ಉಪವಾಸಂ ಚ ದೀಕ್ಷಾಂ ಚ ಅಭಿಷೇಕಂ ಚ ವಾಸವ ।
ಕೃತ್ವಾ ದ್ವಾದಶವರ್ಷಾಣಿ ವೀರಸ್ಥಾನಾದ್ವಿಶಿಷ್ಯತೇ ॥ ೬೯ ॥

---

೬೬. ಅಗ್ನಿಪ್ರವೇಶಮಾಡಿದವನು ಬ್ರಹ್ಮಲೋಕವನ್ನು ಹೊಂದುತ್ತಾನೆ. ರಸಗಳಿಗೆ ಪ್ರತಿಕ್ರಿಯೆ ಮಾಡುವವನು ಪಶುಗಳನ್ನೂ, ಪುತ್ರರನ್ನೂ ಹೊಂದುತ್ತಾನೆ.

೬೭. ಉಪವಾಸಮಾಡಿ ಪುಣ್ಯಕಟ್ಟಿಕೊಳ್ಳುವವನು ಸ್ವರ್ಗದಲ್ಲಿ ಸುಖವನ್ನು ಹೊಂದುವನು. ಭೂಮಿಯ ಮೇಲೆಯೇ ನಿಯಮದಿಂದ ಯಾವಾಗಲೂ ಮಲಗುವವನು ಅವನಿಗೆ ಬೇಕಾದ ಉತ್ತಮಗತಿಯನ್ನು ಹೊಂದುವನು.

೬೮. ವೀರಾಸನವನ್ನು ಹಾಕಿಕೊಂಡು ಇರುವವನೂ, ವೀರರೀತಿಯಲ್ಲಿ ಮಲಗಿಕೊಂಡು ಇರುವವನೂ, ವೀರರು ಮಾಡುವ ಕೆಲಸವನ್ನು ಮಾಡುವವನೂ, ಇವರಿಗೆ ಅಕ್ಷಯವಾದ ಲೋಕಗಳು ಸಿಕ್ಕುತ್ತವೆ. ಎಲ್ಲಾ ಇಷ್ಟಾರ್ಥಗಳೂ ಕೈಗೂಡುತ್ತವೆ.

೬೯. ಉಪವಾಸ, ದೀಕ್ಷೆ, ಅಭಿಷೇಕ ಇವನ್ನು ಹನ್ನೆರಡು ವರ್ಷಗಳವರೆಗೂ ಮಾಡಿದರೆ ವೀರನು ಹೊಂದುವುದಕ್ಕಿಂತಲೂ ಉತ್ತಮವಾದ ಗತಿಯನ್ನು ಹೊಂದುತ್ತಾನೆ.

**ಪಾವನಂ ಚರತೇ ಧರ್ಮಂ ಸ್ವರ್ಗಲೋಕೇ ಮಹೀಯತೇ ।**
**ಬೃಹಸ್ಪತಿಮತಂ ಪುಣ್ಯಂ ಯೇ ಪಠಂತಿ ದ್ವಿಜೋತ್ತಮಾಃ ।**
**ತೇಷಾಂ ಚತ್ವಾರಿ ವರ್ಧಂತೇ ಆಯುರ್ವಿದ್ಯಾ ಯಶೋ ಬಲಂ　　|| ೭೦ ||**

**|| ನಾರದ ಉವಾಚ ||**

**ಇತೀಂದ್ರಾಯ ಬೃಹಸ್ಪತಿ ಪ್ರಣೀತಂ ಧರ್ಮಶಾಸ್ತ್ರಕಂ ।**
**ಮಹ್ಯಂ ಭಕ್ತಾಯ ಸಂಪ್ರೋಕ್ತಂ ಮಹೀಶೇನಾಖಿಲಂ ನೃಪ　　|| ೭೧ ||**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಪತಿ**
**ನಾರದ ಸಂವಾದೇ ಧರ್ಮಾಖ್ಯಾನ ಕಥನಂ ನಾಮ**
**ತ್ರಯಸ್ತ್ರಿಂಶೋಽಧ್ಯಾಯಸ್ಸಮಾಪ್ತಃ**

---

೭೦. ಯಾವನು ಪುಣ್ಯದ ಕೆಲಸಗಳನ್ನು ಮಾಡುತ್ತಾನೆಯೋ ಅವನು ಸ್ವರ್ಗದಲ್ಲಿ ಸುಖಿಸುತ್ತಾನೆ. ಈ ರೀತಿಯಾದ ಬೃಹಸ್ಪತಿಯ ಮತವನ್ನು ಓದುವವನಿಗೆ ಆಯುಸ್ಸು, ವಿದ್ಯೆ, ಯಶಸ್ಸು, ಬಲ ಈ ನಾಲ್ಕೂ ವೃದ್ಧಿ ಹೊಂದುತ್ತವೆ.

೭೧. ನಾರದನು ಹೇಳಿದನು–ಬೃಹಸ್ಪತಿಯು ಇಂದ್ರನಿಗೆ ಹೇಳಿದ ಧರ್ಮ ಶಾಸ್ತ್ರವನ್ನು ಭಕ್ತನಾದ ನನಗೆ ಮಹೇಶನು ಹೇಳಿದನು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಪತಿ
ನಾರದರ ಸಂವಾದದಲ್ಲಿ ಧರ್ಮಾಖ್ಯಾನ ಕಥನ ಎಂಬ
ಮೂವತ್ತಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-x-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಚತುಸ್ತ್ರಿಂಶೋಽಧ್ಯಾಯಃ ॥



॥ ನಾರದ ಉವಾಚ ॥

ಶನಿಪೀಡಾ ಕಥಂ ಯಾತಿ ತನ್ಮೇ ವದ ಸುರೋತ್ತಮ ।
ತ್ವನ್ಮುಖಾಚ್ಛ್ರೂಯತೇ ಯದ್ವೈ ತೇನ ಜಂತುಃ ಪ್ರಮುಚ್ಯತೇ ॥ ೧ ॥

॥ ಮಹಾದೇವ ಉವಾಚ ॥

ದೇವರ್ಷೇ ಶೃಣು ವೃತ್ತಾನ್ತಂ ಯೇನ ಮುಚ್ಯೇತ ಬಂಧನಾತ್ ।
ಗ್ರಹಾಣಾಂ ಗ್ರಹರಾಜೋಽಯಂ ಶೌರಿಸ್ಸರ್ವಮಹೇಶ್ವರಃ ॥ ೨ ॥

---

## ಮೂವತ್ತನಾಲ್ಕನೆಯ ಅಧ್ಯಾಯವು



೧. ನಾರದನು ಹೇಳಿದನು-ಎಲೈ ದೇವನೆ! ಶನಿಯ ಪೀಡೆಯು ಹೇಗೆ ನಿವಾರಣೆಯಾಗುತ್ತದೆ? ಅದನ್ನು ನನಗೆ ಹೇಳು. ನಿನ್ನ ಬಾಯಿಂದ ಕೇಳಿದರೆ ಅದರಿಂದ ಪ್ರಾಣಿಗೆ ಮೋಕ್ಷ ಬರುತ್ತದೆ.

೨. ಮಹಾದೇವನು ಹೇಳಿದನು- ಎಲೈ ದೇವರ್ಷಿಯಾದ ನಾರದನೇ! ಬಂಧನದಿಂದ ಬಿಡಲ್ಪಡುವ ಈ ವಿಷಯವನ್ನು ಕೇಳು. ಈ ಶನಿಯು ಗ್ರಹಗಳಿಗೆಲ್ಲಾ ರಾಜನು. ಈತನೇ ಎಲ್ಲರಿಗೂ ಮಹೇಶ್ವರನು.

ಆಯಂ ತು ದೇವವಿಖ್ಯಾತಃ ಕಾಲರೂಪೀ ಮಹಾಗ್ರಹಃ ।
ಜಟಿಲೋ ಬಹುರೋಮಾ ಚ ದಾನವಾನಾಂ ಭಯಂಕರಃ ॥ ೩ ॥

ತಸ್ಯಾಖ್ಯಾನಂ ಚ ಲೋಕೇಸ್ಮಿನ್ ಪ್ರಥಿತಂ ನಾಸ್ತಿ ವೈ ಪ್ರಭೋ ।
ಮಯಾ ಗುಪ್ತಂ ವಿಶೇಷೇಣ ನೋಕ್ತಂ ಹಿ ಕಸ್ಯ ಚಿತ್ಕದಾ ॥ ೪ ॥

ರಘುವಂಶೇತಿ ವಿಖ್ಯಾತೋ ರಾಜಾ ದಶರಥಃ ಪುರಾ ।
ಚಕ್ರವರ್ತೀ ಮಹಾವೀರಃ ಸಪ್ತದ್ವೀಪಾಧಿಪೋಽಭವತ್ ॥ ೫ ॥

ಕೃತ್ತಿಕಾಂತೇ ಶನಿಂ ಜ್ಞಾತ್ವ ದೈವಜ್ಞೈರ್ಜ್ಞಾಪಿತೋ ಹಿ ಸಃ ।
ರೋಹಿಣೀಂ ಭೇದಯಿತ್ವಾ ಚ ಶನಿರ್ಯಾಸ್ಯತಿ ಸಾಂಪ್ರತಂ ॥ ೬ ॥

ಶಾಕಟಂ ಭೇದಮುತ್ಯುಗ್ರಂ ಸುರಾಸುರಭಯಂಕರಂ ।
ದ್ವಾದಶಾಬ್ದಂ ತು ದುರ್ಭಿಕ್ಷಂ ಭವಿಷ್ಯತಿ ಸುದಾರುಣಂ ॥ ೭ ॥

---

೩. ಈ ಶನಿಯು ದೇವತೆಗಳಲ್ಲಿ ಪ್ರಸಿದ್ಧನು. ಯಮರೂಪಿಯಾದ ಮಹಾ ಗ್ರಹವು. ಜಡೆಯುಳ್ಳವನು. ಬಹುವಾದ ರೋಮಗಳುಳ್ಳವನು. ದಾನವರಿಗೆ ಭಯವನ್ನು ಉಂಟುಮಾಡುತ್ತಾನೆ.

೪. ಅಂಥಹ ಶನಿಯ ಚರಿತ್ರೆಯು ಲೋಕದಲ್ಲಿ ಪ್ರಕಟವಾಗಿಲ್ಲ. ನಾನು ಕಷ್ಟಪಟ್ಟು ಮುಚ್ಚಿರುವೆನು. ಒಬ್ಬರಿಗೂ ಹೇಳಿರಲಿಲ್ಲ.

೫. ರಘುವಂಶದಲ್ಲಿ ಪ್ರಸಿದ್ಧನಾದ ರಾಜನಾದ ದಶರಥನೆಂಬವನೊಬ್ಬನು ಇದ್ದನು. ಅವನು ಸಪ್ತ ದ್ವೀಪಗಳಿಗೆ ಅಧಿಪತಿಯು. ಮಹಾ ವೀರನು. ಚಕ್ರವರ್ತಿಯೂ ಆಗಿದ್ದನು.

೬–೭. ಶನಿಯು ಕೃತ್ತಿಕಾ ನಕ್ಷತ್ರದ ಕೊನೆಯಲ್ಲಿರುವುದನ್ನು ಜ್ಯೋತಿಷ್ಕರು ನೋಡಿ ಅಲ್ಲಿಂದ ಮುಂದೆ ರೋಹಿಣಿಯನ್ನು ಭೇದಿಸುವುದನ್ನು ಗಮನಿಸಿದರು. ಹೀಗೆ ಮುಂದಕ್ಕೆ ಹೋಗುವುದಕ್ಕೆ ಶಾಕಟಭೇದವೆಂದು ಹೆಸರು. ಇದು ಬಹು ಕ್ರೂರವಾದುದು. ದೇವ ದಾನವರಿಗೆ ಭಯಂಕರವಾದುದು. ಇದರಿಂದ ಹನ್ನೆರಡು ವರ್ಷಗಳವರೆಗೂ ಉಗ್ರವಾದ ಕ್ಷಾಮವು ಬರುತ್ತದೆ ಎಂಬುದಾಗಿ ದಶರಥನಿಗೆ ಹೇಳಿದರು.

ತಚ್ಛ್ರುತ್ವಾ ಸ ತತೋ ವಾಕ್ಯಂ ಮಂತ್ರಿಭಿಸ್ಸಹ ಪಾರ್ಥಿವಃ ।
ಮಂತ್ರಯಾಮಾಸ ಕಿಮಿದಂ ಭಯಂಕರಮುಪಸ್ಥಿತಂ ॥ ೮ ॥

ಆಕುಲಂ ಚ ಜಗದ್ದೃಷ್ಟ್ವಾ ಪೌರಜಾನಪದಾದಿಕಂ ।
ಬ್ರುವಂತಿ ಸರ್ವತೋ ಲೋಕಾಃ ಕ್ಷಯ ಏಷ ಸಮಾಗತಃ ॥ ೯ ॥

ದೇಶಾಸ್ಸನಗರಗ್ರಾಮಾ ಭಯಭೀತಾಸ್ಸಮನ್ತತಃ ।
ಪಪ್ರಚ್ಛಪ್ರಯತೋ ರಾಜಾ ವಸಿಷ್ಠಪ್ರಮುಖಾನ್ದ್ವಿಜಾನ್ ॥ ೧೦ ॥

॥ ದಶರಥ ಉವಾಚ ॥

ಸಂವಿಧಾನಂ ಕ್ರಮತ್ರಾಸ್ತೇ ಬ್ರೂತ ಮಾಂ ಹಿ ದ್ವಿಜೋತ್ತಮಾಃ ॥ ೧೧ ॥

॥ ವಸಿಷ್ಠ ಉವಾಚ ॥

ಪ್ರಾಜಾಪತ್ಯ ಮೃಕ್ಷಮಿದಂ ಹ್ಯಸ್ಮಿನ್ ಭಿನ್ನೇ ಕುತಃ ಪ್ರಜಾಃ ।
ಅಯಂ ಯೋಗೋ ಹ್ಯಸಾಧ್ಯಸ್ತು ಬ್ರಹ್ಮಶಕ್ರಾದಿಭಿಸ್ತಥಾ ॥ ೧೨ ॥

---

೮ ಜ್ಯೋತಿಷ್ಕರು ಹೇಳಿದ ಮಾತನ್ನು ಕೇಳಿ ದಶರಥನು ಮಂತ್ರಿಗಳನ್ನು ಕರೆದು ಈ ಭಯಂಕರ ಸ್ಥಿತಿಯನ್ನು ಕುರಿತು ಆಲೋಚಿಸಿದನು.

೯. ಇದರಿಂದ ಪಟ್ಟಣಿಗರು, ದೇಶದವರು ಎಲ್ಲರೂ ದುಃಖಪಡುತ್ತ ಲೋಕಕ್ಕೆ ಲೋಕವೇ, ' ನಾಶವೇ ಪ್ರಪಂಚಕ್ಕೆ ಬಂದಿತು ' ಎಂದೆನ್ನುತ್ತಿದ್ದರು.

೧೦. ಈ ರೀತಿಯಾಗಿ ದೇಶದವರೆಲ್ಲರೂ ಹೆದರಿರುವುದನ್ನು ನೋಡಿ ದಶರಥನು ವಸಿಷ್ಠಾದಿ ಬ್ರಾಹ್ಮಣರನ್ನು ಕುರಿತು ನಮ್ರತೆಯಿಂದ ಇಂತೆಂದನು.

೧೧. ದಶರಥನು ಹೇಳಿದನು– ಎಲೈ ಬ್ರಾಹ್ಮಣರಿರಾ ! ಈ ಕಷ್ಟಕ್ಕೆ ಉಪಾಯವೇನಿರುವುದು ? ಹೇಳಿರಿ.

೧೨. ವಸಿಷ್ಠನು ಹೇಳಿದನು– ಈ ನಕ್ಷತ್ರಕ್ಕೆ ಪ್ರಜಾಪತಿಯು ದೇವತೆಯು. ಈ ರೋಹಿಣಿಯನ್ನು ಭೇದಿಸಿದರೆ ಪ್ರಜೆಗಳು ಬದುಕುವುದೆಲ್ಲಿ ಬಂತು ? ಬ್ರಹ್ಮ, ಇಂದ್ರ ಮುಂತಾದವರೂ ಕೂಡ ಈ ಯೋಗವನ್ನು ತಪ್ಪಿಸಲಾರರು.

|| ಮಹಾದೇವ ಉವಾಚ ||

ಇತಿ ಸಂಚಿಂತ್ಯ ಮನಸಾ ಸಾಹಸಂ ಪರಮಂ ಮಹತ್ |
ಸಮಾದಾಯ ಧನುರ್ದಿವ್ಯಂ ದಿವ್ಯಾಯುಧಸಮನ್ವಿತಂ || ೧೩ ||

ರಥಮಾರುಹ್ಯ ವೇಗೇನ ಗತೋ ನಕ್ಷತ್ರಮಂಡಲಂ |
ಸಪಾದಯೋಜನಂ ಲಕ್ಷಂ ಸೂರ್ಯಸ್ಯೋಪರಿ ಸಂಸ್ಥಿತಂ || ೧೪ ||

ರೋಹಿಣೀಪೃಷ್ಠಮಾಸ್ಥಾಯ ರಾಜಾ ದಶರಥಃ ಪುರಾ |
ರಥೇ ತು ಕಾಂಚನೇ ದಿವ್ಯೇ ಮಣಿರತ್ನವಿಭೂಷಿತೇ || ೧೫ ||

ಹಂಸವರ್ಣಹಯೈರ್ಯುಕ್ತೇ ಮಹಾಕೇತುಸಮುಚ್ಛ್ರಯೇ |
ದೀಪ್ಯಮಾನೋ ಮಹಾರತ್ನೈಃ ಕಿರೀಟಮುಕುಟೋಜ್ಜ್ವಲೈಃ || ೧೬ ||

ಬಭ್ರಾಜ ಸ ತದಾಕಾಶೇ ದ್ವಿತೀಯ ಇವ ಭಾಸ್ಕರಃ |
ಆಕರ್ಣಪೂರ್ಣಚಾಪೇ ತು ಸಂಹಾರಾಸ್ತ್ರಂ ನ್ಯಯೋಜಯತ್ || ೧೭ ||

ಸಂಹಾರಾಸ್ತ್ರಂ ಶನಿರ್ದೃಷ್ಟ್ವಾ ಸುರಾಸುರಭಯಂಕರಂ |
ಹಸಿತ್ವಾ ತದ್ಭಯಾತ್ಸೌರಿರಿದಂವಚನಮಬ್ರವೀತ್ || ೧೮ ||

---

೧೩–೧೪. ಮಹಾದೇವನು ಹೇಳಿದನು– ಇದನ್ನು ದಶರಥನು ಕೇಳಿ ಮನಸ್ಸಿನಲ್ಲಿ ಆಲೋಚಿಸಿ ಮಹತ್ತಾದ ಸಾಹಸಕಾರ್ಯವನ್ನು ಮಾಡಬೇಕೆಂದು ನಿಶ್ಚಯಿಸಿ, ದಿವ್ಯವಾದ ಧನುಸ್ಸನ್ನೂ, ಆಯುಧವನ್ನೂ, ರಥವನ್ನೂ ಹೊಂದಿ, ವೇಗದಿಂದ ಸೂರ್ಯಮಂಡಲದಮೇಲೆ ಒಂದೂಕಾಲು ಲಕ್ಷ ಯೋಜನದ ಮೇಲೆ ಇರುವ ನಕ್ಷತ್ರ ಮಂಡಲಕ್ಕೆ ಹೋದನು.

೧೫–೧೮. ಹೀಗೆ ಹೋಗಿ ಆ ರೋಹಿಣಿ ನಕ್ಷತ್ರದ ಹಿಂದೆ ರಥದಲ್ಲಿ ನಿಂತನು. ಆ ಚಿನ್ನದ ರಥದಲ್ಲಿ ಮಣಿಗಳನ್ನು ಕೆತ್ತಿದ್ದಿತು. ಬೆಳ್ಳಗಿರುವ ಕುದುರೆಗಳನ್ನು ಕಟ್ಟಿದ್ದಿತು. ದೊಡ್ಡದಾದ ಪತಾಕೆಯನ್ನು ಕಟ್ಟಿದ್ದಿತು. ರತ್ನದಿಂದ ಪ್ರಕಾಶಿಸುತ್ತಿದ್ದ ಕಿರೀಟವನ್ನು ಹಾಕಿಕೊಂಡಿದ್ದನು. ಹೀಗಿರುವ ದಶರಥನನ್ನು ನೋಡಿದರೆ ಆಕಾಶದಲ್ಲಿ ಮತ್ತೊಬ್ಬ ಸೂರ್ಯನಿರುವನೋ! ಎಂಬಂತಿದ್ದನು. ಸಂಹಾರವೆಂಬ ಅಸ್ತ್ರವನ್ನು ಕಿವಿಯವರೆಗೂ ಎಳೆದು ಶನಿಯಮೇಲೆ ಬಿಟ್ಟನು. ದೇವದಾನವರಿಗೆ ಭಯಂಕರವಾದ ಈ ಸಂಹಾರಾಸ್ತ್ರವನ್ನು ಶನಿಯು ನೋಡಿ ನಗುತ್ತಾ ಭಯಪಟ್ಟು ದಶರಥನನ್ನು ಕುರಿತು ಇಂತೆಂದನು.

॥ ಶನಿರುವಾಚ ॥

ಪೌರುಷಂ ತವ ರಾಜೇಂದ್ರ ಪರಂ ರಿಪುಭಯಂಕರಂ ।
ದೇವಾಸುರಮನುಷ್ಯಾಶ್ಚ ಸಿದ್ಧವಿದ್ಯಾಧರೋರಗಾಃ ॥ ೧೯ ॥

ಮಯಾ ವಿಲೋಕಿತಾ ರಾಜನ್ ಭಸ್ಮಸಾಚ್ಚ ಭವಂತಿ ತೇ ।
ತುಷ್ಟೋಽಹಂ ತವ ರಾಜೇಂದ್ರ ತೇಜಸಾ ಪೌರುಷೇಣ ಚ ।
ವರಂ ಬ್ರೂಹಿ ಪ್ರದಾಸ್ಯಾಮಿ ಮನಸಾ ಯತ್ಕಿಮಿಚ್ಛಸಿ ॥ ೨೦ ॥

॥ ದಶರಥ ಉವಾಚ ॥

ರೋಹಿಣೀಂ ಭೇದಯಿೀತ್ವಾ ತು ಗನ್ತವ್ಯಂ ನ ಕದಾಚನ ।
ಸರಿತಸ್ಸಾಗರಾ ಯಾವದ್ಯಾವಚ್ಚಂದ್ರಾರ್ಕಮೇದಿನೀ ॥
ಯಾಚಿತಂ ತು ಮಯಾ ಸೌರೇ ನಾನ್ಯಮಿಚ್ಛಾಮಿ ತೇ ವರಂ ॥ ೨೧ ॥

---

೧೯–೨೦. ಶನಿಯು ಹೇಳಿದನು–ಎಲೈ ರಾಜೇಂದ್ರನೇ! ನಿನ್ನ ಪೌರುಷವು ದೇವದಾನವರಿಗೂ ಭಯಂಕರವಾದುದು. ದೇವತೆಗಳು, ದಾನವರು, ಮನುಷ್ಯರು, ಸಿದ್ಧರು, ವಿದ್ಯಾಧರರು, ಉರಗರು ಇವರೆಲ್ಲರೂ ನನ್ನಿಂದ ನೋಡಲ್ಪಟ್ಟವರಾದರೆ ಅವರು ಸುಟ್ಟುಹೋಗುವರು. ನಿನ್ನ ಪರಾಕ್ರಮಕ್ಕೂ, ಬಲಕ್ಕೂ ನಾನು ಸಂತೋಷಗೊಂಡಿದ್ದೇನೆ. ನಿನ್ನ ಮನಸ್ಸಿಗೆ ಬೇಕಾದ ವರವನ್ನು ಕೇಳಿಕೊ? ಅದೆಲ್ಲವನ್ನೂ ಕೊಡುತ್ತೇನೆ.

೨೧. ದಶರಥನು ಹೇಳಿದನು– ಎಲೈ ಶನಿಯೇ! ಸಮುದ್ರಗಳು, ನದಿಗಳು, ಸೂರ್ಯಚಂದ್ರರು, ಭೂಮಿಗಳಿರುವವರೆಗೂ ನೀನು ರೋಹಿಣೀ ನಕ್ಷತ್ರವನ್ನು ಭೇದಿಸಿಕೊಂಡು ಹೋಗಕೂಡದು. ಇದೇ ನಾನು ನಿನ್ನನ್ನು ಕೇಳಿಕೊಳ್ಳುವ ವರವು. ಬೇರೆ ವರವು ನನಗೆ ಬೇಕಿಲ್ಲವು.

|| ಮಹಾದೇವ ಉವಾಚ ||

ಏವಮಸ್ತ್ವಿತಿ ಶನಿಃ ಪ್ರಾಹ ವರಂ ದತ್ವಾ ತು ಶಾಶ್ವತಂ |
ಪುನರೇವಾಬ್ರವೀತ್ತುಷ್ಟೋ ವರಂ ವರಯ ಸುವ್ರತ ||
ಪ್ರಾರ್ಥಯಾಮಾಸ ಹೃಷ್ಟಾತ್ಮಾ ವರಮನ್ಯಂ ಶನೇಸ್ತದಾ　　|| ೨೨ ||

|| ದಶರಥ ಉವಾಚ ||

ನ ಭೇತ್ತವ್ಯಂ ಹಿ ಶಕಟಂ ತ್ವಯಾ ಭಾಸ್ಕರನಂದನ |
ದ್ವಾದಶಾಬ್ದಂ ತು ದುರ್ಭಿಕ್ಷಂ ನ ಕರ್ತವ್ಯಂ ಕದಾಚನ　　|| ೨೩ ||

|| ಶನಿರುವಾಚ ||

ದ್ವಾದಶಾಬ್ದಂ ತು ದುರ್ಭಿಕ್ಷಂ ನ ಕದಾಚಿದ್ಭವಿಷ್ಯತಿ |
ಕೀರ್ತಿರೇಷಾ ತ್ವದೀಯಾ ಚ ತ್ರೈಲೋಕ್ಯೇ ವಿಚರಿಷ್ಯತಿ　　|| ೨೪ ||

|| ಮಹಾದೇವ ಉವಾಚ ||

ವರ ದ್ವಯಂ ತು ಸಂಪ್ರಾಪ್ಯ ಹೃಷ್ಟರೋಮಾ ಚ ಪಾರ್ಥಿವಃ |
ರಥೋಪರಿಧನುರ್ಮುಕ್ತ್ವಾ ಭೂತ್ವಾ ಚೈವ ಕೃತಾಂಜಲಿಃ　　|| ೨೫ ||

---

೨೨. ಮಹಾದೇವನು ಹೇಳಿದನು–ಶನಿಯು ಹಾಗೇ ಆಗಲೆಂದು ಹೇಳಿ ಶಾಶ್ವತವಾಗಿ ಆ ವರವನ್ನು ಕೊಟ್ಟು, ಸಂತೋಷದಿಂದ, ಮತ್ತೆ ಯಾವುದಾದರೂ ವರವನ್ನು ಕೇಳು ಎಂದನು. ಆಗ ಆ ರಾಜನು ಸಂತೋಷಗೊಂಡು, ಅವನನ್ನು ಮತ್ತೊಂದು ವರವನ್ನು ಯಾಚಿಸಿದನು.

೨೩. ದಶರಥನು ಹೇಳಿದನು–ಎಲೈ ಶನಿಯೇ! ನೀನು ಆ ಶಕಟರೂಪವಾದ ರೋಹಿಣಿಯನ್ನು ಭೇದಿಸಲೂ ಕೂಡದು. ಹನ್ನೆರಡುವರ್ಷಕಾಲ ಕ್ಷಾಮಬರುವಂತೆ ಮಾಡಲೂಕೂಡದು.

೨೪. ಶನಿಯು ಹೇಳಿದನು– ಎಲೈ ದಶರಥನೆ! ಹನ್ನೆರಡು ವರ್ಷಕಾಲ ದುರ್ಭಿಕ್ಷವು ಬರುವುದೇ ಇಲ್ಲ. ಇದರ ಸಂಬಂಧವಾದ ನಿನ್ನ ಕೀರ್ತಿಯು ಮೂರು ಲೋಕಗಳಲ್ಲಿಯೂ ಪ್ರಖ್ಯಾತವಾಗುತ್ತದೆ.

೨೫-೨೬. ಮಹಾದೇವನು ಹೇಳಿದನು–ಹೀಗೆ ಎರಡು ವರಗಳನ್ನು ಹೊಂದಿ, ಆ ರಾಜನು ರೋಮಾಂಚನವನ್ನು ಹೊಂದಿ, ರಥದಲ್ಲಿ ಧನುಸ್ಸನ್ನು ಇಟ್ಟು

ಧ್ಯಾತ್ವಾ ಸರಸ್ವತೀಂ ದೇವೀಂ ಗಣನಾಥಂ ವಿನಾಯಕಂ ।
ರಾಜಾ ದಶರಥಃ ಸ್ತೋತ್ರಂ ಸೌರೇರಿದಮ ಬ್ರವೀತ್ ॥ ೨೬ ॥

॥ ದಶರಥ ಉವಾಚ ॥

ನಮಃ ಕೃಷ್ಣಾಯ ನೀಲಾಯ ಶಿತಿಕಂಠನಿಭಾಯ ಚ ।
ನಮಃ ಕಾಲಾಗ್ನಿರೂಪಾಯ ಕೃತಾಂತಾಯ ಚ ವೈ ನಮಃ ॥ ೨೭ ॥

ನಮೋ ನಿರ್ಮಾಂಸದೇಹಾಯ ದೀರ್ಘಶ್ಮಶ್ರುಜಟಾಯ ಚ ।
ನಮೋ ವಿಶಾಲನೇತ್ರಾಯ ಶುಷ್ಕೋದರಭಯಾಕೃತೇ ॥ ೨೮ ॥

ನಮಃ ಪುಷ್ಕಲಗಾತ್ರಾಯ ಸ್ಥೂಲರೋಮ್ಣೇ ಚ ವೈ ನಮಃ ।
ನಮೋ ದೀರ್ಘಾಯ ಶುಷ್ಕಾಯ ಕಾಲದಂಷ್ಟ್ರ ನಮೋಽಸ್ತು ತೇ ॥ ೨೯ ॥

ನಮಸ್ತೇ ಕೋಟರಾಖ್ಯಾಯ ದುರ್ನಿರೀಕ್ಷ್ಯಾಯ ವೈ ನಮಃ ।
ನಮೋ ಘೋರಾಯ ರೌದ್ರಾಯ ಭೀಷಣಾಯ ಕರಾಳಿನೇ ॥ ೩೦ ॥

---

ಮುಗಿದುಕೊಂಡು ಸರಸ್ವತಿಯನ್ನೂ, ಗಣಪತಿಯನ್ನೂ ಧ್ಯಾನಿಸಿ ಶನಿಯನ್ನು ಕುರಿತು ಹೀಗೆ ಸ್ತೋತ್ರಮಾಡಿದನು.

೨೭. ದಶರಥನು ಹೇಳಿದನು– ಕಪ್ಪಗಿರುವ, ನೀಲಿಯ ಬಣ್ಣಕ್ಕಿರುವ, ಈಶ್ವರನ ಕತ್ತಿನ ಬಣ್ಣಕ್ಕಿರುವ ಶನಿಗೆ ನಮಸ್ಕಾರವು. ಪ್ರಳಯಕಾಲದ ಅಗ್ನಿಯಂತೆ, ಕ್ರೂರನಾದ, ಯಮನಂತೆ ಕಠಿಣನಾದ ಶನಿಗೆ ನಮಸ್ಕಾರವು.

೨೮–೨೯. ದೇಹದಲ್ಲಿ ಮಾಂಸವಿಲ್ಲದಿರುವ ನಿನಗೆ ನಮಸ್ಕಾರವು. ಉದ್ದವಾದ ಗಡ್ಡ, ಜಟೆಗಳುಳ್ಳ ನಿನಗೆ ನಮಸ್ಕಾರವು. ವಿಶಾಲವಾದ ಕಣ್ಣುಗಳುಳ್ಳ, ಹೊಟ್ಟೆ ಬತ್ತಿಹೋಗಿರುವ, ಭಯಂಕರವಾದ ಆಕಾರವುಳ್ಳ ನಿನಗೆ ನಮಸ್ಕಾರವು. ದಪ್ಪ ದಪ್ಪವಾದ ಅವಯವಗಳುಳ್ಳ, ದಪ್ಪವಾದ ರೋಮಗಳುಳ್ಳ ನಿನಗೆ ನಮಸ್ಕಾರವು. ಉದ್ದವಾಗಿಯೂ, ಒಣಗಿಕೊಂಡೂ ಇರುವ ನಿನಗೆ ನಮಸ್ಕಾರವು. ಭಯಂಕರವಾದ ದಾಡೆಗಳುಳ್ಳ ನಿನಗೆ ನಮಸ್ಕಾರವು.

೩೦–೩೧. ಕೋಟೀರನೆಂಬ ಹೆಸರುಳ್ಳ ನಿನಗೆ ನಮಸ್ಕಾರವು. ನೋಡಲು ಆಗದಂತೆ ಭಯಂಕರನಾದ ನಿನಗೆ ನಮಸ್ಕಾರವು. ಘೋರನೂ, ರುದ್ರನೂ, ಭಯಂಕರನೂ, ಕರಾಳನೂ ಆದ ನಿನಗೆ ನಮಸ್ಕಾರವು. ಎಲ್ಲವನ್ನೂ ತಿನ್ನುವ

ನಮಸ್ತೇ ಸರ್ವಭಕ್ಷಾಯ ವಲೀಮುಖ ನಮೋಽಸ್ತು ತೇ ।
ಸೂರ್ಯಪುತ್ರ ನಮಸ್ತೇಽಸ್ತು ಭಾಸ್ಕರೇಽಭಯದಾಯ ಚ　　॥ ೩೧ ॥

ಅಧೋ ದೃಷ್ಟೇ ನಮಸ್ತೇಽಸ್ತು ಸಂವರ್ತಕ ನಮೋಽಸ್ತು ತೇ ।
ನಮೋ ಮಂದಗತೇ ತುಭ್ಯಂ ನಿಸ್ತ್ರಿಂಶಾಯ ನಮೋಽಸ್ತು ತೇ　　॥ ೩೨ ॥

ತಪಸಾ ದಗ್ಧ ದೇಹಾಯ ನಿತ್ಯಂ ಯೋಗರತಾಯ ಚ ।
ನಮೋ ನಿತ್ಯಂ ಕ್ಷುಧಾರ್ತಾಯ ಅತೃಪ್ತಾಯ ಚ ವೈ ನಮಃ　　॥ ೩೩ ॥

ಜ್ಞಾನಚಕ್ಷುರ್ನಮಸ್ತೇಽಸ್ತು ಕಶ್ಯಪಾತ್ಮಜಸೂನವೇ ।
ತುಷ್ಟೋ ದದಾಸಿ ವೈ ರಾಜ್ಯಂ ರುಷ್ಟೋ ಹರಸಿ ತತ್ ಕ್ಷಣಾತ್　　॥ ೩೪ ॥

ದೇವಾಸುರ ಮನುಷ್ಯಾಶ್ಚ ಸಿದ್ಧವಿದ್ಯಾಧರೋರಗಾಃ ।
ತ್ವಯಾ ವಿಲೋಕಿತಾಸ್ಸರ್ವೇ ನಾಶಂ ಯಾಂತಿ ಸಮೂಲತಃ ।
ಪ್ರಸಾದಂ ಕುರುಮೇ ದೇವ ವರಾಹೋಽಹಮುಪಾಗತಃ　　॥ ೩೫ ॥

---

ನಿನಗೆ ನಮಸ್ಕಾರವು. ವಲಿಯೆಂಬ ಚೀಲವೇ ಮುಖದಲ್ಲಿರುವ, ನಿನಗೆ ನಮಸ್ಕಾರವು. ಸೂರ್ಯನ ಮಗನೇ! ನಿನಗೆ ನಮಸ್ಕಾರವು. ಅಭಯವನ್ನು ಕೊಡತಕ್ಕವನೇ! ನಿನಗೆ ನಮಸ್ಕಾರವು.

೩೨–೩೩. ಕೆಳಗೆ ನೋಡುತ್ತಿರುವ ನಿನಗೆ ನಮಸ್ಕಾರವು. ಪ್ರಳಯ ಮಾಡುವವನೇ! ನಿನಗೆ ನಮಸ್ಕಾರವು. ತಪಸ್ಸಿನಿಂದ ಕ್ಷಯಿಸಿಹೋದ ಶರೀರ ವುಳ್ಳವನೇ! ನಿನಗೆ ನಮಸ್ಕಾರವು. ಯಾವಾಗಲೂ ಯೋಗಾಭ್ಯಾಸ ಮಾಡು ವವನೇ! ನಿನಗೆ ನಮಸ್ಕಾರವು. ಹಸಿವಿನಿಂದ ಯಾವಾಗಲೂ ಕೂಡಿರುವವನೇ! ನಿನಗೆ ನಮಸ್ಕಾರವು. ತೃಪ್ತನಲ್ಲದಿರುವವನೇ! ನಿನಗೆ ನಮಸ್ಕಾರವು.

೩೪. ಜ್ಞಾನವೇ ಕಣ್ಣಾಗಿ ಉಳ್ಳವನೇ! ನಿನಗೆ ನಮಸ್ಕಾರವು. ಕಶ್ಯಪನ ಮಗನ ಮಗನೇ! ನಿನಗೆ ನಮಸ್ಕಾರವು. ನೀನು ಸಂತೋಷಗೊಂಡರೆ ರಾಜ್ಯ ವನ್ನು ಕೊಡುತ್ತೀಯೆ. ಕೋಪಗೊಂಡರೆ ಒಡನೆಯೇ ಅಪಹರಿಸುತ್ತೀಯೆ.

೩೫. ದೇವತೆಗಳು, ಅಸುರರು, ಮನುಷ್ಯರು, ಸಿದ್ಧರು, ವಿದ್ಯಾಧರರು, ಉರಗರು ಇವರನ್ನು ನೀನು ನೋಡಿದೊಡನೆಯೆ ಅವರೆಲ್ಲರೂ ಪೂರ್ತಿಯಾಗಿ ನಾಶವಾಗುತ್ತಾರೆ. ಎಲೈ ಸ್ವಾಮಿಯೇ! ಅನುಗ್ರಹಿಸು. ವರಾಹನಾದ ನಾನು ನಿನ್ನ ಬಳಿಗೆ ಬಂದಿದ್ದೇನೆ.

|| ಮಹಾದೇವ ಉವಾಚ ||

ಏವಂ ಸ್ತುತಸ್ತದಾ ಸೌರಿರ್ಗ್ರಹರಾಜೋ ಮಹಾಬಲಃ |
ಅಬ್ರವೀಚ್ಚ ಪುನರ್ವಾಕ್ಯಂ ಹೃಷ್ಟರೋಮಾ ತು ಭಾಸ್ಕರಿಃ || ೩೬ ||

|| ಶನಿರುವಾಚ ||

ತುಷ್ಟೋಽಹಂ ತವ ರಾಜೇಂದ್ರ ಸ್ತವೇನಾನೇನ ಸುವ್ರತ |
ವರಂ ಬ್ರೂಹಿ ಪ್ರದಾಸ್ಯಾಮಿ ಇಚ್ಛಯಾ ರಘುನಂದನ || ೩೭ ||

|| ದಶರಥ ಉವಾಚ ||

ಅದ್ಯಪ್ರಭೃತಿ ತೇ ಸೌರೇ ಪೀಡಾ ಕಾರ್ಯಾ ನ ಕಸ್ಯ ಚಿತ್ |
ದೇವಾಸುರ ಮನುಷ್ಯಾಣಾಂ ಪಶುಪಕ್ಷಿಸರೀಸೃಪಾಂ || ೩೮ ||

|| ಶನಿರುವಾಚ ||

ಗೃಹ್ಣಂತೀತಿ ಗ್ರಹಾಸ್ಸರ್ವೇ ವಯಂ ಪೀಡಾಕರಾಃ ಸ್ಮೃತಾಃ |
ಅದೇಯಂ ಯಾಚಿತಂ ರಾಜನ್ ಕಿಂಚಿದ್ಯುಕ್ತಂ ದದಾಮ್ಯಹಂ || ೩೯ ||

---

೩೬. ಮಹಾದೇವನು ಹೇಳಿದನು– ಗ್ರಹರಾಜನೂ, ಬಲಿಷ್ಠನೂ, ಆದ ಶನಿಯನ್ನು ಇಂತು ಸ್ತೋತ್ರಮಾಡಲು, ಆ ಶನಿಯು ಸಂತೋಷಗೊಂಡು ರೋಮಾಂಚಿತನಾಗಿ ಮತ್ತೆ ಇಂತೆಂದನು.

೩೭. ಶನಿಯು ಹೇಳಿದನು– ಎಲೈ ದೊರೆಯೇ! ನಿನ್ನ ಸ್ತೋತ್ರದಿಂದ ಸಂತೋಷಗೊಂಡೆನು. ನಿನಗೆ ಇಷ್ಟಬಂದ ವರವನ್ನು ಕೇಳಿಕೋ ಕೊಡುತ್ತೇನೆ.

೩೮. ದಶರಥನು ಹೇಳಿದನು–ಎಲೈ ಶನಿಯೇ! ದೇವತೆಗಳು, ಅಸುರರು, ಮನುಷ್ಯರು, ಪಶುಗಳು, ಪಕ್ಷಿಗಳು, ಹಾವುಗಳು ಇವರಾರಿಗೂ ಕೂಡ ಇನ್ನು ಮೇಲೆ ನೀನು ತೊಂದರೆಯನ್ನು ಕೊಡಕೂಡದು.

೩೯. ಶನಿಯು ಹೇಳಿದನು–ಪರನನ್ನು ಗ್ರಹಣಮಾಡುವುದು. (ಹಿಡಿದು ಕೊಳ್ಳುವುದು) ಅದರಿಂದಲೇ ನಮಗೆಲ್ಲಾ ಗ್ರಹಗಳೆಂದು ಹೆಸರು ಬಂದಿರುವುದು. ನಾವು ಪೀಡೆಯನ್ನೇ ಯಾವಾಗಲೂ ಮಾಡತಕ್ಕವರು. ಇದನ್ನು ಕೊಡಲು ಸಾಧ್ಯವಿಲ್ಲ. ಆದರೆ ಇದರಲ್ಲಿಯೂ, ಸ್ವಲ್ಪ ಯುಕ್ತವಾದುದನ್ನು ಕೊಡುತ್ತೇನೆ.

ತ್ವಯಾ ಪ್ರೋಕ್ತಂ ಇದಂ ಸ್ತೋತ್ರಂ ಯಃ ಪಠಿಷ್ಯತಿ ಮಾನವಃ ।
ಏಕಕಾಲಂ ದ್ವಿಕಾಲಂ ವಾ ಪೀಡಾಮುಕ್ತೋ ಭವೇತ್ ಕ್ಷಣಾತ್ ॥ ೪೦ ॥

ದೇವಾಸುರಮನುಷ್ಯಾಣಾಂ ಸಿದ್ಧವಿದ್ಯಾಧರರಕ್ಷಸಾಂ ।
ಮೃತ್ಯುಂ ಮೃತ್ಯುಗತೋ ದದ್ಯಾಂ ಜನ್ಮನ್ಯೇವ ಚತುರ್ಥಕೇ ॥ ೪೧ ॥

ಯಃ ಪುನಶ್ಶ್ರದ್ಧಯಾ ಯುಕ್ತಃ ಶುಚಿರ್ಭೂತ್ವಾ ಸಮಾಹಿತಃ ।
ಶಮೀ ಪತ್ರೈಸ್ಸಮಭ್ಯರ್ಚ್ಯ ಪ್ರತಿಮಾಂ ಲೋಹಜಾಂ ಶುಭಾಂ ॥ ೪೨ ॥

ಮಾಷೌದನಂ ತಿಲೈರ್ಮಿಶ್ರಂ ದದ್ಯಾಲ್ಲೋಹಂ ಚ ದಕ್ಷಿಣಾಂ ।
ಕೃಷ್ಣಾಂ ಗಾಂ ವೃಷಭಂ ವಾ ಪಿ ಯೋ ಮೈ ದದ್ಯಾದ್ದ್ವಿಜಾತಯೇ ॥ ೪೩ ॥

ತದ್ದಿನೇ ತು ವಿಶೇಷೇಣ ಸ್ತೋತ್ರೇಣಾನೇನ ಪೂಜಯೇತ್ ।
ಪೂಜಯಿತ್ವಾ ಜಪೇತ್ ಸ್ತೋತ್ರಂ ಭೂತ್ವಾ ಚೈವ ಕೃತಾಂಜಲಿಃ ॥ ೪೪ ॥

---

೪೦. ಎಲೈ ದೊರೆಯೆ! ನೀನು ಹೇಳಿರುವ ಈ ಸ್ತೋತ್ರವನ್ನು ಯಾವನು ಒಂದು ಹೊತ್ತಾಗಲಿ, ಎರಡು ಹೊತ್ತಾಗಲೀ ಹೇಳುವನೋ ಅವನು ಒಡನೆಯೇ ತನ್ನ ಕಷ್ಟದಿಂದ ಬಿಡುಗಡೆಯನ್ನು ಹೊಂದಲಿ.

೪೧. ದೇವತೆಗಳು, ದಾನವರು, ಮನುಷ್ಯರು, ಸಿದ್ಧರು, ವಿದ್ಯಾಧರರು. ರಕ್ಕಸರು ಇವರಿಗೆ ಮೃತ್ಯುಸ್ಥಾನವಾದ ಅಷ್ಟಮವನ್ನು ಹೊಂದಿದರೂ, ಜನ್ಮ ಚತುರ್ಥಗಳಲ್ಲಿ ಬಂದರೂ ಮೃತ್ಯುವನ್ನುಂಟುಮಾಡುತ್ತೇನೆ.

೪೨-೪೪. ಶ್ರದ್ಧೆಯಿಂದ ಕೂಡಿ ಶುಚಿಯಾಗಿ, ಪ್ರತಿಮೆಯನ್ನು ಮಾಡಿಸಿ. ಅದನ್ನು ಬನ್ನಿಯ ಎಲೆಯಿಂದ ಪೂಜಿಸಿ, ಉದ್ದಿನಪುಡಿಯ ಅನ್ನಕ್ಕೆ ಎಳ್ಳನ್ನು ಹಾಕಿ, ಆ ಪ್ರತಿಮೆಯನ್ನೂ, ಈ ಅನ್ನವನ್ನೂ ದಾನಕೊಡಬೇಕು. ಜೊತೆಯಲ್ಲಿ ಕಬ್ಬಿಣವನ್ನೂ ದಾನ ಮಾಡಬೇಕು. ಯುಕ್ತವಾದ ದಕ್ಷಿಣೆಯನ್ನು ಕೊಡಬೇಕು. ಕರಿಯ ಹಸುವನ್ನಾಗಲಿ, ಕರಿಯ ಗೂಳಿಯನ್ನಾಗಲೀ ಬ್ರಾಹ್ಮಣನಿಗೆ ದಾನ ಕೊಡಬೇಕು. ಆದಿನ ಪೂಜೆ ಮಾಡಿದಮೇಲೆ, ಈ ಸ್ತೋತ್ರವನ್ನು ಹೆಚ್ಚಾಗಿ ಹೇಳಬೇಕು. ಕೈಗಳನ್ನು ಮುಗಿದುಕೊಂಡಿರಬೇಕು.

ತಸ್ಯ ಪೀಡಾಂ ನ ಚೈವಾಹಂ ಕರಿಷ್ಯಾಮಿ ಕದಾಚನ ।
ಗೋಚರೇ ಜನ್ಮಲಗ್ನೇ ವಾ ದಶಾಸ್ವಂತರ್ದಶಾಸು ಚ ॥ ೪೫ ॥

ರಕ್ಷಾಮಿ ಸತತಂ ತಂ ಚ ಪೀಡಾಂ ಹೃತ್ವಾ ಗ್ರಹಸ್ಯ ಚ ।
ಅನೇನೈವ ವಿಧಾನೇನ ಪೀಡಾಮುಕ್ತಂ ಜಗದ್ಭವೇತ್ ॥ ೪೬ ॥

ಏಷ ಯುಕ್ತೋ ಮಯಾ ದತ್ತೋ ವರಸ್ತೇ ರಘುನಂದನ ॥ ೪೭ ॥

॥ ಮಹಾದೇವ ಉವಾಚ ॥

ವರತ್ರಯಂ ತು ಸಂಪ್ರಾಪ್ಯ ರಾಜಾ ದಶರಥಸ್ತದಾ ।
ಮೇನೇ ಕೃತಾರ್ಥಮಾತ್ಮಾನಂ ನಮಸ್ಕೃತ್ಯ ಶನೈಶ್ಚರಂ ॥ ೪೮ ॥

ಶನಿನಾ ಚಾಭ್ಯನುಜ್ಞಾತೋ ರಥಮಾರುಹ್ಯ ವೇಗವಾನ್ ।
ಸ್ವಸ್ಥಾನಂ ಗತವಾನ್ ರಾಜಾ ಪ್ರಾಪ್ತಶ್ರೇಯೋಽಭವತ್ತದಾ ॥ ೪೯ ॥

ಯ ಇಮಂ ಪ್ರಾತರುತ್ಥಾಯ ಶನಿವಾರೇ ಸ್ತವಂ ಪಠೇತ್ ।
ಪಠ್ಯಮಾನಮಿದಂ ಸ್ತೋತ್ರಂ ಶ್ರದ್ಧಯಾ ಯಃ ಶೃಣೋತಿ ಚ ॥ ೫೦ ॥

---

೪೫-೪೭. ಹಾಗೆ ಮಾಡಿದವನಿಗೆ ನಾನು ಪೀಡೆಯನ್ನು ಕೊಡುವುದಿಲ್ಲ. ಗೋಚಾರರೀತಿಯಲ್ಲಿ ನಾನು ಜನ್ಮಕ್ಕೆ ಬಂದರೂ, ನನ್ನ ದೆಸೆಯಲ್ಲಿಯೂ ಅಂತರ್ದೆಶೆಗಳಲ್ಲಿಯೂ, ಅವನ ಗ್ರಹಪೀಡೆಗಳೆಲ್ಲವನ್ನೂ ನಾಶಮಾಡುತ್ತೇನೆ. ಈ ಈ ರೀತಿ ಮಾಡಿದರೆ ಜಗತ್ತು ನನ್ನಿಂದ ಬರುವ ಪೀಡೆಯಿಂದ ಪಾರಾಗುತ್ತದೆ. ಯುಕ್ತಿಯಿಂದ ಈ ವರವನ್ನು ನಿನಗೆ ಕೊಟ್ಟಿದ್ದೇನೆ.

೪೮. ಮಹಾದೇವನು ಹೇಳಿದನು–ಈ ರೀತಿಯಾಗಿ ರಾಜನಾದ ದಶರಥನು ಮೂರು ವರಗಳನ್ನು ಹೊಂದಿ, ತನ್ನನ್ನು ಕೃತಾರ್ಥನೆಂದು ಭಾವಿಸಿಕೊಂಡು ಆ ಶನಿಯನ್ನು ನಮಸ್ಕರಿಸಿದನು.

೪೯. ಶನಿಯಿಂದ ಅಪ್ಪಣೆಯನ್ನು ಪಡೆದು ರಥದಲ್ಲಿ ಕುಳಿತು ಹೊರಟು, ತನ್ನ ರಾಜ್ಯಕ್ಕೆ ಬಂದನು. ಈ ರೀತಿಯಾಗಿ ದಶರಥನು ಶ್ರೇಯಸ್ಸನ್ನೇ ಪಡೆದನು.

೫೦-೫೨. ಯಾವನು ಇದನ್ನು ಶನಿವಾರ ಬೆಳಗ್ಗೆ ಎದ್ದು ಹೇಳುತ್ತಾನೋ, ಶ್ರದ್ಧೆಯಿಂದ ಹೇಳಿಸುತ್ತಾನೋ ಮತ್ತು ಭಕ್ತಿಯಿಂದ ಕೇಳುತ್ತಾನೋ

ನರಸ್ಸ ಮುಚ್ಯತೇ ಪಾಪಾತ್ ಸ್ವರ್ಗಲೋಕೇ ಮಹೀಯತೇ ।
ರಾಜ್ಞಾ ದಶರಥೇನೋಕ್ತಂ ಶನೇಸ್ತ್ಸ್ತೋತ್ರಂ ಚ ಶಾರದಂ　॥ ೫೧ ॥

ಪರಮಾಯುಷ್ಕರಂ ಬಲ್ಯಂ ಸರ್ವಪೀಡಾವಿನಾಶನಂ ।
ಕಾಂತಿದಂ ಪುತ್ರದಂ ಚೈವ ಗ್ರಹಶಾಂತಿಕರಂ ಪರಂ　॥ ೫೨ ॥

ಈದೃಶಂ ನಾಸ್ತಿ ಲೋಕೇಸ್ಮಿನ್ ಪಾವನಂ ಭುವಿದುರ್ಲಭಂ ।
ವೃದ್ಧಾಖ್ಯೇ ನಗರೇ ರಮ್ಯೇ ತತ್ರ ತೀರ್ಥಂ ಹ್ಯನುತ್ತಮಂ　॥ ೫೩ ॥

ಶ್ರಾವಣೇ ಮಾಸಿ ಗನ್ತವ್ಯಂ ತಸ್ಮಿಂಸ್ತೀರ್ಥೇ ಹ್ಯನುತ್ತಮೇ ।
ವಸಂತಿ ಬ್ರಾಹ್ಮಣಾ ಯತ್ರ ವೃದ್ಧಾಖ್ಯಂ ಚ ಪರಂ ಮಹತ್　॥ ೫೪ ॥

ಶನೇಸ್ಸರೋವರಂ ಪುಣ್ಯಂ ಪವಿತ್ರಂ ಪಾಪನಾಶನಂ ।
ತತ್ರ ಗತ್ವಾ ನರಶ್ರೇಷ್ಠ ಸ್ನಾನಂ ಚೈವ ಸಮಾಚರೇತ್　॥ ೫೫ ॥

---

ಈ ಮೂವರೂ ಪಾಪಗಳನ್ನು ಕಳೆದುಕೊಂಡು ಸ್ವರ್ಗದಲ್ಲಿ ಸುಖಿಸುತ್ತಾರೆ. ರಾಜನಾದ ದಶರಥನು ಹೇಳಿರುವ ಈ ಶನಿಸ್ತೋತ್ರವು ಸರಸ್ವತಿಯನ್ನು ಒಲಿಸುತ್ತದೆ. ಆಯುಸ್ಸನ್ನು ಹೆಚ್ಚಿಸುತ್ತದೆ. ಬಲವನ್ನು ಕೊಡುತ್ತದೆ. ಎಲ್ಲಾ ಪೀಡೆಗಳನ್ನೂ ನಾಶಮಾಡುತ್ತದೆ. ಕಾಂತಿಯನ್ನೂ, ಮಕ್ಕಳನ್ನೂ ಕೊಡುತ್ತದೆ. ಗ್ರಹಗಳಿಗೆಲ್ಲಾ ಶಾಂತಿಯಾಗಿದೆ.

೫೩-೫೪. ಈ ರೀತಿಯಾದ ಪಾವನವಾದ ಸ್ತೋತ್ರವು ಲೋಕದಲ್ಲಿ ಯಾವುದೂ ಇಲ್ಲ. ವೃದ್ಧವೆಂಬ ಪಟ್ಟಣದಲ್ಲಿ ಮನೋಹರವೂ, ಉತ್ತಮವೂ ಆದ ಒಂದು ತೀರ್ಥವಿರುವುದು. ಆ ಉತ್ತಮ ತೀರ್ಥಕ್ಕೆ ಶ್ರಾವಣಮಾಸದಲ್ಲಿ ಹೋಗಬೇಕು. ಆ ವೃದ್ಧಪುರವು ದೊಡ್ಡದಾಗಿರುವುದು. ಅನೇಕ ಜನ ಬ್ರಾಹ್ಮಣರು ಅಲ್ಲಿ ವಾಸಮಾಡುತ್ತಾರೆ.

೫೫. ಅಲ್ಲಿ ಶನಿಯ ಸರೋವರವಿರುವುದು. ಅದು ಪವಿತ್ರವಾದುದು. ಪಾಪನಾಶಕವಾದುದು. ಅಲ್ಲಿಗೆ ಹೋಗಿ ಅದರಲ್ಲಿ ಸ್ನಾನ ಮಾಡಬೇಕು.

ಗ್ರಹ ಪೀಡಾ ವಿನಶ್ಯಂತಿ ಇತ್ಯೇವಂ ಬ್ರಹ್ಮಣೋ ವಚಃ ।
ಚತುರಶೀತಿಸಹಸ್ರಾಣಿ ತೀರ್ಥಾನಿ ತತ್ರ ವೈ ಋಷೇ ॥ ೫೬ ॥

ನಗರಂ ವೃದ್ಧ ಸಂಜ್ಞಂ ತು ಕಥಿತಂ ಬ್ರಹ್ಮಸೂನವೇ ।
ಮಹೇಶೇನೈವ ರಚಿತಂ ತತ್ರ ತೀರ್ಥಂ ತು ವರ್ತತೇ ॥ ೫೭ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಪತಿ
ನಾರದ ಸಂವಾದೇ ದಶರಥ ಕೃತ, ಶನೈಶ್ಚರಸ್ತೋತ್ರಂ
ನಾಮ ಚತುಸ್ತ್ರಿಂಶೋಽಧ್ಯಾಯಸ್ಸಮಾಪ್ತಃ

---

೫೬. ಅಲ್ಲಿ ಸ್ನಾನಮಾಡಿದ ಮಾತ್ರದಿಂದಲೇ ಗ್ರಹಗಳ ಪೀಡೆಯು ಹೋಗುತ್ತದೆ. ಎಂದು ಬ್ರಹ್ಮನು ಹೇಳಿರುವನು. ಅಲ್ಲಿ ಎಂಭತ್ತನಾಲ್ಕು ಸಾವಿರ ತೀರ್ಥಗಳಿವೆ.

೫೭. ಈ ರೀತಿಯಾಗಿ ವೃದ್ಧವೆಂಬ ಹೆಸರುಳ್ಳ ನಗರವನ್ನು ಬ್ರಹ್ಮನು ಮಗನಾದ ನಾರದನಿಗೆ ಹೇಳಿದನು. ಅದನ್ನು ಮಹೇಶನು ಮಾಡಿರುವನು. ಅಲ್ಲಿ ಈ ರೀತಿ ಪ್ರಸಿದ್ಧವಾದ ತೀರ್ಥವಿರುವುದು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಪತಿ ನಾರದರ
ಸಂವಾದದಲ್ಲಿ ದಶರಥನುಮಾಡಿದ ಶನೈಶ್ಚರಸ್ತೋತ್ರವೆಂಬ
ಮೂವತ್ತನಾಲ್ಕನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ಪಂಚತ್ರಿಂಶೋಽಧ್ಯಾಯಃ ||



|| ನಾರದ ಉವಾಚ ||

ತ್ರಿಸ್ಪೃಶಾಖ್ಯಂ ವ್ರತಂ ಬ್ರೂಹಿ ಸರ್ವೇಶ್ವರ ವಿಶೇಷತಃ |
ಯಚ್ಛ್ರುತ್ವಾ ಮುಚ್ಯತೇ ಲೋಕಃ ಕರ್ಮಬಂಧನತಃ ಕ್ಷಣಾತ್ || ೧ ||

|| ಮಹಾದೇವ ಉವಾಚ ||

ಏತದ್ವ್ರತಂ ಪುರಾ ಪೂರ್ವಂ ವ್ಯಾಸಾಯ ಚ ನಿರೂಪಿತಂ |
ಕುಮಾರೇಣ ತದಾ ವಿದ್ವಂಲ್ಲೋಕಾನಾಂ ಹಿತಕಾಮ್ಯಯಾ || ೨ ||

ತದಹಂ ಸಂಪ್ರವಕ್ಷ್ಯಾಮಿ ಯಥಾದೃಷ್ಟಂ ಯಥಾಶ್ರುತಂ |
ಸರ್ವ ಪಾಪೌಘಶಮನಂ ಮಹಾದುಃಖ ವಿನಾಶನಂ || ೩ ||

---

## ಮೂವತ್ತೈದನೆಯ ಅಧ್ಯಾಯವು



೧. ನಾರದನು ಹೇಳಿದನು– ಎಲೈ ಸರ್ವೇಶ್ವರನೇ ! ತ್ರಿಸ್ಪೃಶವೆಂಬ ವ್ರತವನ್ನು ಹೇಳು. ಅದನ್ನು ಕೇಳಿದ ಮಾತ್ರದಿಂದಲೇ, ಜನರು ತಮ್ಮ ಕರ್ಮಗಳೆನ್ನು ಕಳೆದುಕೊಂಡು, ಮುಕ್ತಿಯನ್ನು ಹೊಂದುತ್ತಾರೆ.

೨. ಮಹಾದೇವನು ಹೇಳಿದನು– ಈ ವ್ರತವನ್ನು ಕುಮಾರಸ್ವಾಮಿಯು ಹಿಂದೆ ಲೋಕಹಿತಕ್ಕೋಸ್ಕರ ವ್ಯಾಸನಿಗೆ ಹೇಳಿದ್ದನು.

೩. ಆ ವ್ರತವನ್ನು ನಿನಗೆ ನಾನು ತಿಳಿದಂತೆಯೂ, ನೋಡಿದಂತೆಯೂ, ಹೇಳುತ್ತೇನೆ. ಎಲ್ಲಾ ಪಾಪಗಳನ್ನೂ ನಾಶಮಾಡುತ್ತದೆ. ಎಲ್ಲಾ ದುಃಖಗಳನ್ನೂ ನಾಶಮಾಡುತ್ತದೆ.

ಶೃಣು ಕೃಷ್ಣಾವಕಾರಂ ತ್ವಂ ತ್ರಿಸ್ಪೃತಾಖ್ಯಂ ಮಹಾವ್ರತಂ ।
ಕಾಮದಂ ಸಂಸ್ಕೃತಂ ವಿಪ್ರ ವಿಪ್ರಾಣಾಂ ಚೈವ ಮೋಕ್ಷದಂ ॥ ೪ ॥

ತ್ರಿಸ್ಪೃಶಾಖ್ಯಂ ವ್ರತಂ ವಿಪ್ರ ಶೃಣುಷ್ವ ಗದತೋ ಮಮ ।
ಪ್ರತ್ಯಕ್ಷಮರ್ಚಿತಸ್ತೇನ ಕಲಿಕಾಲೇ ಚ ಕೇಶವಃ ॥ ೫ ॥

ತ್ರಿಶ್ಪೃಶಾಕೀರ್ತನಂ ನಿತ್ಯಂ ಯಃ ಕರೋತಿ ಮಹಾಮುನೇ ।
ಪುರಶ್ಚರಣಚೀರ್ಣೇನ ಸರ್ವಪಾಪಕ್ಷಯೋ ಭವೇತ್ ॥ ೬ ॥

ತ್ರಿಸ್ಪೃಶಾನಾಮಮಾತ್ರೇಣ ಕ್ಷೀಯತೇ ನಾತ್ರ ಸಂಶಯಃ ।
ನಾಗಮೈರ್ನಪುರಾಣಾದ್ಯೈರ್ನ ಮಖೈಸ್ತೀರ್ಥಕೋಟಿಭಿಃ ॥ ೭ ॥

ಬಹುಭಿಃ ವ್ರತಸಂಘೈಶ್ಚ ಪೂಜಿತೈಸ್ತ್ರಿದಶೈರಪಿ ।
ಮೋಕ್ಷೋ ಭವತಿ ವಿಪ್ರೇಂದ್ರ ತ್ರಿಸ್ಪೃಶಾ ನ ಕೃತಾ ಯದಿ ॥ ೮ ॥

---

೪. ಕೃಷ್ಣಾವಕಾರ ರೂಪವಾದ, ಆತ್ರಿ ಸ್ಪೃಶವೆಂಬ ವ್ರತವನ್ನು ಕೇಳು. ಅದು ಇಷ್ಟಾರ್ಥಗಳನ್ನು ಕೊಡುತ್ತದೆ. ಬ್ರಾಹ್ಮಣರಿಗೆ ಮೋಕ್ಷವನ್ನು ಕೊಡುತ್ತದೆ.

೫. ಈ ತ್ರಿಸ್ಪೃಶವೆಂಬ ವ್ರತವನ್ನು ಮನಸ್ಸಿಟ್ಟು ಕೇಳು. ಕಲಿಕಾಲಕ್ಕೆ ಬಹು ಉತ್ತಮವಾದುದು. ಕೇಶವನೇ ಪ್ರತ್ಯಕ್ಷವಾಗಿ ಮಾಡಿರುವನು.

೬. ಯಾವನು ನಿತ್ಯವೂ ಈ ತ್ರಿಸ್ಪೃಶಾವ್ರತದ, ಕೀರ್ತನೆಯನ್ನು ಮಾಡುತ್ತಾನೆಯೋ ಅದರಿಂದಲೇ ಅವನ ಪಾಪಗಳು ನಾಶವಾಗುತ್ತವೆ. ಅದನ್ನು ಮಾಡಿದರೆ ಪಾಪಗಳೆಲ್ಲವೂ ಸ್ವಲ್ಪವೂ ಉಳಿಯದಂತೆ ನಾಶವಾಗುತ್ತವೆ.

೭-೮. ಈ ತ್ರಿಸ್ಪೃಶ ವ್ರತದ ಹೆಸರನ್ನು ಹೇಳುವುದರಿಂದಲೇ, ಪಾಪವೆಲ್ಲವೂ ಹೋಗುವುದರಲ್ಲಿ ಸಂಶಯವಿಲ್ಲ. ವೇದಗಳು, ಪುರಾಣಗಳು, ಯಾಗಗಳು, ಅನೇಕವಾದ ತೀರ್ಥಗಳು, ವ್ರತಗಳು, ಇವುಗಳನ್ನು ಅನುಸರಿಸಿದರೂ, ದೇವತೆಗಳನ್ನು ಪೂಜಿಸಿದರೂ, ಈ ತ್ರಿಸ್ಪೃಶೆಯನ್ನು ಮಾಡದಿದ್ದಲ್ಲಿ ಮೋಕ್ಷವೆಂಬುದು ಬರುವುದಿಲ್ಲ.

ಮೋಕ್ಷಾರ್ಥೇ ದೇವದೇವೇನ ಸೃಷ್ಟಾ ವೈ ವೈಷ್ಣವೀ ತಿಥಿಃ ।
ದ್ವಿಜಾನಾಂ ದುರ್ಲ್ವಿದಂ ಸಾಕ್ಷಾತ್ಕಲಿಕಾಲೇ ವಿಶೇಷತಃ ॥ ೯ ॥

ಅನಿಗ್ರಹಾಚ್ಚೇಂದ್ರಿಯಾಣಾಂ ಸ್ಥಿರತ್ವಂ ಮನಸೋ ನ ಹಿ ।
ವಿಷಯೈರ್ವಿಪ್ರಯುಕ್ತಾನಾಂ ಧ್ಯಾನಧಾರಣ ವರ್ಜಿನಾಂ ॥ ೧೦ ॥

ಕಾಮಭೋಗಪ್ರಸಕ್ತಾನಾಂ ತ್ರಿಸ್ಪೃಶಾ ಮೋಕ್ಷದಾಯಿನೀ ।
ಮಯಾ ಚೈವ ಪುರಾ ಪ್ರೋಕ್ತಾ ಚತುರ್ವಕ್ತ್ರಸ್ಯ ಸಾಗರೇ ॥ ೧೧ ॥

ಕ್ಷೀರೋದೇ ಪ್ರಣತಾನಾಂ ತು ಮಥ್ಯಮಾನೇ ತು ಚಕ್ರಿಣಾ ।
ತ್ರಿಸ್ಪೃಶಾಂ ಯೇ ಕರಿಷ್ಯಂತಿ ವಿಷಯೈರಪಿ ಸಂಯುತಾಃ ॥ ೧೨ ॥

ತೇಷಾಮಪಿ ಮಯಾ ದತ್ತೋ ಮೋಕ್ಷಸ್ಸಂಖ್ಯಾವಿವರ್ಜಿತಃ ।
ಕುರುಷ್ವ ತಾಂ ಮುನಿಶ್ರೇಷ್ಠ ತ್ರಿಸ್ಪೃಶಾ ಮೋಕ್ಷದಾಯಿನೀ ॥ ೧೩ ॥

ಬಹುಭಿರ್ಮುನಿಸಂಘೈಶ್ಚ ಕೃತೇಯಂ ಚ ಮಹಾಮುನೇ ।
ಕಾರ್ತಿಕೇ ಶುಕ್ಲಪಕ್ಷೇ ತು ತ್ರಿಸ್ಪೃಶಾ ಜಾಯತೇ ಯದಿ ॥ ೧೪ ॥

---

೯–೧೩. ದೇವದೇವನು, ಮೋಕ್ಷವನ್ನು ಜನರು ಹೊಂದಲೆಂದೇ, ಈ ವೈಷ್ಣವೀ ತಿಥಿಯನ್ನು ನಿರ್ಮಿಸಿರುವನು. ಬ್ರಾಹ್ಮಣರು ಎಲ್ಲವನ್ನೂ ತಿಳಿದಿರುವುದಿಲ್ಲ. ಅದರಲ್ಲಿಯೂ ಈ ಕಲಿಕಾಲದಲ್ಲಿ, ಉತ್ತಮಜ್ಞಾನವು ಬರುವುದೇ ಇಲ್ಲ. ಅಲ್ಲದೆ ಇಂದ್ರಿಯಗಳನ್ನು ನಿಗ್ರಹಿಸಲಾರರು. ಧ್ಯಾನ ಧಾರಣೆಗಳನ್ನು ಮಾಡಲಾರರು. ಕಾಮದಲ್ಲಿಯೂ, ಭೋಗದಲ್ಲಿಯೂ, ಆಸಕ್ತರಾಗಿರುವರು. ಅಂತಹವರಿಗೆ ಈ ತ್ರಿಸ್ಪೃಶೆಯು ಮೋಕ್ಷವನ್ನು ಕೊಡುತ್ತದೆ. ಹಿಂದೆ ಕ್ಷೀರಸಮುದ್ರವನ್ನು ವಿಷ್ಣುವು ಕಡೆಯುತ್ತಿದ್ದಾಗ, ನಾನು ಆ ಸಮುದ್ರದಲ್ಲಿ ಬ್ರಹ್ಮನಿಗೆ ಈ ವ್ರತವನ್ನು ಹೇಳಿದೆನು. ವಿಷಯ ನಿಗ್ರಹ ಮಾಡದಿದ್ದರೂ, ಯಾರು ಈ ತ್ರಿಸ್ಪೃಶೆಯನ್ನು ಮಾಡುವರೋ ಅವರಿಗೂ ಕೂಡ, ಅಸಂಖ್ಯಾತವಾದ ಮೋಕ್ಷವನ್ನು ಕೊಟ್ಟಿರುವೆನು. ಆದ್ದರಿಂದ ಆ ತ್ರಿಸ್ಪೃಶೆಯನ್ನು ಮಾಡು. ಅದು ಮೋಕ್ಷವನ್ನು ಕೊಡುತ್ತದೆ.

೧೪. ಅನೇಕಜನ ಮುನಿಗಳು, ಈ ವ್ರತವನ್ನು ಮಾಡಿದ್ದಾರೆ. ಕಾರ್ತೀಕ ಶುಕ್ಲಪಕ್ಷದಲ್ಲಿ, ಈ ತ್ರಿಸ್ಪೃಶೆಯು ಒಂದುವೇಳೆ ಉಂಟಾಗಬಹುದು. ಅದು ಉತ್ತಮವು.

ಸೋಮೋನ ಸೋಮಜೇನಾಪಿ ಪಾಪಕೋಟಿ ವಿನಾಶಿನೀ ।
ಯಸ್ಯಾಮುಪೋಷಣಂ ಕೃತ್ವಾ ಹತ್ಯಾಯುಕ್ತಮಹೇಶಿತುಃ || ೧೫ ||

ಪಸ್ತಾದ್ಬ್ರಹ್ಮಕಪಾಲಂ ತು ತತ್ ಕ್ಷಣಾತ್ಪತಿತಂ ಭುವಿ ।
ಕಲಿಕಲ್ಮಷಕೋಟ್ಯೋಘೈಃ ಮುಕ್ತಾ ದೇವೀ ತ್ರಿಮಾರ್ಗಗಾ || ೧೬ ||

ಉಪದೇಶಾ ನ್ಮಾಧವಸ್ಯ ತ್ರಿಸ್ಪೃಶಾ ಸಮುಪೋಷಣಾತ್ ।
ಹತ್ಯಾಃಷ್ಟೌ ಬಾಹುವೀರ್ಯಸ್ಯ ಪೂರ್ವಂ ಜಾತಾ ಮಹಾಮುನೇ || ೧೭ ||

ಗತಾ ಭೃಗೂಪದೇಶೇನ ತ್ರಿಸ್ಪೃಶಾಸಮುಪೋಷಣಾತ್ ।
ಜೀವೋಪದೇಶಾಚ್ಛಕ್ರಸ್ಯ ಹತ್ಯಾ ನಮುಚಿಸಂಭವಾ || ೧೮ ||

ವಿನಷ್ಟಾ ಮುನಿಮುಖ್ಯೇಂದ್ರ ತ್ರಿಸ್ಪೃಶಾಸಮುಪೋಷಣಾತ್ ।
ಶತಾಯುಧೇನ ವಿಪ್ರೇಂದ್ರ ನಿಹತೋ ಬ್ರಾಹ್ಮಣೋ ವನೇ || ೧೯ ||

---

೧೫. ಚಂದ್ರನೂ, ಅವನ ಮಗನಾದ ಬುಧನೂ, ಈ ವ್ರತವನ್ನು ಮಾಡಿ ಅನೇಕ ಪಾಪಗಳಿಂದ ಪಾರಾದರು. ಈಶ್ವರನು ಬ್ರಹ್ಮಹತ್ಯೆ ಮಾಡಿದಾಗ, ಅವನ ಮೈಯ್ಯಲ್ಲಿ ಕಪಾಲವು ಅಂಟಿಕೊಂಡಿರಲು, ಈ ವ್ರತವನ್ನು ಮಾಡಿದನು. ಒಡನೆಯೇ ಬಿಟ್ಟುಹೋಯಿತು.

೧೬. ಆಕಾಶದಲ್ಲಿ ಹರಿಯುವ ಆ ಗಂಗೆಯು, ಕಲಿಯ ಪಾಪದಿಂದ ಪಾರಾದಳು. ಇದನ್ನು ಮಾಧವನು ಆ ಗಂಗೆಗೆ ಉಪದೇಶಿಸಿದುದರಿಂದ, ಆಕೆಯು ಆ ದಿನ ಉಪವಾಸಮಾಡಿ, ಪಾಪಗಳನ್ನು ಕಳೆದುಕೊಂಡಳು.

೧೭–೧೮. ಭಾರ್ಗವರಾಮನಿಗೆ, ಪೂರ್ವದಲ್ಲಿ ಎಂಟು ಹತ್ಯೆಗಳು ಬಂದು, ಪಾಪಿಯಾದನು. ಆಗ ಭೃಗುಋಷಿಯ ಉಪದೇಶದಂತೆ, ತ್ರಿಸ್ಪೃಶೆಯಲ್ಲಿ ಉಪವಾಸಮಾಡಲು, ಅದು ಹೋಯಿತು. ಮತ್ತು ನಮುಚಿಯನ್ನು ಕೊಂದ ಬ್ರಹ್ಮಹತ್ಯೆಯು, ಇಂದ್ರನಿಗೆ ಬಾಧಿಸಲು ಗುರುವಿನ ಉಪದೇಶದಿಂದ ಈ ವ್ರತವನ್ನು ಮಾಡಿ ಕಳೆದುಕೊಂಡನು.

೧೯. ಶತಾಯುಧನೆಂಬ ರಾಜನು ಕಾಡಿನಲ್ಲಿ, ಒಬ್ಬ ಬ್ರಾಹ್ಮಣನನ್ನು ಕೊಂದು ಬಂದ ಬ್ರಹ್ಮಹತ್ಯೆಯನ್ನು, ತ್ರಿಸ್ಪೃಶೆಯಲ್ಲಿ ಉಪವಾಸಮಾಡಿ ಕಳೆದು ಕೊಂಡನು.

ಬ್ರಹ್ಮಹತ್ಯಾವಿನಿರ್ಮುಕ್ತಸ್ತ್ರಿಸ್ಪೃಶಾಸಮುಪೋಷಣಾತ್ ।
ಬ್ರಹ್ಮಹತ್ಯಾದಿ ಪಾಪಾನಿ ತ್ರಿಸ್ಪೃಶಾ ಸಮುಪೋಷಣಾತ್ ॥ ೨೦ ॥

ವಿಲಯಂ ಯಾಂತಿ ವಿಪ್ರೇಂದ್ರ ಪಾಪೇಷ್ವನ್ಯೇಷು ಕಾ ಕಥಾ ।
ಪ್ರಯಾಗೇ ನ ಕಾಶ್ಯಾಂ ತು ಗೋಮತ್ಯಾಂ ಕೃಷ್ಣಸನ್ನಿಧೌ ॥ ೨೧ ॥

ಮೋಕ್ಷೋ ಭವತಿ ವಿಪ್ರೇಂದ್ರ ತ್ರಿಸ್ಪೃಶಾ ಯದಿ ನೋ ಕೃತಾ ।
ಮರಣಾಚ್ಚ ಪ್ರಯಾಗೇ ತು ಗೋಮತ್ಯಾಂ ಕೃಷ್ಣಸನ್ನಿಧೌ ॥ ೨೨ ॥
ಸ್ನಾನಮಾತ್ರೇಣ ಗೋಮತ್ಯಾಂ ಮುಕ್ತಿರ್ಭವತಿ ಶಾಶ್ವತೀ ।

ಗೃಹೇಪಿ ಜಾಯತೇ ಮುಕ್ತಿಸ್ತ್ರಿಸ್ಪೃಶಾಸಮುಪೋಷಣಾತ್ ॥ ೨೩ ॥
ವಿಷಯೇ ವರ್ತಮಾನಸ್ಯ ಕಾಮಭೋಗಾನ್ವಿತಸ್ಯ ಚ ।

ನಿವೃತ್ತವಿಷಯಸ್ಯಾಪಿ ಮುಕ್ತಿಸ್ಸಾಂಖ್ಯೇನ ದುರ್ಲಭಾ ।
ತಸ್ಮಾತ್ಕುರುಷ್ವ ವಿಪ್ರೇಂದ್ರ ತ್ರಿಸ್ಪೃಶಾಂ ಮೋಕ್ಷದಾಯಿನೀಂ ॥ ೨೪ ॥

---

೨೦. ಈ ತ್ರಿಸ್ಪೃಶೆಯಲ್ಲಿ ಉಪವಾಸ ಮಾಡುವುದರಿಂದ, ಬ್ರಹ್ಮಹತ್ಯಾದಿ ಪಾಪಗಳೆಲ್ಲವೂ, ನಾಶಹೊಂದುತ್ತಿರುವಾಗ ಮತ್ತೆ ಉಳಿದಪಾಪಗಳ ವಿಷಯವನ್ನು ಹೇಳುವುದೇನಿದೆ ?

೨೧. ಪ್ರಯಾಗದಲ್ಲಾಗಲೀ, ಕಾಶಿಯಲ್ಲಾಗಲಿ, ಗೋಮತಿಯಲ್ಲಾಗಲಿ, ಕೃಷ್ಣನ ಸನ್ನಿಧಿಯಾದ ಮಥುರೆಯಲ್ಲಾಗಲಿ, ಈ ತ್ರಿಸ್ಪೃಶೆ ಉಪವಾಸ ಮಾಡದಿದ್ದರೆ, ಮೋಕ್ಷವಾಗುವುದಿಲ್ಲ.

೨೨–೨೪. ಪ್ರಯಾಗದಲ್ಲೂ, ಗೋಮತಿಯಲ್ಲೂ, ಮಥುರೆಯಲ್ಲಿಯೂ, ಮರಣವು ಸಂಭವಿಸುವುದರಿಂದ ಮುಕ್ತಿಯು ಬರುತ್ತದೆ. ಗೋಮತಿಯಲ್ಲಿ ಸ್ನಾನಮಾಡುವುದರಿಂದಲೂ ಶಾಶ್ವತ ಮುಕ್ತಿಯು ಬರುತ್ತದೆ. ಅದೇ ರೀತಿಯಲ್ಲಿ ತ್ರಿಸ್ಪೃಶೆಯಲ್ಲಿ, ಮನೆಯಲ್ಲಿ ಉಪವಾಸ ಮಾಡಿದರೂ ಮುಕ್ತಿಯು ಬರುತ್ತದೆ. ಇಂದ್ರಿಯಗಳಿಗೆ ಅಧೀನನಾಗಿ ಕಾಮಭೋಗವನ್ನು ಮಾಡುತ್ತಲಿರುವವನಿಗೂ, ವಿಷಯಸುಖಗಳನ್ನು ಬಿಟ್ಟವನಿಗೂ, ಸಾಂಖ್ಯಮತದಂತೆ, ಮುಕ್ತಿಯು ಬರುವುದು ಕಷ್ಟ. ಆದ್ದರಿಂದ ಮೋಕ್ಷದಾಯಕವಾದ ಈ ತ್ರಿಸ್ಪೃಶೆಯನ್ನು ಆಚರಿಸು.

|| ನಾರದ ಉವಾಚ ||

ಈದೃಶಂ ತತ್ಸುರಶ್ರೇಷ್ಠ ತ್ರಿಸ್ಪೃಶಾಖ್ಯಂ ಮಹಾವ್ರತಂ |
ಮುಕ್ತಿದಂ ಯದ್ವಿಜಾತೀನಾಂ ತ್ವಯಾ ಪ್ರೋಕ್ತಂ ತು ಮಾಧವ || ೨೫ ||

|| ಮಹಾದೇವ ಉವಾಚ ||

ಜಾಹ್ನವ್ಯೈ ಸಾ ಪುರಾ ವಿಪ್ರ ತ್ರಿಸ್ಪೃಶಾ ಮಾಧವೇನ ತು |
ಪ್ರಾಚೀಸರಸ್ವತೀತೀರೆ ಕಥಿತಾ ತ್ವನುಕಂಪಯಾ || ೨೬ ||

|| ಜಾಹ್ನವ್ಯುವಾಚ ||

ಕಲಿ ಕಲ್ಮಷ ಕೋಟ್ಯೋಘೈರ್ಬ್ರಹ್ಮಹತ್ಯಾದಿಕೈರ್ಯುತಾಃ |
ಕಲಿಕಾಲೆ ಹೃಷೀಕೇಶ ಸ್ನಾನಂ ಕುರ್ವಂತಿ ಮಜ್ಜಲೆ || ೨೭ ||

ತೇಷಾಂ ಪಾಪ ಶತೈರ್ದೋಷೈ ರ್ದೇಹೀಂ ಮೇ ಕಲುಷೀಕೃತಂ |
ಕಥಂ ಯಾಸ್ಯತಿ ಮೇ ದೇವ ಪಾತಕಂ ಗರುಡಧ್ವಜ || ೨೮ ||

---

೨೫. ನಾರದನು ಹೇಳಿದನು–ಎಲೈ ಸುರಶ್ರೇಷ್ಠನೇ! ಆ ತ್ರಿಸ್ಪೃಶೆಯೆಂಬ ವ್ರತವು ಎಂಥಾದ್ದು? ಅದು ದ್ವಿಜರಿಗೆ ಹೇಗೆ ಮುಕ್ತಿಯನ್ನು ಕೊಡುತ್ತದೆ? ಈಗ ನನಗೆ ಆ ವ್ರತವನ್ನು ವಿವರಿಸು.

೨೬. ಮಹಾದೇವನು ಹೇಳಿದನು– ಹಿಂದೆ ಮಾಧವನು ಜಾಹ್ನವಿಗೆ, ಸರಸ್ವತಿನದಿಯ ಪೂರ್ವತೀರದಲ್ಲಿ ಕೃಪೆಯಿಂದ ಈ ತ್ರಿಸ್ಪೃಶೆಯ ವ್ರತವನ್ನು ಹೇಳಿದನು.

೨೭-೨೮. ಜಾಹ್ನವಿಯು ಹೇಳಿದಳು– ಎಲೈ ಹೃಷೀಕೇಶನೇ! ಈ ಕಲಿ ಕಾಲದಲ್ಲಿ ಜನರೆಲ್ಲರೂ, ಬ್ರಹ್ಮಹತ್ಯೆಯೇ ಮೊದಲಾದ, ಅನೇಕವಾದ ಕಲಿಯ ಸಂಬಂಧವಾದ ಪಾಪಗಳಿಂದ ಕೂಡಿರುವರು. ಅವರೆಲ್ಲರೂ ಬಂದು, ನನ್ನ ನೀರಿನಲ್ಲಿ ಸ್ನಾನ ಮಾಡುವರು. ಅವರ ಪಾಪದಿಂದ ನನ್ನ ನೀರೆಲ್ಲವೂ ಕೆಟ್ಟು ಹೋಗುತ್ತದೆ. ಎಲೈ ಸ್ವಾಮಿಯೆ! ಆ ಪಾಪವು ಹೇಗೆ ನಾಶವಾಗುತ್ತದೆ?

|| ಪ್ರಾಚೀ ಮಾಧವ ಉವಾಚ ||

ಕಥಯಾಮಿ ನ ಸಂದೇಹೋ ಮಾ ಪುತ್ರಿ ರೋದನಂ ಕುರು |
ಶ್ಯಾಮೋ ವಟಸ್ತು ಮೇ ಸ್ಥಾನಂ ಪ್ರಾಚೀದೇವೀ ಮಮಾಗ್ರತಃ || ೨೯ ||

ವಹತೇ ಬ್ರಹ್ಮತನಯಾ ದೃಷ್ಟ್ವಾಗ್ರೇ ಚ ಸುರೇಶ್ವರೀ |
ಸ್ನಾನಂ ಕುರುಷ್ವ ನಿತ್ಯಂ ತ್ವಮತ್ರ ಪೂತಾ ಭವಿಷ್ಯಸಿ || ೩೦ ||

ಯತ್ರ ಬ್ರಹ್ಮಸುತಾ ಪ್ರಾಚೀ ತತ್ರಾಹಂ ನಾತ್ರ ಸಂಶಯಃ |
ತೀರ್ಥಕೋಟಿಶತೈರ್ಯುಕ್ತಃ ಸುರೈಸ್ಸಹ ವಸಾಮ್ಯಹಂ || ೩೧ ||

ಪವಿತ್ರಂ ಮತ್ಪ್ರಿಯಂ ಸ್ಥಾನಂ ಹತ್ಯಾಕೋಟಿವಿನಾಶನಂ |
ಸಂತುಷ್ಟೇನ ಮಯಾ ದತ್ತಂ ಯಸ್ಮಾತ್ಪ್ರಾಣಾಧಿಕಾಸಿ ಮೇ || ೩೨ ||

ತೀರ್ಥಕೋಟಿಸಹಸ್ರಾಣಿ ನಿತ್ಯಂ ತಿಷ್ಠಂತಿ ಜಾಹ್ನವಿ |
ಪ್ರಾಚೀ ಸರಸ್ವತೀ ತೋಯೇ ಸರ್ವದೈವ ಮಮಾಜ್ಞಯಾ || ೩೩ ||

---

೨೯. ಪ್ರಾಚೀ ಮಾಧವನು ಹೇಳಿದನು–ಎಲೈ ಪುತ್ರಿಯೇ! ದುಃಖಿಸಬೇಡ. ಅದಕ್ಕೆ ಹೇಳುತ್ತೇನೆ. ಆ ಶ್ಯಾಮವಟ (ಆಲದ ಮರ) ವೇ ನನ್ನ ಸ್ಥಾನವು. ಅಲ್ಲಿ ನನ್ನ ಎದುರಿಗೆ ಪ್ರಾಚೀದೇವಿಯು ಇದ್ದಾಳೆ.

೩೦. ಎಲೈ ಗಂಗೆಯೇ! ಅಲ್ಲಿಯೆ ನನ್ನ ಎದುರಿನಲ್ಲಿ, ಬ್ರಹ್ಮನ ಮಗಳಾದ ಸರಸ್ವತಿಯು ಹರಿಯುತ್ತಿದ್ದಾಳೆ. ಅದರಲ್ಲಿ ನಿತ್ಯವೂ ಸ್ನಾನಮಾಡಿದರೆ, ನೀನು ಪರಿಶುದ್ಧಳಾಗುತ್ತೀಯೆ.

೩೧. ಬ್ರಹ್ಮನ ಮಗಳಾದ, ಸರಸ್ವತಿಯು ಎಲ್ಲಿ ಪೂರ್ವಮುಖವಾಗಿ ಹರಿಯುತ್ತಾಳೆಯೋ, ಅಲ್ಲಿ ನಾನು ಅನೇಕ ತೀರ್ಥಗಳೊಡನೆಯೂ, ದೇವತೆಗಳೊಡನೆಯೂ ವಾಸಿಸುತ್ತೇನೆ, ಸಂಶಯವಿಲ್ಲ.

೩೨. ಅದು ಪವಿತ್ರವಾದುದು. ನನಗೆ ಪ್ರೀತಿಪಾತ್ರವಾದ ಸ್ಥಾನವು. ಕೋಟಿ ಬ್ರಹ್ಮಹತ್ಯೆಗಳನ್ನೂ ನಾಶಮಾಡುತ್ತದೆ. ನೀನು ನನಗೆ ಪ್ರಾಣಕ್ಕಿಂತಲೂ ಹೆಚ್ಚು ಪ್ರೀತಿಪಾತ್ರಳಾದ್ದರಿಂದ, ಸಂತೋಷದಿಂದ ನಿನಗೆ ನಾನು ಕೊಟ್ಟಿದ್ದೇನೆ.

೩೩. ಎಲೈ ಜಾಹ್ನವಿಯೇ! ಸಾವಿರಕೋಟಿ ತೀರ್ಥಗಳೂ, ನನ್ನ ಅಪ್ಪಣೆಯ ಮೇರೆಗೆ ಆ ಪ್ರಾಚೀ ಸರಸ್ವತಿಯು ತೀರದಲ್ಲಿ ಯಾವಾಗಲೂ ಇದ್ದುಕೊಂಡಿರುತ್ತವೆ.

ಬ್ರಹ್ಮವಧಾತ್ಸುರಾಪಾನಾದ್ಗೋವಧಾದ್ವೃಷಲೀವಧಾತ್ ।
ಬ್ರಹ್ಮದೇವಸ್ವಹರಣಾನ್ಮಾತಾಪಿತ್ರೋಸ್ತ್ವಪೂಜನಾತ್ ॥ ೩೪ ॥

ವಿಕ್ರಯಣಾದ್ಗುರುದ್ರೋಹಾದಭಕ್ಷ್ಯಸ್ಯ ಚ ಭಕ್ಷಣಾತ್ ।
ಸರ್ವಪಾಪಸ್ಯ ಕರಣಾತ್ ಪ್ರಾಚೀಬ್ರಹ್ಮಸುತಾ ಮುನೆ ॥ ೩೫ ॥

ವ್ಯಪೋಹಯತಿ ಚ ಪಾಪಾನಿ ಸಕೃತ್ ಸ್ನಾನೇನ ಮೇsಗ್ರತಃ ।
ಕುರುಸ್ನಾನಂ ಸರಿಚ್ಛ್ರೇಷ್ಠೇ ವಿಪಾಪಾ ತ್ವಂ ಭವಿಷ್ಯಸಿ ॥ ೩೬ ॥

॥ ಜಾಹ್ನವ್ಯುವಾಚ ॥

ನಾಹಂ ಶಕ್ನೋಮಿ ದೇವೇಶ ಆಗಸ್ತುಂ ನಿತ್ಯಮೇವ ಹಿ ।
ದೂರತರಂ ಚ ತತ್ತೀರ್ಥಂ ತತ್ರ ಗಂತುಂ ನ ಪಾರ್ಯತೇ ॥
ಕಥಂ ನಶ್ಯಂತಿ ಪಾಪಾನಿ ಕಥಯಸ್ವೇಹ ಮಾಧವ ॥ ೩೭ ॥

---

೩೪–೩೬. ಬ್ರಹ್ಮಹತ್ಯೆ, ಸುರಾಪಾನ, ಗೋವಧೆ, ವೃಷಲೀವಧೆ, ಬ್ರಾಹ್ಮಣರ ಸ್ವತ್ತನ್ನು ಕದಿಯುವಿಕೆ, ದೇವತೆಗಳ ಸ್ವತ್ತನ್ನು ಕದಿಯುವಿಕೆ, ತಾಯಿತಂದೆಗಳನ್ನು ಪೂಜಿಸದಿರುವುದು, ಮಾಡಬಾರದ್ದನ್ನು ಮಾಡುವುದು, ಗುರುದ್ರೋಹ, ತಿನ್ನಬಾರದುದನ್ನು ತಿನ್ನುವುದು, ಮತ್ತೆ ಯಾವ ಪಾಪವನ್ನೇ ಮಾಡಿರಲಿ, ಅವೆಲ್ಲವನ್ನೂ ಈ ಬ್ರಹ್ಮಸುತೆಯಾದ ಸರಸ್ವತಿಯು ಒಂದು ಬಾರಿಯ ಸ್ನಾನದಿಂದಲೇ ನಾಶ ಮಾಡುವಳು. ಎಲೈ ಗಂಗೆಯೇ ! ಅದರಲ್ಲಿ ಸ್ನಾನಮಾಡು ನೀನು ಪಾಪವನ್ನು ಕಳೆದುಕೊಳ್ಳುತ್ತೀಯೆ.

೩೭. ಜಾಹ್ನವಿಯು ಹೇಳಿದಳು–ಎಲೈ ಸ್ವಾಮಿಯೇ ! ನಾನು ಪ್ರತಿದಿನವೂ ಇಲ್ಲಿಗೆ ಬರಲಾಗುವುದಿಲ್ಲ. ಆ ತೀರ್ಥವು ಬಹುದೂರವಾಗಿರುವುದರಿಂದ ಸಾಧ್ಯವಾಗಲಾರದು. ಹೀಗಿರುವಲ್ಲಿ, ನನ್ನ ಪಾಪಗಳು ಹೇಗೆ ಹೋಗುತ್ತವೆ? ಎಂಬ ವಿಷಯವನ್ನು ದಯವಿಟ್ಟು ಹೇಳು.

|| ಪ್ರಾಚೀಮಾಧವ ಉವಾಚ ||

ನ ಶಕ್ನೋಷಿ ಯದಾ ಗನ್ತುಂ ನಿತ್ಯಮೇವ ಹಿ ಜಾಹ್ನವಿ ।
ತದಾನ್ಯತ್ಸಂಪ್ರವಕ್ಷ್ಯಾಮಿ ಯಸ್ಮಾನ್ಮತ್ಪಾದಸಂಭವಾ || ೩೮ ||

ಸರಸ್ವತ್ಯಧಿಕಾ ಯಾ ಚ ತೀರ್ಥಕೋಟಿಶತಾಧಿಕಾ ।
ಮಖಕೋಟ್ಯಧಿಕಾ ವಾಪಿ ವ್ರತದಾನಾಧಿಕಾ ಚ ಯಾ || ೩೯ ||

ಜಪಹೋಮಾಧಿಕಾ ಯಾ ಚ ಚತುರ್ವರ್ಗಫಲಪ್ರದಾ ।
ಸಾಂಖ್ಯಯೋಗಾಧಿಕಾ ಯಾ ಚ ತ್ರಿಸ್ಪೃಶಾ ಕ್ರಿಯತಾಂ ಶುಭೇ || ೪೦ ||

ಯಸ್ಮಿನ್ ಮಾಸೇ ಸಮಾಯಾತಿ ಸಿತಾ ಚ ಯದಿ ವಾಸಿತಾ ।
ಕರ್ತವ್ಯಾ ಸಾ ಸರಿಚ್ಛ್ರೇಷ್ಠೇ ಕೃತ್ವಾ ಪಾಪಾತ್ಪ್ರಮುಚ್ಯಸೇ || ೪೧ ||

|| ಜಾಹ್ನವ್ಯುವಾಚ ||

ಕೀದೃಶೀ ತ್ರಿಸ್ಪೃಶಾ ದೇವ ಮಮಾಚಕ್ಷ್ವ ಚ ಮಾಧವ ।
ಈದೃಶೋ ಮಹಿಮಾ ಯಸ್ಯಾಃ ತ್ವಯಾ ಪ್ರೋಕ್ತೋ ಮಮಧುನಾ||೪೨||

---

೩೮. ಪ್ರಾಚೀಮಾಧವನು ಹೇಳಿದನು–ಎಲೈ ದೇವಿಯೇ! ನಿನಗೆ ನಿತ್ಯವೂ ಅಲ್ಲಿಗೆ ಹೋಗುವುದಕ್ಕಾಗದಪಕ್ಷದಲ್ಲಿ, ಬೇರೆ ಮತ್ತೊಂದು ವಿಧಾನವನ್ನು ಹೇಳು ತ್ತೇನೆ. ನೀನು ನನ್ನ ಪಾದಗಳಿಂದ ಹುಟ್ಟಿದವಳಷ್ಟೆ!

೩೯–೪೦. ಎಲೈ ಜಾಹ್ನವಿಯೆ! ನಾನು ಹೇಳುವ ವಿಷಯವು ಸರಸ್ವತಿ ಗಿಂತಲೂ ಹೆಚ್ಚಿನದು. ಕೋಟಿ ತೀರ್ಥಗಳಿಗಿಂತಲೂ, ಅಧಿಕವಾದುದು. ಜಪ, ಹೋಮಗಳಿಗಿಂತಲೂ ಉನ್ನತವಾದುದು. ಧರ್ಮ, ಅರ್ಥ, ಕಾಮ, ಮೋಕ್ಷ ಗಳನ್ನು ಕೊಡತಕ್ಕದ್ದು. ಸಾಂಖ್ಯಶಾಸ್ತ್ರ, ಯೋಗಶಾಸ್ತ್ರಗಳಿಗಿಂತಲೂ ಅಧಿಕ ವಾದುದು. ಅದು ತ್ರಿಸ್ಪೃಶಾ ಎಂಬುದು. ಅದನ್ನು ಮಾಡು.

೪೧. ಆ ತ್ರಿಸ್ಪೃಶೆಯು ಯಾವ ತಿಂಗಳಲ್ಲಿ ಬೇಕಾದರೂ ಬರಲಿ. ಶುಕ್ಲ, ಕೃಷ್ಣ ಪಕ್ಷಗಳಲ್ಲಿ, ಯಾವುದರಲ್ಲಾದರೂ ಆಗಲಿ ಬಂದರೆ ಅದನ್ನು ಮಾಡಬೇಕು. ಹಾಗೆ ಮಾಡಿದರೆ ಪಾಪದಿಂದ ಮುಕ್ತನಾಗುತ್ತಾನೆ.

೪೨. ಜಾಹ್ನವಿಯು ಹೇಳಿದಳು– ಎಲೈ ಮಾಧವನೇ! ಬಹು ಹೆಚ್ಚಿನ ಮಹಿಮೆಯುಳ್ಳದ್ದೆಂದು ನೀನು ಹೇಳುತ್ತಿರುವ, ಆ ತ್ರಿಸ್ಪೃಶೆಯು ಯಾವರೀತಿ ಯಾದುದು? ನನಗೆ ಹೇಳು.

ದಶಮ್ಯೈಕಾದಶೀ ಭದ್ರಾ ದಿನ್ಯೈಕಸ್ಮಿನ್ ಯದಾ ಭವೇತ್ ।
ತ್ರಿಸ್ಪೃಶಾ ಸಾ ಭವೇದ್ದೇವ ಅನ್ಯಥಾ ವದ ಮೇ ಪ್ರಭೋ ॥ ೪೩ ॥

॥ ಕೃಷ್ಣ ಉವಾಚ ॥

ಆಸುರೀ ತ್ರಿಸ್ಪೃಶಾ ದೇವ ಯಾ ತ್ವಯಾ ಪರಿಕೀರ್ತಿತಾ ।
ವರ್ಜನೀಯಾ ಪ್ರಯತ್ನೇನ ವೃತ್ತಿಹೀನೋ ಯಥಾ ಪತಿಃ ॥ ೪೪ ॥

ಆಸುರಾಣಾಂ ತು ಸಾ ಪ್ರೋಕ್ತಾ ಆಯುರ್ಬಲವಿವರ್ಧಿನೀ ।
ವರ್ಜನೀಯಾ ಪ್ರಯತ್ನೇನ ಯಥಾ ನಾರೀ ರಜಸ್ವಲಾ ॥ ೪೫ ॥

ಯಥಾ ರಜಸ್ವಲಾ ಸಂಗಾದ್ದೂಷ್ಯಂತೇ ಜ್ಞಾನವರ್ತಿನಃ ।
ತಥೈವ ದಶಮೀಯುಕ್ತಂ ತದ್ದಿನಂ ದೂಷಿತಂ ನೃಣಾಂ ॥ ೪೬ ॥

---

೪೩. ದಶಮಿಯೊಡನೆ ಸೇರಿಕೊಂಡು ಏಕಾದಶಿಯೂ ದ್ವಾದಶಿಯೂ ಸೇರಿ ಬಂದರೆ, ತ್ರಿಸ್ಪೃಶೆಯೆನಿಸಿಕೊಳ್ಳುತ್ತದೆಂದು ನನಗೆ ತಿಳಿಯುತ್ತದೆ. ಬೇರೆ ರೀತಿ ಇದ್ದರೆ ದಯವಿಟ್ಟು ಹೇಳು.

೪೪. ಕೃಷ್ಣನು ಹೇಳಿದನು– ಎಲೈ ಜಾಹ್ನವಿಯೇ! ದಶಮಿಯಿಂದ ವಿದ್ಧವಾಗಿ ಏಕಾದಶಿಯು ಬಂದು, ಅದರ ಜೊತೆಗೆ ಒಂದೇದಿನದಲ್ಲಿ ದ್ವಾದಶಿಯು ಬಂದಿದ್ದರೆ ಅದು ತ್ರಿಸ್ಪೃಶೆ ಎಂದೆನಿಸಿಕೊಳ್ಳುತ್ತದೆ. ಆದರೆ ಅದು ಅಸುರ ಸಂಪತ್ತನ್ನು ಕೊಡತಕ್ಕದ್ದು. ಆದ್ದರಿಂದ ಅದನ್ನು ಜೀವನಕ್ಕೆ ತಂದುಹಾಕಲಾರದ ಯಜಮಾನನನ್ನು ಬಿಟ್ಟುಬಿಡುವಂತೆ ಬಿಟ್ಟುಬಿಡಬೇಕು.

೪೫. ಆ ತ್ರಿಸ್ಪೃಶೆಯು ಅಸುರರು ಮಾಡತಕ್ಕದ್ದು. ಅದು ಆಯುಸ್ಸು ಬಲಗಳನ್ನು ಹೆಚ್ಚಿಸುತ್ತದೆ. ಆ ತ್ರಿಸ್ಪೃಶೆಯನ್ನು, ಮುಟ್ಟಾದ ಹೆಂಗಸನು ದೂರವಾಗಿ ಬಿಟ್ಟುಬಿಡುವಂತೆ ಬಿಟ್ಟುಬಿಡಬೇಕು.

೪೬. ಜ್ಞಾನಿಗಳಾದವರು ಮುಟ್ಟಾದವರ ಸಹವಾಸದಿಂದ, ಪಾಪಿಗಳಾಗುವಂತೆ, ದಶಮಿಯಿಂದ ಕೂಡಿದ ಏಕಾದಶಿಯು ಮನುಷ್ಯರಿಗೆ ದೂಷಿತವಾದುದು.

**ಹತ್ಯಾಯುತಶತಂ ಹನ್ತಿ ತ್ರಿಸ್ಪೃಶಾ ಸಮುಪೋಷಿತಾ ।**
**ಏಕಾದಶೀ ದ್ವಾದಶೀ ಚ ರಾತ್ರಿಶೇಷೇ ತ್ರಯೋದಶೀ ॥ ೪೭ ॥**

**ತ್ರಿಸ್ಪೃಶಾ ಸಾ ತು ವಿಜ್ಞೇಯಾ ದಶಮೀ ಸಹಿತಾ ನ ಹಿ ।**
**ಕೃತ್ವಾಪರಾಧಂ ಮುಚ್ಯೇತ ಪ್ರಾಯಶ್ಚಿತ್ತೈರ್ವ್ರತೈರ್ನರಃ ॥ ೪೮ ॥**

**ದಶಮೀವೇಧಜಂ ದೋಷಂ ನ ಕ್ಷಮಾಮಿ ಸುರಾಪಗೇ ।**
**ಭುಕ್ತಂ ಹಾಲಾಹಲಂ ತೇನ ಸ್ವವಿಷ್ಠಾ ಭಕ್ಷಣಂ ಕೃತಂ ॥ ೪೯ ॥**

**ದಶಮೀ ಸಹಿತಂ ಯೇನ ಕೃತಮೇಕಾದಶೀವ್ರತಂ ।**
**ಇತಿ ಮತ್ವಾ ನ ಕರ್ತವ್ಯಂ ಮದ್ದಿನಂ ದಶಮೀಯುತಂ ॥ ೫೦ ॥**

**ಜನ್ಮಕೋಟಿಕೃತಂ ಪುಣ್ಯಂ ಸಂತಾನಂ ಯಾತಿ ಸಂಕ್ಷಯಂ ।**
**ಪಾತಯೇತ್ಸ್ವಕುಲಂ ಸ್ವರ್ಗಾತ್ ನಯತೇ ರೌರವಾದಿಕಂ ॥ ೫೧ ॥**

---

೪೭. ಏಕಾದಶಿ, ದ್ವಾದಶಿ, ತ್ರಯೋದಶಿಗಳು ಕೂಡಿದರೆ ಅದು ತ್ರಿಸ್ಪೃಶೆಯು. ಈ ತ್ರಿಸ್ಪೃಶೆಯ ಉಪವಾಸದಿಂದ, ಅನೇಕವಾದ ಬ್ರಹ್ಮಹತ್ಯೆಗಳು ಹೋಗುತ್ತವೆ.

೪೮. ದಶಮಿಯು ಶೇಷವಿರದೆ ಏಕಾದಶಿಯಿದ್ದು, ಅದರಮೇಲೆ ದ್ವಾದಶಿಯು ಬಂದು, ರಾತ್ರಿಯಲ್ಲಿ ತ್ರಯೋದಶಿಯು ಸೇರಿದರೆ, ಅದನ್ನು ತ್ರಿಸ್ಪೃಶೆಯೆಂದು ಕರೆಯಬೇಕು. ದಶಮಿಯೊಡನೆ ಕೂಡಿದುದು ತ್ರಿಸ್ಪೃಶೆಯಲ್ಲ. ಅದು ಆಸುರೀ ತ್ರಿಸ್ಪೃಶೆಯು. ಆದಿನ ಉಪವಾಸ ಮಾಡಿದರೆ ಪ್ರಾಯಶ್ಚಿತ್ತಗಳಿಂದ ಮನುಷ್ಯನು ಪಾಪಗಳನ್ನು ಕಳೆದುಕೊಂಡು ಪರಿಶುದ್ಧನಾಗುವನು.

೪೯–೫೦. ದಶಮಿಯು ವೇಧೆಯಿರುವ, ತ್ರಿಸ್ಪೃಶೆಯಾದ, ಏಕಾದಶಿಯ ದೋಷವನ್ನು ನಾನು ಸಹಿಸಲಾರೆ. ಆ ದಶಮಿವಿದ್ಧವಾದ ತ್ರಿಸ್ಪೃಶೆ ಏಕಾದಶಿಯನ್ನು ಆಚರಿಸಿದರೆ, ಅವನು ಹಾಲಾಹಲ ವಿಷವನ್ನೇ ಕುಡಿದಂತಾಗುವುದು. ತನ್ನ ಅಮೇಧ್ಯವನ್ನೇ ತಾನು ತಿಂದಂತಾಗುವುದು. ಆದ್ದರಿಂದ ದಶಮಿಯುಂದ ಕೂಡಿದ ಏಕಾದಶಿಯನ್ನು ಮಾಡಬಾರದು.

೫೧. ಹಾಗೆ ಮಾಡಿದರೆ ಕೋಟಿಜನ್ಮದಲ್ಲಿ ಮಾಡಿದ ಪುಣ್ಯವೆಲ್ಲವೂ ಹೋಗುತ್ತವೆ. ವಂಶವು ನಾಶವಾಗುತ್ತದೆ. ತನ್ನವರು ಸ್ವರ್ಗದಿಂದ ಬಿದ್ದು ರೌರವಾದಿ ನರಕಕ್ಕೆ ಹೋಗುತ್ತಾರೆ.

ಸ್ವದೇಹಂ ಶೋಧಯಿತ್ವಾ ತು ಕರ್ತವ್ಯೋ ಮಮ ವಾಸರಃ ।
ವೃದ್ಧೌ ತ್ಯಾಜ್ಯಾ ವಿನಾ ವೇಧಾಚ್ಛ್ರವಣಾದಿಷು ಸಂಯುತಾ ॥ ೫೨ ॥

ಜನ್ಮಪುಣ್ಯಂ ಕ್ಷಯಂ ಯಾತಿ ಏಕಾದಶ್ಯುಪವಾಸಿನಾಂ ।
ಸಂವೃದ್ಧೌ ಚ ವಿಶೇಷೇಣ ಸಂದೇಹೇ ಸಮುಪಸ್ಥಿತೇ ।
ಮಮಾಜ್ಞಯಾ ಚ ಕರ್ತವ್ಯಾ ದ್ವಾದಶೀ ವಲ್ಲಭಾ ಮಮ ॥ ೫೩ ॥

॥ ಜಾಹ್ನವ್ಯುವಾಚ ॥

ಕರಿಷ್ಯೇಽಹಂ ಜಗನ್ನಾಥ ತ್ರಿಸ್ಪೃಶಾಂ ವಚನಾತ್ತವ ।
ಸರ್ವಪಾಪವಿನಿರ್ಮುಕ್ತಾ ಭವಿಷ್ಯಾಮಿ ತವಾಜ್ಞಯಾ ॥ ೫೪ ॥

॥ ಕೃಷ್ಣ ಉವಾಚ ॥

ಸ್ವಸ್ಥಾನಂ ಗಚ್ಛ ಭದ್ರಂ ತೇ ನ ಭೀಃ ಕಾರ್ಯಾ ಕದಾಚನ ।
ತವ ದೇವಿ ಸರಿಚ್ಛ್ರೇಷ್ಠೇ ನ ಪಾಪಂ ಸಂಕ್ರಮಿಷ್ಯತಿ ॥ ೫೫ ॥

---

೫೨–೫೩. ಹೊಟ್ಟೆಯೊಳಗೆ ಆಹಾರದ ಭಾಗವಿಲ್ಲದಿರುವಂತೆಯೂ, ಪಂಚಗವ್ಯದಿಂದಲೂ ದೇಹವನ್ನು ಶುದ್ಧಿಮಾಡಿಕೊಂಡು ಏಕಾದಶಿಯ ಉಪವಾಸವನ್ನು ಮಾಡಬೇಕು. ಏಕಾದಶಿಯು ವೃದ್ಧಿಯಾಗಿರುವ ಪಕ್ಷದಲ್ಲಿ ವೇಧೆಯೆಂಬ ದೋಷದಿಂದ ಆ ಏಕಾದಶಿಯು ಕೂಡಿಲ್ಲದೆ ಇದ್ದರೂ ಶ್ರವಣವೇ ಮುಂತಾದ ಗುಣಗಳಿಂದ ಕೂಡಿಕೊಂಡಿದ್ದರೂ ಆ ಏಕಾದಶಿಯ ಉಪವಾಸವನ್ನು ಮಾಡಬಾರದು. ಹಾಗೆ ಉಪವಾಸಮಾಡಿದರೆ ಆ ಜನ್ಮದಲ್ಲಿ ಮಾಡಿದ ಪುಣ್ಯವೆಲ್ಲವೂ ನಾಶವಾಗುತ್ತದೆ. ಸಂವೃದ್ಧಿ ಪಕ್ಷದಲ್ಲಿಯೂ ಅದನ್ನು ಬಿಡಬೇಕೆಂಬುದು ಸ್ವತಸ್ಸಿದ್ಧವಾದ ವಿಷಯ. ಆ ಸಂವೃದ್ಧಿ ಪಕ್ಷದಲ್ಲಿ ಗಳಿಗೆಗಳ ವ್ಯತ್ಯಾಸದಿಂದ ಸಂದೇಹ ಬಂದರೆ ದ್ವಾದಶಿಯ ದಿವಸ ಉಪವಾಸ ಮಾಡಬೇಕು. ಅದೇ ನನಗೆ ಇಷ್ಟವಾದುದು.

೫೪. ಜಾಹ್ನವಿಯು ಹೇಳಿದಳು–ಎಲೈ ಜಗನ್ನಾಥನೆ! ನಿನ್ನ ಅಪ್ಪಣೆಯಂತೆ ಈ ತ್ರಿಸ್ಪೃಶೆ ಏಕಾದಶಿಯನ್ನು ಆಚರಿಸುತ್ತೇನೆ. ಎಲ್ಲಾ ಪಾಪಗಳನ್ನೂ ಕಳೆದುಕೊಳ್ಳುತ್ತೇನೆ.

೫೫. ಕೃಷ್ಣನು ಹೇಳಿದನು–ಎಲೈ ಜಾಹ್ನವಿಯೆ! ನಿನ್ನ ಜಾಗಕ್ಕೆ ಹೋಗು. ನಿನಗೆ ಮಂಗಳವಾಗಲಿ, ಹೆದರಬೇಡ. ನದಿಗಳಲ್ಲಿ ಶ್ರೇಷ್ಠಳಾದ ನಿನಗೆ ಪಾಪವು ಬರುವುದಿಲ್ಲ.

ಸ್ನಾತ್ವಾ ಸರಸ್ವತೀತೋಯೇ ಹ್ಯರ್ಚಯಿತ್ವಾ ಚ ಮಾಧವಂ ।
ಪ್ರಣಮಂತಿ ಜಗನ್ನಾಥಂ ತೇ ಯಾಂತಿ ಪರಮಾಂ ಗತಿಂ || ೫೬ ||

॥ ಜಾಹ್ನವ್ಯುವಾಚ ॥

ವಿಧಾನಂ ಬ್ರೂಹಿ ಮೇ ಬ್ರಹ್ಮನ್ ಸರ್ವಸ್ವೇನ ಕರೋಮ್ಯಹಂ ।
ಪ್ರಸಾದಯಾಮಿ ದೇವೇಶಂ ದಾಮೋದರಮನಾಮಯಂ || ೫೭ ||

॥ ಪ್ರಾಚೀಮಾಧವ ಉವಾಚ ॥

ಶೃಣು ದೇವಿ ಪ್ರವಕ್ಷ್ಯಾಮಿ ತ್ರಿಸ್ಪೃಶಾಯಾ ವಿದಾನಕಂ ;
ಯಚ್ಛ್ರುತ್ವಾಪಿ ಸರಿಚ್ಛ್ರೇಷ್ಠೇ ಮುಚ್ಯತೇ ಪಾತಕೈರ್ನರಃ || ೫೮ ||

ಪಲೇನ ಚ ಪಲಾರ್ಧೇನ ತದರ್ಧೇನಾಪಿ ಪಾಪಗೇ ।
ಪ್ರತಿಮಾ ಮಮ ಸೌವರ್ಣೀ ಕಾರ್ಯಾ ವಿಭವಸಾರತಃ || ೫೯ ||

---

೫೬. ಸರಸ್ವತಿಯಲ್ಲಿ ಸ್ನಾನಮಾಡಿ ಮಾಧವನನ್ನು ಪೂಜಿಸಿ, ಜಗನ್ನಾಥನಿಗೆ ನಮಸ್ಕರಿಸಿದರೆ ಅವರು ಉತ್ತಮಗತಿಯನ್ನು ಹೊಂದುತ್ತಾರೆ.

೫೭. ಜಾಹ್ನವಿಯು ಹೇಳಿದಳು– ಎಲೈ ಸ್ವಾಮಿಯೆ! ಆ ತ್ರಿಸ್ಪೃಶೆಯ ವಿಧಾನವನ್ನು ಹೇಳು. ನಾನು ಎಲ್ಲಾ ವಿಧದಿಂದಲೂ ಪ್ರಯತ್ನಪಟ್ಟು ಮಾಡುವೆನು. ಉತ್ತಮೋತ್ತಮನಾದ ದೇವೇಶನಾದ ದಾಮೋದರನನ್ನು ತೃಪ್ತಿಪಡಿಸುತ್ತೇನೆ.

೫೮. ಪ್ರಾಚೀ ಮಾಧವನು ಹೇಳಿದನು–ಎಲೈ ಜಾಹ್ನವಿಯೇ! ಈ ತ್ರಿಸ್ಪೃಶೆಯ ವಿಧಾನವನ್ನು ಹೇಳುತ್ತೇನೆ. ಕೇಳು. ಇದನ್ನು ಕೇಳುವುದರಿಂದಲೂ ಕೂಡ ಮನುಷ್ಯನ ಪಾಪಗಳು ಹೋಗುತ್ತವೆ.

೫೯. ಎಲೈ ಜಾಹ್ನವಿಯೇ! ಒಂದು ಪಲ, ಅಥವಾ ಅರ್ಧಪಲ, ಅದೂ ಆಗದಿದ್ದರೆ, ಕಾಲುಪಲ ಚಿನ್ನದಿಂದ, ಕೊನೆಗೆ ತನ್ನ ಯೋಗ್ಯತೆಯಿದ್ದಷ್ಟರಿಂದ ಪ್ರಾಚೀಮಾಧವನ ವಿಗ್ರಹವನ್ನು ಮಾಡಿಸಬೇಕು.

ಪಾತ್ರಂ ತಾಮ್ರಮಯಂ ಕಾರ್ಯಂ ತಿಲೈಸ್ತು ಪರಿಪೂರಿತಂ ।
ಸಜಲಂ ತು ಘಟಂ ಶುಭ್ರಂ ಪಂಚರತ್ನಸಮನ್ವಿತಂ ॥ ೬೦ ॥

ವೇಷ್ಟಿತಂ ಪುಷ್ಪಮಾಲಾಭಿಃ ಕರ್ಪೂರಾದಿಸುವಾಸಿತಂ ।
ನ್ಯಸೇದ್ದಾಮೋದರಂ ಪಶ್ಚಾತ್ ಸ್ಥಾಪಯಿತ್ವಾ ವಿಲಿಪ್ಯ ಚ ॥ ೬೧ ॥

ಪರಿಧಾನಂ ತತಃ ಕಾರ್ಯಂ ಪುರಾಣೈಸ್ಸಮುದೀರಿತೈಃ ।
ಪುಷ್ಪೈಃ ಕಾಲೋದ್ಭವೈಃ ಶುಭ್ರೈಃ ತುಲಸೀ ಪತ್ರಕೋಮಲೈಃ ॥ ೬೨ ॥

ಛತ್ರಂ ತು ವಿಷ್ಣವೇ ದದ್ಯಾತ್ ಪಾದುಕಾಭ್ಯಾಂ ಸುಸಂಯುತಂ ।
ನೈವೇದ್ಯಾನಿ ಮನೋಜ್ಞಾನಿ ಫಲಾನಿ ಸುಬಹೂನ್ಯಪಿ ॥ ೬೩ ॥

---

೬೦. ಒಂದು ತಾಮ್ರದ ಪಾತ್ರೆಯನ್ನು ಮಾಡಿಸಿ, ಅದರ ತುಂಬ ಎಳ್ಳನ್ನು ತುಂಬಬೇಕು. ಒಂದು ಬಿಂದಿಗೆಯನ್ನು ಮಾಡಿಸಿ, ಅದರಲ್ಲಿ ನೀರನ್ನು ತುಂಬಿ, ಅದಕ್ಕೆ ಪಂಚರತ್ನಗಳನ್ನು ಹಾಕಬೇಕು.

೬೧. ಆ ಕಲಶಕ್ಕೆ ಹೂಮಾಲೆಯನ್ನು ಕಟ್ಟಿ, ಅಲಂಕರಿಸಬೇಕು. ಪಚ್ಚ ಕರ್ಪೂರ, ಮುಂತಾದ ಸುವಾಸನೆ ದ್ರವ್ಯಗಳಿಂದ, ಸುವಾಸನೆ ಬರುವಂತೆ ಮಾಡಿರಬೇಕು. ಅನಂತರ ದಾಮೋದರ ದೇವರನ್ನು ಸ್ನಾನಮಾಡಿಸಿ ಸುವಾಸನೆ ಗಂಧವನ್ನು ಬಳಿಯಬೇಕು. ಆ ದೇವರನ್ನು ಆ ಕಲಶದ ಮೇಲಿಟ್ಟಿರುವ ಸಣ್ಣ ಪಾತ್ರೆಯಲ್ಲಿ ಇಡಬೇಕು.

೬೨–೬೩. ಪುರಾಣ ಮಂತ್ರಗಳಿಂದ ವಸ್ತ್ರಗಳನ್ನು ಹೊದಿಸಬೇಕು. ಮತ್ತು ಆಯಾಕಾಲದಲ್ಲಿ ಹುಟ್ಟುವ ಹೂಗಳಿಂದಲೂ ತುಳಸಿ ದಳಗಳಿಂದಲೂ ಸಮರ್ಪಿಸಬೇಕು. ಪೂಜಿಸಬೇಕು. ಅನಂತರ ವಿಷ್ಣುವಿಗೆ ಛತ್ರಿ ಪಾದುಕೆಗಳನ್ನೂ, ಚೆನ್ನಾಗಿರುವ ನೈವೇದ್ಯಗಳನ್ನೂ, ಅನೇಕ ಬಗೆಯಾದ, ಹಣ್ಣುಗಳನ್ನೂ ಸಮರ್ಪಿಸಬೇಕು.

ಉಪವೀತಂ ತು ದಾತವ್ಯಂ ಸೋತ್ತರೀಯಂ ನವಂ ದೃಢಂ ।
ವೈಷ್ಣವಂ ದಾಪಯೇದ್ದಂಡಂ ಸುರೂಪಂ ಸೋನ್ನತಂ ಶುಭಂ ॥ ೬೪ ॥

ದಾಮೋದರಾಯ ವೈ ಪಾದೌ ಜಾನುನೀ ಮಾಧವಾಯ ಚ ।
ಗುಹ್ಯಂ ಕಾಮಪ್ರದಾಯೇತಿ ಕಟಿಂ ವಾಮನಮೂರ್ತಯೇ ॥ ೬೫ ॥

ಪದ್ಮನಾಭಾಯ ನಾಭಿಂ ತು ಜಠರಂ ವಿಶ್ವಮೂರ್ತಯೇ ।
ಹೃದಯಂ ಜ್ಞಾನಗಮ್ಯಾಯ ಕಂಠಂ ವೈಕುಂಠಗಾಮಿನೇ ॥ ೬೬ ॥

ಸಹಸ್ರಬಾಹುವೇ ಬಾಹುಂ ಚಕ್ಷುಷೀ ಯೋಗರೂಪಿಣೇ ।
ಸಹಸ್ರಶೀರ್ಷಾಯ ಶಿರಸಿ ಸರ್ವಾಂಗಂ ಮಾಧವಾಯ ಚ ॥ ೬೭ ॥

ಸಂಪೂಜ್ಯ ವಿಧಿವದ್ಭಕ್ತ್ಯಾ ದದ್ಯಾದರ್ಘ್ಯಂ ವಿಧಾನತಃ ।
ಶುಭ್ರೇಣ ನಾರಿಕೇಳೇನ ಶಂಖೋಪರಿಸ್ಥಿತೇನ ಹಿ ॥ ೬೮ ॥

---

೬೪. ಅನಂತರ ಉಪವೀತ (ಜನಿವಾರ) ಹೊದೆಯುವ ಬಟ್ಟೆಗಳನ್ನು ಸಮರ್ಪಿಸಬೇಕು. ಚೆನ್ನಾಗಿರುವ ಶುಭಕರವಾದ ಉದ್ದವಾದ ಕೋಲನ್ನು ಕೊಡಬೇಕು.

೬೫–೬೭. ದಾಮೋದರನಿಗೆ ನಮಸ್ಕಾರವು ಎಂದು ಪಾದಗಳನ್ನೂ, ಮಾಧವನಿಗೆ ನಮಸ್ಕಾರವು ಎಂದು ಮಂಡಿಗಳನ್ನೂ, ಕಾಮಪ್ರದನಿಗೆ ನಮಸ್ಕಾರವು ಎಂದು ಗುಹ್ಯಪ್ರದೇಶವನ್ನೂ, ವಾಮನಮೂರ್ತಿಗೆ ನಮಸ್ಕಾರವು ಎಂದು ಸೊಂಟ ವನ್ನೂ, ಪದ್ಮನಾಭನಿಗೆ ನಮಸ್ಕಾರವು ಎಂದು ನಾಭಿ (ಹೊಕ್ಕುಳು) ಯನ್ನೂ, ವಿಶ್ವಮೂರ್ತಿಗೆ ನಮಸ್ಕಾರವು ಎಂದು ಹೊಟ್ಟೆಯನ್ನೂ, ಜ್ಞಾನಗಮ್ಯನಿಗೆ ನಮ ಸ್ಕಾರವು ಎಂದು ಹೃದಯವನ್ನೂ, ವೈಕುಂಠಗಾಮಿಗೆ ನಮಸ್ಕಾರವು ಎಂದು ಕಂಠವನ್ನೂ, ಸಹಸ್ರಬಾಹುವಿಗೆ ನಮಸ್ಕಾರವು ಎಂದು ತೋಳುಗಳನ್ನೂ, ಯೋಗರೂಪಿಗೆ ನಮಸ್ಕಾರವು ಎಂದು ಕಣ್ಣುಗಳನ್ನೂ, ಸಹಸ್ರ ಶಿರಸ್ಸುಳ್ಳವನಿಗೆ ನಮಸ್ಕಾರವು ಎಂದು ತಲೆಯನ್ನೂ, ಮಾಧವನಿಗೆ ನಮಸ್ಕಾರವು ಎಂದು ಸರ್ವಾಂಗ ಗಳನ್ನೂ ಪೂಜಿಸಬೇಕು.

೬೮. ಈ ರೀತಿಯಾಗಿ, ಭಕ್ತಿಯಿಂದ ಪೂಜಿಸಿ, ಒಳ್ಳೆಯ ಎಳನೀರನ್ನು ಶಂಖದಲ್ಲಿ ಬಿಟ್ಟುಕೊಂಡು ಅದರಿಂದ ವಿಧಿವತ್ತಾಗಿ ಅರ್ಘ್ಯವನ್ನು ಕೊಡಬೇಕು.

ಸೂತ್ರೇಣ ವೇಷ್ಟಿತೇನೈವ ಹಸ್ತಯೋರುಭಯೋರಪಿ ।
ಸ್ಮೃತೋ ಹರಸಿ ಪಾಪಾನಿ ಯದಿ ನಿತ್ಯಂ ಜನಾರ್ದನ ॥ ೭೯ ॥

ದುಸ್ವಪ್ನಂ ದುರ್ನಿಮಿತ್ತಾನಿ ಮನಸಾ ದುರ್ವಿಚಿಂತಿತಂ ।
ನಾರಕಂ ತು ಭಯಂ ದೇವ ಭಯಂ ದುರ್ಗತಿ ಸಂಭವಂ ॥ ೨೦ ॥

ಯನ್ಮಮ ಸ್ಯಾನ್ಮಹಾದೇವ ಐಹಿಕಂ ಪಾರಲೌಕಿಕಂ ।
ತೇನ ದೇವೇಶ ಮಾಂ ರಕ್ಷ ಗೃಹಾಣಾರ್ಘ್ಯಂ ನಮೋಸ್ತು ತೇ ॥ ೨೧ ॥

ಸದಾ ಭಕ್ತಿರ್ಮಮೈವಾಸ್ತು ದಾಮೋದರ ತವೋಪರಿ ।
ಧೂಪಂ ದೀಪಂ ಚ ನೈವೇದ್ಯಂ ಕುರ್ಯಾನ್ನೀರಾಜನಂ ತತಃ ॥ ೨೨ ॥

ಶಿರೋಪರಿ ಸರಿಚ್ಛ್ರೇಷ್ಠೇ ಭ್ರಾಮಯೇದ್ವಾರಿಜಂ ಹರೇಃ ।
ಕೃತ್ವಾ ವಿಧಾನಮೇತದ್ಧಿ ಪೂಜಯೇತ್ಸದ್ಗುರುಂ ತತಃ ॥ ೨೩ ॥

---

೭೯–೨೧. ಎರಡು ಕೈಗಳಿಂದಲೂ ಶಂಖವನ್ನು ಹಿಡಿದುಕೊಂಡು ಅದರ ಮೇಲೆ ತೆಂಗಿನಕಾಯನ್ನಿಡಬೇಕು. ಅ ಫಲವಿರುವಾಗಲೇ ಕೈಗಳೆರಡಕ್ಕೂ ದಾರವನ್ನು ಕಟ್ಟಿಸಿಕೊಳ್ಳಬೇಕು. ಎಲೈ ಜನಾರ್ದನನೇ! ನಿನ್ನನ್ನು ಜ್ಞಾಪಿಸಿ ಕೊಂಡರೇನೆ ಎಲ್ಲಾ ಪಾಪಗಳೂ ಹೋಗುತ್ತವೆ. ದುಸ್ವಪ್ನ, ದುರ್ನಿಮಿತ್ತ ಮನಸ್ಸಿನ ದುರ್ಯೋಚನೆಗಳು ಇವೆಲ್ಲವೂ ಹೋಗುತ್ತವೆ. ನರಕದ ಭಯ ಕೆಟ್ಟ ಸ್ಥಿತಿಯ ಭಯ ಇನ್ನೂ ಇತರ ಪಾಪಗಳು ಯಾವುವುಂಟೋ, ಅವೆಲ್ಲವೂ ಕೂಡ ನಾಶವಾಗಲಿ. ಅದರಿಂದ ಸ್ವಾಮಿಯೇ ನನ್ನನ್ನು ಕಾಪಾಡು. ಈ ಅರ್ಘ್ಯವನ್ನು ತೆಗೆದುಕೊ.

೨೨. ಎಲೈ ದಾಮೋದರನೆ! ನನ್ನಮೇಲೆ ಭಕ್ತಿಯು, ಯಾವಾಗಲೂ ಇರಲಿ, ಎಂದು ಪ್ರಾರ್ಥಿಸಬೇಕು. ಆಮೇಲೆ ಧೂಪ, ದೀಪ, ನೈವೇದ್ಯಗಳನ್ನು ಮಾಡಿ ಮಂಗಳಾರತಿಯನ್ನು ಬೆಳಗಬೇಕು.

೨೩. ಎಲೈ ಗಂಗೆಯೆ! ಆ ಸ್ವಾಮಿಯ ತಲೆಯ ಮೇಲೆ, ಶಂಖವನ್ನು ಸುತ್ತಿಸಬೇಕು. ಈ ರೀತಿಮಾಡಿ ಅನಂತರ ಗುರುಪೂಜೆ ಮಾಡಬೇಕು.

ದದ್ಯಾದ್ವಸ್ತ್ರಾಣಿ ಶುಭ್ರಾಣಿ ಸೋಷ್ಣೀಷಂ ಚೈವ ಕಂಚುಕಂ |
ಉಪಾನಹಾ ತು ಛತ್ರಂ ತು ಮುದ್ರಿಕಾಂ ಚ ಕಮಂಡಲುಂ || ೭೪ ||

ಭೋಜನಂ ಚೈವ ತಾಂಬೂಲಂ ಸಪ್ತಧಾನ್ಯಂ ಚ ದಕ್ಷಿಣಾಂ |
ಗುರುಂ ಸಂಪೂಜ್ಯ ದೇವೇಶಂ ಕುರ್ಯಾಜ್ಜಾಗರಣಂ ಹರೇಃ || ೭೫ ||

ಗೀತನೃತ್ಯಸಮಾಯುಕ್ತಮುಪಚಾರಸಮನ್ವಿತಂ ।
ತೋ ನಿಶಾಂತೇ ದೇವಾಯ ದತ್ವಾ ಚಾರ್ಘ್ಯಂ ವಿಧಾನತಃ ||
ಸ್ನಾನಾದಿಕಾಂ ಕ್ರಿಯಾಂ ಕೃತ್ವಾ ಭುಂಜೀಯಾದ್ಬ್ರಾಹ್ಮಣೈಸ್ಸಹ || ೭೬ ||

|| ಮಹಾದೇವ ಉವಾಚ ||

ದ್ವಿಜ್ಯೈತತ್ತ್ರಿಸ್ಪೃಶಾಖ್ಯಾನಮದ್ಭುತಂ ರೋಮಹರ್ಷಣಂ |
ಶ್ರುತ್ವಾ ತು ಲಭತೇ ಪುಣ್ಯಂ ಗಂಗಾತೀರ್ಥಫಲಂ ಲಭೇತ್ || ೭೭ ||

---

೭೪–೭೫. ಆ ಗುರುವಿಗೆ ಬಟ್ಟೆಗಳು, ರುಮಾಲು, ಅಂಗಿ, ಕೆರ, ಛತ್ರಿ, ಉಂಗುರ, ಕಮಂಡಲುಗಳನ್ನು ಕೊಟ್ಟು ಚೆನ್ನಾಗಿ ಊಟಮಾಡಿಸಬೇಕು. ಅನಂತರ ಸಪ್ತಧಾನ್ಯಗಳು, ದಕ್ಷಿಣೆ ತಾಂಬೂಲಗಳನ್ನು ಕೊಡಬೇಕು. ಈರೀತಿ ಗುರುವನ್ನೂ, ದೇವರನ್ನೂ ಪೂಜಿಸಿ ಆಮೇಲೆ ಜಾಗರಣೆ ಮಾಡಬೇಕು.

೭೬. ಆ ಜಾಗರಣ ಮಾಡುವಾಗ ಗೀತ, ನೃತ್ಯ ಮುಂತಾದ ಉಪಚಾರಗಳನ್ನು ಮಾಡಬೇಕು. ಆಮೇಲೆ ಬೆಳಗಾಗುತ್ತಿರುವಾಗ, ಸ್ವಾಮಿಗೆ ಮತ್ತೆ ಅರ್ಘ್ಯವನ್ನು ಕೊಟ್ಟು ಸ್ನಾನಾದಿಗಳನ್ನು ಮಾಡಿ, ಬ್ರಾಹ್ಮಣರೊಡನೆ ಊಟ ಮಾಡಬೇಕು.

೭೭. ಮಹಾದೇವನು ಹೇಳಿದನು– ಎಲೈ ನಾರದನೆ! ಈ ತ್ರಿಸ್ಪೃಶಾಖ್ಯಾನವು ಅದ್ಭುತವೂ, ರೋಮಾಂಚ ಬರುವಂತೆ ಮಾಡತಕ್ಕದ್ದೂ ಆಗಿರುವುದು. ಇದನ್ನು ಕೇಳಿದರೆ ಪುಣ್ಯವನ್ನು ಹೊಂದುತ್ತಾನಲ್ಲದೆ, ಗಂಗೆಯ ತೀರ್ಥದಲ್ಲಿ ಸ್ನಾನ ಮಾಡಿದ ಪುಣ್ಯಫಲವನ್ನೂ ಹೊಂದುತ್ತಾನೆ.

ಅಶ್ವಮೇಧಸಹಸ್ರಾಣಿ ವಾಜಪೇಯಶತಾನಿ ಚ ।
ತತ್ಫಲಂ ಸಮವಾಪ್ನೋತಿ ತ್ರಿಸ್ಪೃಶಾಸಮುಪೋಷಣಾತ್ ॥ ೭೮ ॥

ಪಿತೃಪಕ್ಷೋ ಮಾತೃಪಕ್ಷಃ ತಥಾ ಚೈವಾನ್ಯಪಕ್ಷಕಃ ।
ತೈಸ್ಸರ್ವೈಃ ಸಹ ಸಂಭುಕ್ತೋ ವಿಷ್ಣುಲೋಕೇ ಮಹೀಯತೇ ॥ ೭೯ ॥

ತೀರ್ಥಕೋಟಿಷು ಯತ್ಪುಣ್ಯಂ ಮೋಕ್ಷಕೋಟಿಷು ಯತ್ಫಲಂ ।
ತತ್ಫಲಂ ಸಮವಾಪ್ನೋತಿ ತ್ರಿಸ್ಪೃಶಾಸಮುಪೋಷಣಾತ್ ॥ ೮೦ ॥

ಬ್ರಾಹ್ಮಣಾ ಯೇಽಪಿ ಕುರ್ವನ್ತಿ ಕ್ಷತ್ರಿಯಾಃ ಕೃಷ್ಣಮಾನಸಾಃ ।
ವೈಶ್ಯಾ ವಾ ಶೂದ್ರಜಾ ವಾಪಿ ಯೇ ತಥಾ ಚಾನ್ಯ ಜಾತಯಃ ॥ ೮೧ ॥

ತೇ ಸರ್ವೇ ಮುಕ್ತಿಮಾಯಾನ್ತಿ ಭುವಂ ತ್ಯಕ್ತ್ವಾ ದ್ವಿಜೋತ್ತಮ ।
ಮಂತ್ರಾಣಾಂ ಮಂತ್ರರಾಜೋಽಯಂ ದಶಾಕ್ಷರ ಇತಿಸ್ಮೃತಃ ॥ ೮೨ ॥

---

೭೮. ಈ ತ್ರಿಸ್ಪೃಶಾ ಏಕಾದಶಿಯ ದಿವಸ ಉಪವಾಸ ಮಾಡಿದರೆ, ಸಾವಿರ ಅಶ್ವಮೇಧ ಯಾಗಗಳ ಫಲವನ್ನೂ, ನೂರು ವಾಜಪೇಯ ಯಾಗಗಳ ಫಲವನ್ನೂ ಹೊಂದುತ್ತಾನೆ.

೭೯. ತಂದೆಯ ಕಡೆಯವರು, ತಾಯಿಯ ಕಡೆಯವರು, ಹೆಂಡತಿಯ ಕಡೆಯವರು ಇವರೊಡನೆ ಸುಖವನ್ನು ಅನುಭವಿಸಿ ವಿಷ್ಣುಲೋಕದಲ್ಲಿಯೂ ಸುಖವನ್ನು ಅನುಭವಿಸುತ್ತಾನೆ.

೮೦. ಈ ತ್ರಿಸ್ಪೃಶೆಯಲ್ಲಿ ಉಪವಾಸ ಮಾಡುವುದರಿಂದ, ಕೋಟಿ ತೀರ್ಥಗಳ ಪುಣ್ಯವೂ, ಕೋಟಿ ಮೋಕ್ಷಗಳ ಫಲವೂ ಬರುತ್ತದೆ.

೮೧–೮೨. ವಿಷ್ಣುವಿನಲ್ಲಿ ಭಕ್ತಿಯುಳ್ಳವರಾಗಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಇನ್ನೂ ಇತರ ಸಂಕರಜಾತಿಯವರು ಯಾರು ಮಾಡುತ್ತಾರೋ ಅವರೆಲ್ಲರೂ ಸತ್ತಮೇಲೆ ಮುಕ್ತಿಯನ್ನು ಹೊಂದುತ್ತಾರೆ. ದಶಾಕ್ಷರಿ ಮಂತ್ರವು ಮಂತ್ರಕ್ಕೆಲ್ಲಾ ರಾಜನು. ಅದರಂತೆ ವ್ರತಗಳಿಗೆಲ್ಲಾ ಈ ತ್ರಿಸ್ಪೃಶೆಯು ವ್ರತರಾಜನು ಎಂಬುದಾಗಿ ಸ್ವಾಮಿಯು ನಿರ್ಮಿಸಿರುವನು. ಮೊದಲು ಈ ತ್ರಿಸ್ಪೃಶೆಯನ್ನು

**ವ್ರತಾನಾಂ ಚ ತಥಾ ಚೈಷಾ ಯೇನ ವೈ ತ್ರಿಸ್ಪೃಶಾ ಕೃತಾ ।**
**ಬ್ರಹ್ಮಣಾ ಚ ಕೃತಾ ಪೂರ್ವಂ ಪಶ್ಚಾನ್ಮಾನರ್ಷಿಭಿಃ ಕೃತಾ ॥**
**ಅನ್ಯೇಷಾಂ ಕಾ ಕಥಾ ವತ್ಸ ತ್ರಿಸ್ಪೃಶಾ ಮುಕ್ತಿದಾಯಿನೀ ॥ ೮೩ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಪತಿ ನಾರದ ಸಂವಾದೇ ತ್ರಿಸ್ಪೃಶಾಖ್ಯಾನಂನಾಮ ಪಂಚತ್ರಿಂಶೋಽಧ್ಯಾಯಸ್ಸಮಾಪ್ತಃ**

---

ಬ್ರಹ್ಮನು ಮಾಡಿದನು. ಅನಂತರ ಅನೇಕ ಋಷಿಗಳು ಮಾಡಿದರು. ಉಳಿದವರೂ ಮಾಡಿದರು ಎಂಬುದನ್ನು ಹೇಳತಕ್ಕದ್ದೇನಿರುವುದು ? ಈ ರೀತಿಯಾಗಿ ತ್ರಿಸ್ಪೃಶೆಯು ಮುಕ್ತಿಯನ್ನು ಕೊಡುತ್ತದೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಪತಿ ನಾರದರ ಸಂವಾದದಲ್ಲಿ ತ್ರಿಸ್ಪೃಶಾಖ್ಯಾನವೆಂಬ ಮೂವತ್ತೈದನೆಯ ಅಧ್ಯಾಯವು ಮುಗಿದುದು



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಷಟ್‌ತ್ರಿಂಶೋಽಧ್ಯಾಯಃ ॥



॥ ನಾರದ ಉವಾಚ ॥

ಏಕಾದಶ್ಯುಪವಾಸಸ್ಯ ಏಕಭುಕ್ತಸ್ಯ ವೈ ಪುನಃ ।
ನಕ್ತಸ್ಯ ಚ ವಿಶೇಷೇಣ ಫಲಂ ಬ್ರೂಹಿ ಮಹೇಶ್ವರ ॥ ೧ ॥

॥ ಮಹಾದೇವ ಉವಾಚ ॥

ಹೇಮಂತೇ ಚೈವ ಸಂಪ್ರಾಪ್ತೇ ಮಾಸೇ ಮಾರ್ಗಶಿರೇ ತಥಾ ।
ಶುಕ್ಲಪಕ್ಷೇ ಯದಾ ಪಾರ್ಥ ಉಪೋಷ್ಯೈಕಾದಶೀ ತಥಾ ॥ ೨ ॥

ದಶಮ್ಯಾಂ ಚೈವ ನಕ್ತಂ ಚ ಶುಚಿಷ್ಮಾಂಶ್ಚ ದೃಢವ್ರತಃ ।
ಪ್ರಭಾತಸಮಯೇ ಪ್ರಾಪ್ತೇ ನಿಯಮಂ ಕೃತ್ವಾ ವ್ರತಸ್ಯ ಚ ॥ ೩ ॥

---

## ಮೂವತ್ತಾರನೆಯ ಅಧ್ಯಾಯವು



೧. ನಾರದನು ಹೇಳಿದನು- ಎಲೈ ಮಹೇಶ್ವರನೆ ! ಏಕಾದಶಿಯ ದಿವಸ ಉಪವಾಸ ಮಾಡಿದರೆ, ಅದರ ಫಲವೇನು ? ಒಪ್ಪತ್ತು ಆಹಾರ ತೆಗೆದುಕೊಂಡರೆ, ಅದರ ಫಲವೇನು ? ನಕ್ತಮಾಡಿ ಇದ್ದರೆ, ಅದಕ್ಕೆ ಫಲವೇನು ? ಎಂಬುದನ್ನು ಹೇಳು ?

೨. ಮಹಾದೇವನು ಹೇಳಿದನು- ಹಿಮಂತಋತುವಿನ, ಮಾರ್ಗಶಿರ ಶುಕ್ಲಪಕ್ಷದ, ಏಕಾದಶಿಯ ದಿನ ನಿಯಮದಿಂದ ಉಪವಾಸ ಮಾಡಬೇಕು.

೩. ಆ ದಶಮಿಯ ದಿನ ರಾತ್ರೆ ಫಲಾಹಾರ ಮಾಡಿ ಶುಚಿಯಾಗಿ ದೃಢದಿಂದ ಇರಬೇಕು. ಬೆಳಗ್ಗೆ ಎದ್ದು, ಈ ಏಕಾದಶಿ ವ್ರತವನ್ನು ಮಾಡುತ್ತೇನೆಂದು, ಸಂಕಲ್ಪಿಸಬೇಕು.

ಮಧ್ಯಾಹ್ನೇ ತು ತಥಾ ಪಾರ್ಥ ಸ್ನಾನಂ ಶುಚಿ ಸಮಾಚರೇತ್ ।
ಗೃಹೇಷು ತ್ವಧಮಂ ಸ್ನಾನಂ ವಾಪೀ ಕೂಪೇಷು ಮಧ್ಯಮಂ || ೪ ||

ಉತ್ತಮಂ ಪುಷ್ಕರೇ ಸ್ನಾನಂ ನದ್ಯಾಂ ಚೈವೋತ್ತಮೋತ್ತಮಂ ।
ತಸ್ಮಾತ್ತು ಪಾಂಡವಶ್ರೇಷ್ಠ ನದ್ಯಾಂ ಸ್ನಾನಂ ಸಮಾಚರೇತ್ || ೫ ||

ಕ್ರೋಧಲೋಭೌ ಪರಿತ್ಯಜ್ಯ ಮಿಥ್ಯಾವಾದಂ ತಥೈವ ಚ ।
ಧರ್ಮನಿಂದಾಂ ಪ್ರಕುರ್ವಂತಿ ತೇಷಾಂ ಸಂಗಂ ಪರಿತ್ಯಜೇತ್ || ೬ ||

ವರ್ಜಯೇತ್ತದ್ದಿನೇ ಪಾರ್ಥ ನಿದ್ರಾಂ ಚೈವ ತು ಮೈಥುನಂ ।
ಧರ್ಮವಾಕ್ಯ ವಿವಾದೇನ ತದ್ದಿನಂ ವಿನಯೇತ್ಸದಾ || ೭ ||

ಕೇಶವಂ ಪೂಜಯಿತ್ವಾ ತು ನೈವೇದ್ಯಂ ಭಕ್ತವತ್ಸಲಃ ।
ಗಂಧ ಮಾಲ್ಯಂ ತಥಾ ದೀಪಂ ಧೂಪಂ ಚೈವ ತು ದಾಪಯೇತ್ || ೮ ||

---

೪-೫. ಮಧ್ಯಾಹ್ನದಲ್ಲಿ ಮತ್ತೆ ಸ್ನಾನಮಾಡಬೇಕು. ಮನೆಯಲ್ಲಿ ಸ್ನಾನ ಮಾಡುವುದು, ಅಧಮವು. ಸೇದುವ ಬಾವಿ, ಇಳಿಯುವ ಬಾವಿಗಳಲ್ಲಿ ಮಧ್ಯಮವು, ದೊಡ್ಡಕೊಳಗಳಲ್ಲಿ ಸ್ಥಾನಮಾಡುವುದು ಉತ್ತಮವು. ನದಿಯಲ್ಲಾದರೆ ಉತ್ತಮೋತ್ತಮವು. ಆದುದರಿಂದ-ನದಿಯಲ್ಲಿ ಸ್ನಾನಮಾಡಬೇಕು.

೬. ಕ್ರೋಧ, ಲೋಭಗಳನ್ನು ಬಿಡಬೇಕು. ವ್ಯರ್ಥವಾದ ವಾದವನ್ನು ಮಾಡಬಾರದು. ಧರ್ಮನಿಂದೆಯನ್ನು ಮಾಡದೆ, ಅದನ್ನು ಮಾಡುವವರ ಸಹ ವಾಸವನ್ನೂ ಬಿಡಬೇಕು.

೭. ಎಲೈ ಧರ್ಮಜನೆ! ಅಂದು ನಿದ್ದೆ ಮಾಡಕೂಡದು. ಸ್ತ್ರೀ ಸಂಭೋಗ ಮಾಡಕೂಡದು. ಆ ದಿನವೆಲ್ಲವೂ ಧರ್ಮಸಂಬಂಧವಾದ ಮಾತುಗಳನ್ನಾಡುತ್ತಿ ಇರಬೇಕು.

೮. ಆ ಸ್ವಾಮಿಯಾದ ಕೇಶವನನ್ನು ಪೂಜಿಸಿ, ಗಂಧ, ಹೂ ಗಳನ್ನೂ, ಧೂಪ ದೀಪಗಳನ್ನೂ, ಮಾಲೆಯನ್ನೂ ಸಮರ್ಪಿಸಿ, ನೈವೇದ್ಯ ಮಾಡಬೇಕು.

ಯಥಾ ಸಂಪೂಜಿತೋ ದೇವಃ ಕೃಷ್ಣೋ ದೇವಕಿ ನಂದನಃ |
ಸಂತಾರಯತಿ ದಾತಾರಂ ದ್ವಾದಶ್ಯುಭಯತಸ್ತಥಾ || ೯ ||

ಯಥಾ ಶುಕ್ಲಾ ತಥಾ ಕೃಷ್ಣಾ ವಿಭೇದಂ ನೈವ ಕಾರಯೇತ್ |
ಸಂತಾರಯತಿ ದಾತಾರಂ ದಶಪೂರ್ವಾನ್ ದಶಾಪರಾ || ೧೦ ||

ವಾರಾಣಸ್ಯಾಂ ಯಥಾ ಪಾರ್ಥ ಷಷ್ಟಿವರ್ಷಸಹಸ್ರಕೈಃ |
ಏಕಾದಶ್ಯುಪವಾಸಸ್ಯ ಕಲಾಂ ನಾರ್ಹತಿ ಷೊಡಶೀಂ || ೧೧ ||

ಕುರುಕ್ಷೇತ್ರೇ ಯಚ್ಚ ದಾನಂ ಸೋಮಪರ್ವಸಹಸ್ರಕೈಃ |
ಏಕಾದಶ್ಯುಪವಾಸಸ್ಯ ಕಲಾಂ ನಾರ್ಹತಿ ಷೋಡಶೀಂ || ೧೨ ||

ವೈಧೃತೇರ್ಯಾನಿ ದಾನಾನಿ ಲಕ್ಷೈಕೇನ ಚ ಯತ್ಫಲಂ |
ಏಕಾದಶ್ಯುಪವಾಸಸ್ಯ ಕಲಾಂ ನಾರ್ಹತಿ ಷೋಡಶೀಂ || ೧೩ ||

---

೯. ಈ ರೀತಿಯಾಗಿ ಆ ವಿಷ್ಣುವನ್ನು ಪೂಜಿಸಿ, ದ್ವಾದಶಿಯ ದಿನ ಆ ಪ್ರತಿಮಾ ಕಲಶಗಳನ್ನು ದಾನಮಾಡಿದರೆ, ತಂದೆಯ ಮತ್ತು ತಾಯಿಯ ಎರಡು ಕಡೆಯ ಕುಲಗಳನ್ನೂ, ಅವನು ಉದ್ಧರಿಸುತ್ತಾನೆ.

೧೦. ಶುಕ್ಲಪಕ್ಷದ ಮತ್ತು ಕೃಷ್ಣಪಕ್ಷದ ಏಕಾದಶಿಗಳಿಗೆ, ಭೇದಗಳನ್ನು ಎಣಿಸಕೂಡದು. ಅವೆರಡೂ ಒಂದೇ. ಅವೆರಡೂ ಹಿಂದಿನ ಹತ್ತು ತಲೆಗಳನ್ನೂ ಮುಂದಿನ ಹತ್ತು ತಲೆಗಳನ್ನೂ, ನರಕದಿಂದ ಉದ್ಧರಿಸುತ್ತವೆ.

೧೧. ಕಾಶಿಯಲ್ಲಿ ಅರವತ್ತುಸಾವಿರವರ್ಷಗಳು ಸ್ನಾನಮಾಡಿಕೊಂಡಿದ್ದರೂ ಆ ಫಲವು, ಏಕಾದಶಿ ಉಪವಾಸದ ಫಲದ ಹದಿನಾರನೆಯ ಒಂದಂಶವನ್ನೂ ಸಮ ತೂಗಲಾರದು.

೧೨. ಕುರುಕ್ಷೇತ್ರದಲ್ಲಿ ಸಾವಿರ ಅಮಾವಾಸ್ಯೆಗಳಲ್ಲಿ ದಾನಗಳನ್ನು ಮಾಡಿದ ಪುಣ್ಯವು, ಈ ಏಕಾದಶಿಯ ಉಪವಾಸದ, ಹದಿನಾರನೆಯ ಪುಣ್ಯದ ಒಂದಂಶಕ್ಕೆ ಸಮವಾಗುವುದಿಲ್ಲ.

೧೩. ಒಂದು ಲಕ್ಷ ವೈಧೃತಿಗಳಲ್ಲಿ ಮಾಡಿದ ದಾನಗಳ ಫಲವು, ಏಕಾದಶಿಯಉಪವಾಸದ ಹದಿನಾರನೆಯ ಒಂದಂಶವನ್ನು ಸರಿದೂಗುವುದಿಲ್ಲ.

ಕುರುಕ್ಷೇತ್ರೇ ಚ ಯದ್ದಾನಂ ಗ್ರಹಣೇ ಚಂದ್ರಸೂರ್ಯಯೋಃ ।
ಏಕಾದಶ್ಯುಪವಾಸಸ್ಯ ಕಲಾಂ ನಾರ್ಹತಿ ಷೋಡಶೀಂ ॥ ೧೪ ॥

ಪ್ರಭಾಸಕ್ಷೇತ್ರೇ ಯದ್ದಾನಂ ಸೋಮಪರ್ವಸಹಸ್ರಕೈಃ ।
ಏಕಾದಶ್ಯುಪವಾಸಸ್ಯ ಕಲಾಂ ನಾರ್ಹತಿ ಷೋಡಶೀಂ ॥ ೧೫ ॥

ಯತಿಲಕ್ಷೇ ಗೃಹೇ ಯಸ್ಯ ಭುಂಕ್ತೇ ಚೈವ ದಿನೇ ದಿನೇ ।
ಏಕಾದಶ್ಯುಪವಾಸಸ್ಯ ಕಲಾಂ ನಾರ್ಹತಿ ಷೋದಶೀಂ ॥ ೧೬ ॥

ಕೇದಾರೇ ಹ್ಯುದಕಂ ಪೀತ್ವಾ ಪುನರ್ಜನ್ಮ ನ ವಿದ್ಯತೇ ।
ಏಕಾದಶ್ಯುಪವಾಸಸ್ಯ ಕಲಾಂ ನಾರ್ಹತಿ ಷೋಡಶೀಂ ॥ ೧೭ ॥

ಏತದ್ವ್ರತಸಮಂ ಪುಣ್ಯಂ ನ ಭೂತಂ ನ ಭವಿಷ್ಯತಿ ।
ಗೋಸಹಸ್ರೇಣ ಯತ್ಪುಣ್ಯಂ ವೇದವೇದಾಂಗಪಾರಗೇ ॥ ೧೮ ॥

ತಸ್ಮಾಚ್ಛತಗುಣಂ ಪುಣ್ಯಂ ನಿತ್ಯಂ ಬ್ರಾಹ್ಮಣಪೂಜಿತೇ ।
ತಸ್ಮಾದ್ದಶಗುಣಂ ಪುಣ್ಯಂ ಬ್ರಹ್ಮಚಾರಿ ಸಹಸ್ರಕೇ ॥ ೧೯ ॥

---

೧೪–೧೫. ಕುರುಕ್ಷೇತ್ರದಲ್ಲಿ ಚಂದ್ರಸೂರ್ಯಗ್ರಹಣದಲ್ಲಿ ಮಾಡಿದ ದಾನವೂ, ಪ್ರಭಾಸಕ್ಷೇತ್ರದಲ್ಲಿ ಸಾವಿರ ಅಮಾವಾಸ್ಯೆಗಳಲ್ಲಿ ಮಾಡಿದ ದಾನವೂ, ಏಕಾದಶಿ ಉಪವಾಸದ ಹದಿನಾರರ ಒಂದಂಶವನ್ನು ಹೊಂದುವುದಿಲ್ಲ,

೧೬–೧೭. ಲಕ್ಷ ಯತಿಗಳಂತೆ ಪ್ರತಿದಿನವೂ, ಮನೆಯಲ್ಲಿ ಊಟಮಾಡುತ್ತಿದ್ದರೂ, ಆ ಫಲವೂ ಕೂಡ, ಏಕಾದಶಿಯ ಉಪವಾಸದ ಹದಿನಾರರಲ್ಲಿ ಒಂದಂಶಕ್ಕೆ ಸಮನಾಗುವುದಿಲ್ಲ. ಕೇದಾರ ಕ್ಷೇತ್ರದಲ್ಲಿ ನೀರನ್ನು ಕುಡಿದರೆ, ಪಾಪವೆಲ್ಲವೂ ಹೋಗಿ ಪುಣ್ಯವು ಬಂದು ಮತ್ತೆ ಜನ್ಮವುಂಟಾಗುವುದಿಲ್ಲ. ಅದೂ ಕೂಡ ಈ ಏಕಾದಶಿ ಉಪವಾಸದ ಹದಿನಾರನೆಯ ಒಂದಂಶಕ್ಕೆ ಸಮವಲ್ಲ.

೧೮–೨೨. ಈ ವ್ರತಕ್ಕೆ ಸಮವಾದ ವ್ರತವು ಮತ್ತೊಂದಿಲ್ಲ. ಅಷ್ಟು ಪುಣ್ಯವನ್ನು ಕೊಡುತ್ತದೆ. ವೇದ ವೇದಾಂಗಗಳನ್ನು ಓದಿದವನಿಗೆ ಸಾವಿರ ಗೋಗಳನ್ನು ದಾನ ಮಾಡಿದರೆ ಬರುವ ಪುಣ್ಯದ ನೂರರಷ್ಟು ಪುಣ್ಯವು ಬ್ರಾಹ್ಮಣನನ್ನು ಪೂಜಿಸುವವನಿಗೆ ದಾನಮಾಡಿದರೆ ಬರುತ್ತದೆ. ಆ ಬ್ರಾಹ್ಮಣ ಪೂಜೆ ಮಾಡುವುದರಿಂದ ಬರುವ ಪುಣ್ಯದ ಹತ್ತರಷ್ಟು ಪುಣ್ಯವು ಸಾವಿರ ಬ್ರಹ್ಮಚಾರಿಗಳನ್ನು ಪೂಜಿಸಿದರೆ ಬರುತ್ತದೆ. ಸಾವಿರ ಬ್ರಹ್ಮಚಾರಿಗಳನ್ನು ಪೂಜಿಸಿದರೆ ಬರುವ

ಬ್ರಹ್ಮಚಾರಿಸಹಸ್ರಸ್ಯ ವಾನಪ್ರಸ್ಥೇ ತತೋಧಿಕಂ ।
ವಾನಪ್ರಸ್ಥಸಹಸ್ರೇಣ ಭೂಮಿದಾನಂ ತತೋಧಿಕಂ ॥ ೨೦ ॥

ಭೂಮೇರ್ದಶಗುಣಾ ಕನ್ಯಾ ಸರ್ವಾಭರಣಭೂಷಿತಾ ।
ಕನ್ಯಾದಶಗುಣಾ ವಿದ್ಯಾ ಪೃಥಿವ್ಯಾಂ ಚೈವ ನಾರದ ॥ ೨೧ ॥

ವಿದ್ಯಾ ದಶಗುಣಂ ಚಾನ್ನಂ ಯೋ ದದಾತಿ ಪ್ರಭುಂಜತೇ ।
ಅನ್ನದಾನಾತ್ಪರಂ ದಾನಂ ನ ಭೂತಂ ನ ಭವಿಷ್ಯತಿ ॥ ೨೨ ॥

ತೃಪ್ತಿಂ ಪ್ರಯಾನ್ತಿ ಭೋ ವಿಪ್ರ ಸ್ವರ್ಗಸ್ಥಾಃ ಪಿತೃದೇವತಾಃ ।
ಅನ್ನದಾನಾತ್ಪರಂ ಯಜ್ಞಂ ಗೋಮೇಧಂ ಚಾಪಿ ಪಾಂಡವ ॥ ೨೩ ॥

ಗೋಮೇಧಾದ್ದಶಗುಣಂ ಪುಣ್ಯಮಶ್ವಮೇಧೇ ಕೃತೇ ಸತಿ ।
ನರಮೇಧೇನ ಯಜ್ಞೇನ ಅಶ್ವಮೇಧ ಸಹಸ್ರಕಂ ॥ ೨೪ ॥

---

ಪುಣ್ಯಕ್ಕಿಂತಲೂ ವಾನಪ್ರಸ್ಥನ ಪೂಜೆಯಿಂದ ಇನ್ನೂ ಹೆಚ್ಚು ಪುಣ್ಯವು ಬರುತ್ತದೆ. ವಾನಪ್ರಸ್ಥರು ಸಾವಿರ ಜನಗಳನ್ನು ಪೂಜಿಸಿದರೆ ಬರುವ ಪುಣ್ಯಕ್ಕಿಂತಲೂ ಭೂಮಿ ದಾನ ಮಾಡಿದರೆ ಮತ್ತೂ ಹೆಚ್ಚಿನ ಪುಣ್ಯವು ಬರುತ್ತದೆ. ಭೂಮಿದಾನದ ಪುಣ್ಯಕ್ಕಿಂತಲೂ ಸಾಲಂಕೃತ ಕನ್ಯಾದಾನದಿಂದ ಹತ್ತರಷ್ಟು ಹೆಚ್ಚು ಪುಣ್ಯವು ಬರುತ್ತದೆ. ಕನ್ಯಾದಾನಕ್ಕಿಂತಲೂ ವಿದ್ಯಾದಾನಮಾಡಿದರೆ, ಅವನಿಗೆ ಆ ಕನ್ಯಾದಾನದ ಹತ್ತರಷ್ಟು ಪುಣ್ಯವು ಬರುತ್ತದೆ. ವಿದ್ಯಾದಾನಕ್ಕಿಂತ ಅನ್ನದಾನವು, ಹತ್ತರಷ್ಟು ಫಲದಾಯಕವು. ಅನ್ನದಾನಕ್ಕಿಂತಲೂ ಉತ್ತಮವಾದದಾನವು ಹಿಂದೆಯೂ ಇಲ್ಲ. ಮುಂದೆಯೂ ಇರುವುದಿಲ್ಲ.

೨೩-೨೫. ಈ ಅನ್ನದಾನದಿಂದ, ಸ್ವರ್ಗದಲ್ಲಿರುವ ಪಿತೃಗಳು ತೃಪ್ತಿಯನ್ನು ಹೊಂದುತ್ತಾರೆ. ಅನ್ನದಾನಕ್ಕಿಂತಲೂ ಉತ್ತಮವಾದುದು ಗೋಮೇಧವೆಂಬ, ಯಜ್ಞವು. ಗೋಮೇಧಕ್ಕಿಂತಲೂ ಹತ್ತರಷ್ಟು ಅಶ್ವಮೇಧವು ಹೆಚ್ಚುಫಲವುಳ್ಳುದು, ಸಾವಿರ ಅಶ್ವಮೇಧಗಳ ಫಲವು, ಒಂದು ನರಮೇಧದಲ್ಲಿ ಬರುತ್ತದೆ. ನರಮೇಧ

ನರಮೇಧ ಶತೇನೈವ ಕೇದಾರೇ ಚೈವ ನಾರದ ।
ಕೇದಾರೇ ಚೋದಕಂ ಪೀತ್ವಾ ಪುನರ್ಜನ್ಮ ನ ವಿದ್ಯತೇ ॥ ೨೫ ॥

ತಸ್ಯ ದೇಹೇ ತ್ರಯೋ ದೇವಾ ಬ್ರಹ್ಮ ವಿಷ್ಣು ಮಹೇಶ್ವರಾಃ ।
ತಸ್ಯ ತುಲ್ಯೋ ಭವೇದ್ವಿದ್ವಾನ್ ಏಕಾದಶ್ಯುಪವಾಸಕೃತ್ ॥ ೨೬ ॥

ತತ್ಪುಣ್ಯಂ ಚ ಭವೇತ್ತಸ್ಯ ಯತ್ಸುರೈರಪಿ ದುರ್ಲಭಂ ।
ತಸ್ಯ ತಚ್ಚಾರ್ಧಜಂ ಪುಣ್ಯಂ ಕೃತೇ ವೈ ನಕ್ತಭೋಜನೇ ॥ ೨೭ ॥

ನಕ್ತಸ್ಯಾರ್ಧಂ ಭವೇದ್ವಿದ್ವನ್ನೇಕಭುಕ್ತೇ ತು ವೈ ಕೃತೇ ।
ಏಕಭುಕ್ತೇನ ನಕ್ತೇನೋಪವಾಸೇನ ತಥೈವ ಚ ॥ ೨೮ ॥

ತತ್ಪುಣ್ಯಂ ಲಭತೇ ವಿಪ್ರ ರಾತ್ರೌ ಜಾಗರಣೇ ಕೃತೇ ।
ತೇ ನರಾಃ ಪುಣ್ಯ ಕರ್ಮಾಣಃ ಕುರ್ವಂತ್ಯೇಕಾದಶೀ ವ್ರತಂ ॥ ೨೯ ॥

---

ಯಜ್ಞದ ನೂರಕ್ಕಿಂತ ಕೇದಾರದಲ್ಲಿ ನೀರನ್ನು ಕುಡಿವುದು ಹೆಚ್ಚು ಪುಣ್ಯವು. ಕೇದಾರ ದಲ್ಲಿ ಉದಕಪಾನಮಾಡಿದರೆ ಮತ್ತೆ ಜನ್ಮವಿರುವುದಿಲ್ಲ.

೨೬. ಏಕಾದಶಿಯ ಉಪವಾಸಮಾಡಿದವನು, ಆ ಕೇದಾರಕ್ಕೆ ಸಮನಾಗುವನು. ಆ ಏಕಾದಶಿ ಉಪವಾಸ ಮಾಡಿದವನ ದೇಹದಲ್ಲಿ, ಬ್ರಹ್ಮ, ವಿಷ್ಣು, ಶಿವರು ವಾಸಮಾಡುತ್ತಾರೆ.

೨೭. ಆ ರೀತಿಯಾದ, ಉತ್ತಮವಾದ, ದೇವತೆಗಳೂ ಹೊಂದಲಸಾಧ್ಯವಾದ ಪುಣ್ಯವು, ಆ ಏಕಾದಶಿ ಉಪವಾಸಮಾಡಿದವನಿಗೆ ಬರುತ್ತದೆ. ಆ ಉಪವಾಸ ಮಾಡಿದವನ, ಅರ್ಧಪುಣ್ಯವು, ನಕ್ತಮಾಡಿದವನಿಗೆ ಬರುತ್ತದೆ.

೨೮-೨೯. ಏಕಾದಶಿಯ ದಿನ ಒಪ್ಪತ್ತು ಊಟಮಾಡಿದರೆ, ನಕ್ತ (ಫಲಾಹಾರ) ಮಾಡಿದವನಿಗೆ ಬರುವ ಪುಣ್ಯದಲ್ಲಿ ಅರ್ಧಪುಣ್ಯವು ಬರುತ್ತದೆ. ರಾತ್ರಿಯಲ್ಲಿ ಜಾಗರಣೆ ಮಾಡಿದರೆ ಏಕಭುಕ್ತ, ನಕ್ತ, ಉಪವಾಸ ಇವುಗಳ ಫಲವು ಬರುತ್ತದೆ. ಇಲ್ಲದಿದ್ದರೆ ಇಲ್ಲ. ಆದುದರಿಂದ ಯಾರು ಏಕಾದಶಿವ್ರತವನ್ನು ಮಾಡುತ್ತಾರೆಯೋ, ಅವರು ಪುಣ್ಯವಂತರು.

ಏಕಾದಶ್ಯುಪವಾಸಸ್ಯ ಪುಣ್ಯ ಸಂಖ್ಯಾ ನ ವಿದ್ಯತೇ ।
ತಸ್ಮಾಚ್ಚ ಪಾಂಡವಶ್ರೇಷ್ಠ ಕುರ್ಯಾದೇಕಾದಶೀ ವ್ರತಂ ॥ ೩೦ ॥

ಏತತ್ತೇ ಕಥಿತಂ ವಿಪ್ರನ್ಯದ್ಗೋಪ್ಯಂ ವ್ರತಮುತ್ತಮಂ ।
ಪುಣ್ಯಸಂಖ್ಯಾಂ ನ ಜಾನಾಮಿ ಕಿಂ ತ್ವಂ ಪೃಚ್ಛಸಿ ನಾರದ ॥ ೩೧ ॥

॥ ನಾರದ ಉವಾಚ ॥

ಉತ್ಪನ್ನಾ ಚ ಕಥಂ ದೇವ ಕಥಂ ಪುಣ್ಯಾಧಿಕಾ ಶುಭಾ ।
ಕಥಂ ಪುಣ್ಯಾ ಪವಿತ್ರಾಣಾಂ ಕಥಂ ದೇವ ತವಪ್ರಿಯಾ ॥ ೩೨ ॥

॥ ಭಗವಾನುವಾಚ ॥

ಪೂರ್ವಂ ಕೃತಯುಗೇ ಬ್ರಹ್ಮನ್ಮುರುನಾಮೇತಿ ದಾನವಃ ।
ಅತ್ಯದ್ಭುತೋ ಮಹಾರೌದ್ರಃ ಸರ್ವದೇವಭಯಂಕರಃ ॥ ೩೩ ॥

---

೩೦. ಏಕಾದಶಿಯ ಉಪವಾಸಕ್ಕೆ ಬರುವ ಪುಣ್ಯದ ಸಂಖ್ಯೆಯೇ ಗೊತ್ತಿರುವುದಿಲ್ಲ. ಆದುದರಿಂದ ಎಲೈ ಧರ್ಮರಾಯನೆ! ಏಕಾದಶಿವ್ರತವನ್ನು ಮಾಡು.

೩೧. ಎಲೈ ನಾರದನೆ! ನಿನಗೆ, ಈ ಗೋಪ್ಯವಾದ ಏಕಾದಶಿ ವ್ರತವನ್ನು ಹೇಳಿದೆನು. ಇದರ ಪುಣ್ಯದ ಸಂಖ್ಯೆಯೇ, ನನಗೂ ಗೊತ್ತಿಲ್ಲ. ಮತ್ತೇನನ್ನು ಬೇಕಾದರೂ ಕೇಳು ಹೇಳುತ್ತೇನೆ.

೩೨. ನಾರದನು ಹೇಳಿದನು–ಎಲೈಸ್ವಾಮಿಯೆ! ಈ ಏಕಾದಶಿಯು ಹೇಗೆ ಹುಟ್ಟಿತು ? ಇದಕ್ಕೆ ಇಷ್ಟು ಹೆಚ್ಚಾಗಿ ಪುಣ್ಯವು ಬರಲು ಕಾರಣವೇನು ? ಪವಿತ್ರ ವಾದುವುಗಳಲ್ಲೆಲ್ಲಾ ಇದು ಹೇಗೆ ಉತ್ತಮವಾಯಿತು ? ಮತ್ತು ನಿನಗೆ ಇದು ಹೇಗೆ ಪ್ರಿಯವಾಯಿತು.

೩೩. ಭಗವಂತನು ಹೇಳದನು.–ಎಲೈ ನಾರದನೆ! ಪೂರ್ವದಲ್ಲಿ ಮುರು ಎಂಬ ದಾನವನೊಬ್ಬನಿದ್ದನು. ಅವನು ಕ್ರೂರಿಯೂ, ಅದ್ಭುತನೂ ಆಗಿ ದೇವತೆ ಗಳಿಗೆಲ್ಲಾ ಭಯಂಕರನಾಗಿದ್ದನು.

ಇಂದ್ರೋಽಪಿ ನಿರ್ಜಿತಸ್ತೇನ ಸರ್ವೇ ದೇವಾಸ್ತಥಾ ನೃಪ ।
ಮಹಾಸುರೇಣ ತೇನೈವ ಮೃತ್ಯುನಾ ಚ ದುರಾತ್ಮನಾ ॥ ೩೪ ॥

ದೇವತಾ ನಿರ್ಜಿತಾಸ್ಸರ್ವಾ ಅತ್ಯುಗ್ರೇಣೈವ ಪಾಂಡವ ।
ಸ್ವರ್ಗಾನ್ನಿರಾಕೃತಾ ದೇವಾ ವಿಚರಂತಿ ಮಹೀತಲೇ ॥ ೩೫ ॥

ಸಶಂಕಾ ಭಯಭೀತಾಶ್ಚ ಗತಾ ಯತ್ರ ಪುರಂದರಃ ।
ಇಂದ್ರೇಣ ಕಥಿತಂ ಸರ್ವಮೀಶ್ವರಸ್ಯ ಚ ನಾರದ ॥ ೩೬ ॥

॥ ಇಂದ್ರ ಉವಾಚ ॥

ಸ್ವರ್ಗಲೋಕಾತ್ಪರಿಭ್ರಷ್ಟಾ ಭ್ರಮಂತಿ ಚ ಮಹೀತಳೇ ।
ಮೃತ್ಯುಲೋಕೇ ಸ್ಥಿತಾ ದೇವ ನ ಶೋಭಂತಿ ಮಹೇಶ್ವರ ॥ ೩೭ ॥

ಉಪಾಯಂ ಬ್ರೂಹಿ ಮೇ ದೇವ ವಿಬುಧಾನಾಂ ತು ಕಾ ಗತಿಃ ॥ ೩೮ ॥

---

೩೪-೩೫. ಇಂದ್ರನನ್ನೂ, ಇತರ ದೇವತೆಗಳನ್ನೂ, ಆ ಮರುವು ಜಯಿಸಿದನು. ಆ ಅಸುರನು ದುರಾತ್ಮನಾಗಿ, ದೇವತೆಗಳಿಗೆಲ್ಲಾ ಮೃತ್ಯುರೂಪವಾದನು. ಆ ಕ್ರೂರಿಯು ದೇವತೆಗಳನ್ನು, ಜಯಿಸಿ ಅವರೆಲ್ಲರನ್ನೂ, ಸ್ವರ್ಗದಿಂದ ಓಡಿಸಿದನು. ಅನಂತರ ಆ ದೇವತೆಗಳೆಲ್ಲರೂ, ಭೂಲೋಕದಲ್ಲಿ ಸುತ್ತುತ್ತಿದ್ದರು.

೩೬. ಆ ದೇವತೆಗಳು ಯಾರನ್ನು ಕಂಡರೂ, ಆ ರಾಕ್ಷಸನೆಂದೇ ಸಂದೇಹ ಪಡುತ್ತಾ, ಹೆದರುತ್ತಾ ಇಂದ್ರನಬಳಿಗೆ ಹೋದರು. ಆ ಇಂದ್ರನು ಅವರೆಲ್ಲರನ್ನೂ ಕರೆದುಕೊಂಡು, ಮಹಾದೇವನ ಬಳಿಗೆ ಹೋದನು. ಅವನಲ್ಲಿ ಎಲ್ಲವನ್ನೂ ಹೇಳಿಕೊಂಡನು.

೩೭-೩೮. ಇಂದ್ರನು ಹೇಳಿದನು? ಎಲೈ ದೇವನೆ! ದೇವತೆಗಳು ಸ್ವರ್ಗದಿಂದ ಓಡಿಸಲ್ಪಟ್ಟವರಾಗಿ, ಮೃತ್ಯುಲೋಕವಾದ ಮನುಷ್ಯಲೋಕದಲ್ಲಿ, ಸಂಚರಿಸುತ್ತಿದ್ದಾರೆ. ಇದು ಅವರಿಗೆ ಚೆನ್ನಾಗಿರುವುದಿಲ್ಲ. ಈ ದೇವತೆಗಳಿಗೆ ಈಗೇನು ಗತಿಯು? ಯಾವುದಾದರೂ ಉಪಾಯವನ್ನು ಹೇಳು?

|| ಮಹಾದೇವ ಉವಾಚ ||

ಗಚ್ಛ ಗಚ್ಛ ಸುರಶ್ರೇಷ್ಠ ಯತ್ರಾಸ್ತೇ ಗರುಡಧ್ವಜಃ ।
ಶರಣಾಗತದೀನಾರ್ತಪರಿತ್ರಾಣಪರಾಯಣಃ || ೩೯ ||

|| ನಾರದ ಉವಾಚ ||

ಈಶ್ವರೋಕ್ತಂ ಸಮಾಕರ್ಣ್ಯ ಗತೋ ದೇವಂ ಸುರೇಶ್ವರಃ ।
ತ್ರಿದಶಾಶ್ಚೈವ ತತ್ರೈವ ಸಂಪ್ರಾಪ್ತಾಶ್ಚ ಧನಂಜಯ || ೪೦ ||

ತತ್ರೈವ ತಂ ಜಗನ್ನಾಥಂ ಪ್ರತ್ಯೂಚೇ ಚ ಜನಾರ್ದನಂ ।
ಜಲಮಧ್ಯೇ ಮಹಾಭಾಗ ಮಂದಿರೇ ಜಗತಾಂ ಪತಿಂ || ೪೧ ||

|| ಇಂದ್ರ ಉವಾಚ ||

ನಮಸ್ತೇ ದೇವ ದೇವೇಶ ಮಹಾಸುರವಿಮರ್ದನ ।
ಶರಣಂ ತ್ವಂ ದೇವದೇವ ದಾನವಾನಾಂ ಭಯಂಕರ || ೪೨ ||

ತ್ರಿದಶಾಸ್ತ್ವಾ ಗತಾಸ್ಸರ್ವೇ ಭಯಾರ್ತಾಃ ಪುರುಷೋತ್ತಮ ।
ರಕ್ಷಾಸ್ಮಾನ್ ಪುಂಡರೀಕಾಕ್ಷ ತ್ವಂ ಗತಿಸ್ಸರ್ವದಾ ಚ ನಃ || ೪೩ ||

---

೩೯. ಮಹಾದೇವನು ಹೇಳಿದನು– ಎಲೈ ದೇವತೆಗಳಿಗೆ ಒಡೆಯನಾದ ಇಂದ್ರನೆ! ಶರಣಾಗತರನ್ನೂ, ದೀನರನ್ನೂ ತೊಂದರೆ ಹೊಂದುತ್ತಿರುವವರನ್ನೂ ಕಾಪಾಡುವುದರಲ್ಲಿ ಆಸಕ್ತನಾಗಿರುವ ಗರುಡಧ್ವಜನ ಬಳಿಗೆ ಹೋಗು.

೪೦–೪೧. ನಾರದನು ಹೇಳಿದನು– ಈಶ್ವರನು ಹೇಳಿದ ಈ ಮಾತನ್ನು ಕೇಳಿ, ದೇವತೆಗಳೂ ಇಂದ್ರನೂ ಆ ಸ್ವಾಮಿಯ ಬಳಿಗೆ ಹೋದರು. ನೀರಿನ ಮಧ್ಯದಲ್ಲಿರುವ ಮನೆಯಲ್ಲಿ ಮಲಗಿರುವ, ಆ ಜಗತ್ಪತಿಯಾದ ಸ್ವಾಮಿಯನ್ನು ಕುರಿತು ಇಂತೆಂದರು.

೪೨–೪೩. ಇಂದ್ರನು ಹೇಳಿದನು–ದೇವದೇವನೆ! ನಿನಗೆ ನಮಸ್ಕಾರವು. ಅಸುರರನ್ನು ಕೊಂದವನೆ! ನಿನಗೆ ನಮಸ್ಕಾರವು. ದಾನವ ಭಯಂಕರನೆ! ಅಭಯವನ್ನು ಕೊಡು. ದೇವತೆಗಳು ನಿನ್ನನ್ನು ಶರಣು ಬಂದಿರುವರು. ಇಂತಹ ನಮ್ಮನ್ನು ಎಲೈ ಪುಂಡರೀಕಾಕ್ಷನೇ! ರಕ್ಷಿಸು. ನೀನೇ ನಮಗೆ ಯಾವಾಗಲೂ ರಕ್ಷಕನು.

ತ್ವಂ ಮಾತಾ ಸರ್ವದೇವಾನಾಂ ತ್ವಮೇವ ಜಗತಾಂ ಪಿತಾ ।
ತ್ವಂ ಸೃಷ್ಟಿ ಸ್ತ್ವಂ ಸಮುತ್ಪತ್ತಿಸ್ತ್ವಂ ಚ ಸಂಹಾರಕಾರಕಃ ॥ ೪೪॥

ತ್ವಂ ಸ್ವಾಹಾ ತ್ವಂ ಸ್ವಧಾ ಚೈವ ತ್ವಂ ವಷಟ್ಕಾರ ಏವ ಚ ।
ಓಂಕಾರೋ ದೇವ ದೇವೇಶ ತ್ವಮೇವ ಗರುಡಧ್ವಜ ॥ ೪೫ ॥

ತ್ವಂ ಶಿವಸ್ತ್ವಂಚ ಬ್ರಹ್ಮಾ ತ್ವಂ ವಿಷ್ಣುಶ್ಚೈವ ಚ ಚಂದ್ರಮಾಃ ।
ಹುತಾಶನಸ್ತ್ವಂ ದೇವೇಶ ವಾಯುರಾಕಾಶಮೇವ ಚ ॥ ೪೬ ॥

ನ ಚ ತ್ವತ್ತಃ ಪರಂ ಕಿಂಚಿತ್ತ್ರೈಲೋಕ್ಯಂ ಸ ಚರಾಚರಂ ।
ಸ್ಥಾವರಂ ಜಂಗಮಂ ಚೈವ ತ್ವಯಿ ಚೈವ ಪ್ರತಿಷ್ಠಿತಂ ॥ ೪೭ ॥

ಇಚ್ಛಂತಿ ವೈ ವಚಸ್ತುಭ್ಯಂ ಭಯಭೀತಾಶ್ಚ ದೇವತಾಃ ।
ದಾನವೈರ್ನಿರ್ಜಿತಾಃ ಸರ್ವೇ ಸ್ವರ್ಗಭ್ರಷ್ಟಾಃ ಕೃತಾಃ ಪ್ರಭೋ ॥
ರಕ್ಷಮಾಂ ದೇವ ದೇವೇಶ ಶರಣಾಗತವತ್ಸಲ । ॥ ೪೮ ॥

---

೪೪–೪೬. ಎಲೈ ಸ್ವಾಮಿಯೆ! ನೀನೇ ತಾಯಿಯು. ನೀನೇ ತಂದೆಯು. ನೀನೇ ಜಗತ್ತನ್ನು ಸೃಷ್ಟಿ ಮಾಡಿದವನು. ನೀನೇ ಕಾಪಾಡುವವನು. ನೀನೇ ಸಂಹಾರಗಳನ್ನು ಮಾಡುವವನು. ನೀನೇ ಸ್ವಾಹೆಯು. ನೀನೇ ಸ್ವಧೆಯು. ನೀನೇ ವಷಟ್ಕಾರವು. ನೀನೇ ಓಂಕಾರವು. ದೇವದೇವನೂ, ಗರುಡಧ್ವಜನೂ, ಆದ ಸ್ವಾಮಿಯೇ! ನೀನೇ ಶಿವನು. ನೀನೇ ಬ್ರಹ್ಮನು. ನೀನೇ ವಿಷ್ಣುವು. ನೀನೇ ಚಂದ್ರನು. ನೀನೇ ಅಗ್ನಿಯು. ನೀನೇ ವಾಯುವು. ನೀನೇ ಆಕಾಶವು.

೪೭. ನಿನ್ನನ್ನು ಬಿಟ್ಟು ಬೇರೆ ಆವುದೂ ಇಲ್ಲ. ಮೂರು ಲೋಕದಲ್ಲಿಯೂ, ಚರಾಚರಗಳಲ್ಲಿಯೂ ಇದ್ದೀಯೆ. ಸ್ಥಾವರಜಂಗಮಗಳೆಲ್ಲವೂ ನಿನ್ನಲ್ಲಿಯೇ ಅಡಗಿವೆ.

೪೮. ಭಯಪಟ್ಟಿರುವ ದೇವತೆಗಳು, ನಿನ್ನ ಅಭಯವಾಣಿಯನ್ನು ಕೇಳಲು ಅಪೇಕ್ಷಿಸುತ್ತಿದ್ದಾರೆ. ಈ ದೇವತೆಗಳೆಲ್ಲರೂ ದಾನವರಿಂದ ಜಿತರಾಗಿ ಸ್ವರ್ಗದಿಂದ ಓಡಿಸಲ್ಪಟ್ಟಿದ್ದಾರೆ. ದೇವದೇವನೆ! ಶರಣಾಗತವತ್ಸಲನೆ! ಇವರನ್ನೂ ನನ್ನನ್ನೂ ಕಾಪಾಡು.

॥ ಮಹಾದೇವ ಉವಾಚ ॥

ಇಂದ್ರಸ್ಯ ವಚನಂ ಶ್ರುತ್ವಾ ಭಗವಾನಿದಮಬ್ರವೀತ್ ॥ ೪೯ ॥

॥ ಕೃಷ್ಣ ಉವಾಚ ॥

ಕೀದೃಶೋ ದಾನವಶ್ಶಕ್ರ ಕಿನ್ನಾಮಾಕೀದೃಶಂ ಬಲಂ ।
ಕಿಂ ಸ್ಥಾನಂ ಕೋವರಸ್ತಸ್ಯ ಬ್ರೂಹಿ ಸತ್ಯಂ ಪುರಂದರ ॥ ೫೦ ॥

॥ ಇಂದ್ರ ಉವಾಚ ॥

ಪೂರ್ವಮೇವ ಮಹಾಬಾಹೋ ಬ್ರಹ್ಮವಂಶಸಮುದ್ಭವಃ ।
ಕಾಲಜಂಘೇತಿ ವಿಖ್ಯಾತೋ ಹ್ಯತ್ಯುಗ್ರೋಽಪಿ ಮಹಾಸುರಃ ॥ ೫೧ ॥

ತಸ್ಯ ಪುತ್ರೋ ಹಿ ವಿಖ್ಯಾತೋ ಮುರುನಾಮೇತಿ ದಾನವಃ ।
ಮಹಾಬಲೋ ಮಹಾವೀರ್ಯೋ ಬ್ರಹ್ಮವಂಶಸಮುದ್ಭವಃ ॥ ೫೨ ॥

ಪುರೀ ಚಂದ್ರವತೀ ನಾಮ್ನಾ ತತ್ರ ಸ್ಥಾನೇ ವಸತ್ಯಸೌ ।
ದೇವತಾ ನಿರ್ಜಿತಾಸ್ಸರ್ವಾಸ್ಸ್ವರ್ಗಾತ್ತೇನ ನಿರಾಕೃತಾಃ ॥ ೫೩ ॥

---

೪೯. ಮಹಾದೇವನು ಹೇಳಿದನು– ಇಂದ್ರನ ಮಾತನ್ನು ಕೇಳಿ, ಸ್ವಾಮಿಯಾದ ವಿಷ್ಣುವು ಇಂತೆಂದನು.

೫೦. ಕೃಷ್ಣನು ಹೇಳಿದನು– ಎಲೈಶಕ್ರನೇ! ಆ ದಾನವನು ಎಂತಹವನು? ಅವನ ಹೆಸರೇನು ? ಅವನ ಬಲವು ಹೇಗಿರುವುದು ? ಅವನೆಲ್ಲಿರುವನು ? ಅವನು ಪಡೆದಿರುವ ವರವೇನು ? ಅವೆಲ್ಲವನ್ನೂ ಕ್ರಮವಾಗಿ ಹೇಳು.

೫೧-೫೨. ಇಂದ್ರನು ಹೇಳಿದನು–ಪೂರ್ವದಲ್ಲಿ ಬ್ರಹ್ಮನ ವಂಶದಲ್ಲಿ ಹುಟ್ಟಿದ್ದ ಪ್ರಸಿದ್ಧನಾದ ತಾಳಜಂಘನೆಂಬ ಮಹಾಸುರನಿದ್ದನು. ಅವನ ಮಗನು ಮುರುವೆಂಬುವನು ಇದ್ದಾನೆ.ಅವನು ಬಹು ಪರಾಕ್ರಮಿಯೂ, ಬಹು ಬಲಿಷ್ಠನೂ ಆಗಿರುವನು.

೫೩. ಅವನ ರಾಜಧಾನಿಯು ಚಂದ್ರವತಿಯೆಂದಿದೆ. ಅಲ್ಲಿ ವಾಸಮಾಡಿಕೊಂಡು, ದೇವತೆಗಳನ್ನೆಲ್ಲಾ ಜಯಿಸಿದನು. ಮತ್ತು ಸ್ವರ್ಗದಿಂದಲೂ ಓಡಿಸಿದನು.

ಅನ್ಯ ಇಂದ್ರಃ ಕೃತಸ್ತೇನ ದೇವೋ ಹ್ಯನ್ಯೋ ಹುತಾಶನಃ ।
ರವಿಚಂದ್ರೌ ಕೃತೌ ಚಾನ್ಯೌ ಗ್ರಹನಕ್ಷತ್ರಸಂಯುತೌ || ೫೪ ||

ಸರ್ವಂ ಚಾನ್ಯತ್ಕೃತಂ ತೇನ ಸತ್ಯಂ ಸತ್ಯಂ ಜನಾರ್ದನ ।
ದೇವಲೋಕಃ ಕೃತೋ ಹ್ಯನ್ಯಃ ಪೂರ್ವಸ್ಥಾನ ವಿವರ್ಜಿತಃ || ೫೫ ||

|| ಮಹಾದೇವ ಉವಾಚ ||

ತಸ್ಯ ತದ್ವಚನಂ ಶ್ರುತ್ವಾ ಕೋಪಾನ್ತಸ್ಥೋ ಜಗತ್ಪತಿಃ ।
ವಿಹನ್ಮ್ಯಹಮಮುಂ ದೈತ್ಯಂ ದೇವಲೋಕಭಯಂಕರಂ || ೫೬ ||

ತ್ರಿದಶೈಸ್ಸಹಿತೋ ದೇವೋ ಗತಶ್ಚಂದ್ರವತೀಪುರಂ ।
ದೃಷ್ಟ್ವೋ ದೇವೈಸ್ಸಮಾಯಾತೋ ಗರ್ಜಮಾನೋ ಮಹಾಸುರಃ || ೫೭ ||

ಅಸಂಖ್ಯಾತ ಸಹಸ್ರೈಶ್ಚ ಸ ಚ ಪ್ರಹರುಣ್ಯೈರ್ಯುಧಿ ।
ಹನ್ಯಮಾನಾಸ್ತು ವೈ ದೇವಾ ಅಸುರೈಶ್ಚ ಭಯಂಕರೈಃ || ೫೮ ||

---

೫೪–೫೫. ಆ ಮರುವು ಬೇರೆ ಇಂದ್ರನನ್ನೂ, ಬೇರೆ ಅಗ್ನಿಯನ್ನೂ, ಬೇರೆ ಬೇರೆ ಸೂರ್ಯ ಚಂದ್ರರನ್ನೂ, ನಕ್ಷತ್ರಗಳನ್ನೂ ಮಾಡಿರುವನು. ಎಲ್ಲವನ್ನೂ ಬೇರೆ ಬೇರೆಯಾಗಿಯೇ ಸೃಷ್ಟಿಸಿರುವನು. ಒಟ್ಟನಲ್ಲಿ ದೇವಲೋಕವನ್ನೇ ಬೇರೆಯ ಸ್ಥಾನದಲ್ಲಿ ಸೃಷ್ಟಿಸಿರುವನು.

೫೬. ಮಹಾದೇವನು ಹೇಳಿದನು–ಆ ಇಂದ್ರನ ಮಾತನ್ನು ಕೇಳಿ, ಒಳಗೆ ಕೋಪಗೊಂಡು ಆ ಸ್ವಾಮಿಯು ನಕ್ಕು, ಸರ್ವಲೋಕ ಭಯಂಕರನಾದ ಆ ದೈತ್ಯನನ್ನು ನಾನು ಕೊಲ್ಲುತ್ತೇನೆ.

೫೭–೫೮. ಆಗ ದೇವತೆಗಳೊಡನೆ ವಿಷ್ಣುವು ಚಂದ್ರವತೀ ಪಟ್ಟಣಕ್ಕೆ ಹೋದನು. ಇದನ್ನು ತಿಳಿದು ಆ ಮರುವು ಗರ್ಜಿಸುತ್ತ ಬಂದನು. ಅಸಂಖ್ಯೆವಾದ ತನ್ನ ಸೈನ್ಯದೊಡನೆ ಯುದ್ಧ ಮಾಡುತ್ತ ಆ ದೇವತೆಗಳನ್ನೆಲ್ಲಾ ಬಹುವಾಗಿ ಗಾಯಪಡಿಸಿದನು.

ತತ್ರಸ್ಥಾ ದೇವತಾಸ್ಸರ್ವಾ ಗತಾಶ್ಚೈವ ದಿಶೋ ದಶ ।
ಹರಿರ್ನಿರೀಕ್ಷಿತಸ್ತೇನ ತಿಷ್ಠ ತಿಷ್ಠೇತಿ ಚಾಬ್ರವೀತ್ ।
ಚಕ್ರಂ ನಿರೀಕ್ಷಯಾಮಾಸ ಕ್ರೋಧಸಂರಕ್ತಲೋಚನಃ ॥ ೫೯ ॥

॥ ಹರಿರುವಾಚ ॥

ಹೇದಾನವ ದುರಾಚಾರ ಮಮ ಬಾಹೂನ್ನಿರೀಕ್ಷಯ ।
ತತಸ್ತೇ ಸಮ್ಮುಖಾಸ್ಸರ್ವೇ ಘೋರರೂಪಾಶ್ಚ ದಾನವಾಃ ॥
ಚಕ್ರಂ ಮುಮೋಚ ಭಗವಾನ್ ದೈತ್ಯೇಂದ್ರಸ್ಯ ಬಲಂ ಪ್ರತಿ ॥ ೬೦ ॥

॥ ಮಹಾದೇವ ಉವಾಚ ॥

ತೇ ಛಿನ್ನಶಿರಸಃ ಸರ್ವೇ ಪತಿತಾ ದೈತ್ಯಪುಂಗವಾಃ ।
ಏಕೋಽಯಂ ದಾನವಸ್ತತ್ರ ಯೋಧಯಾಮಾಸ ವಿಷ್ಣುನಾ ॥ ೬೧ ॥

ಅಸ್ತ್ರಚ್ಛೇದಃ ಕೃತಸ್ತೇನ ನಿರ್ಜಿತೋ ಮಧುಸೂದನಃ ।
ನಿರ್ಜಿತೇ ದೇವದೇವೇಶೇ ಬಾಹುಯುದ್ಧಂ ತು ಯಾಚಿತಃ ॥ ೬೨ ॥

---

೫೯. ಹೀಗೆ ನೋವನ್ನು ಹೊಂದಿದ ದೇವತೆಗಳು ಸಿಕ್ಕಿದ ಕಡೆಗೆ ಓಡಿದರು. ಅನಂತರ ಹರಿಯನ್ನು ಆ ರಾಕ್ಷಸನು ನೋಡಿ, ನಿಲ್ಲು, ನಿಲ್ಲು ಎಂದು ಗರ್ಜಿಸಿದನು. ಆಗ ಹರಿಯು ತಾನು ಹಿಡಿದಿರುವ ಚಕ್ರವನ್ನು ಕೆಂಗಣ್ಣಿನಿಂದ ನೋಡಿದನು.

೬೦. ಹರಿಯು ಹೇಳಿದನು–ಎಲೈ ದುರಾಚಾರಿಯಾದ ದಾನವನೆ! ನನ್ನ ತೋಳುಗಳನ್ನು ನೋಡು, ಎನ್ನಲು, ಆ ದಾನವರೆಲ್ಲರೂ ಹರಿಯ ಎದುರಿಗೆ ಬಂದು ಭಯಂಕರರಾಗಿ ಮೇಲೆ ಬಿದ್ದರು. ಆಗ ವಿಷ್ಣುವು ಆ ದೈತ್ಯರ ಮೇಲೆ ತನ ಚಕ್ರಾಯುಧವನ್ನು ಬಿಟ್ಟನು.

೬೧. ಮಹಾದೇವನು ಹೇಳಿದನು–ಆ ಸೈನಿಕರೆಲ್ಲರಿಗೂ, ತಲೆ ಕತ್ತರಿಸಿ ಹೋಗಿ ಬಿದ್ದುಹೋದರು. ಅನಂತರ ಆ ಶೂರನಾದ ಮುರುವು ಒಬ್ಬನೇ ವಿಷ್ಣುವಿನೊಡನೆ ಯುದ್ಧಕ್ಕೆ ನಿಂತನು.

೬೨ ಆ ರಾಕ್ಷಸನು ವಿಷ್ಣುವಿನ ಅಸ್ತ್ರಗಳೆಲ್ಲವನ್ನೂ ಕತ್ತರಿಸಿಬಿಟ್ಟನು. ಮಧುಸೂದನನು ಸೋತನು. ಅಸ್ತ್ರ ಯುದ್ಧದಲ್ಲಿ ವಿಷ್ಣುವು ಸೋಲಲು ಆ ರಾಕ್ಷಸನನ್ನು ಕುರಿತು ದ್ವಂದ್ವ ಯುದ್ಧವನ್ನು ಯಾಚಿಸಿದನು.

ಬಾಹುಬಂಧಃ ಕೃತಸ್ತೇನ ದಿವ್ಯಂ ವರ್ಷಸಹಸ್ರಕಂ |
ವಿಷ್ಣುಚಿನ್ತಾಪ್ರಪನ್ನಾಸ್ತು ನಷ್ಟಾಸ್ಸರ್ವೇ ದಿವೌಕಸಃ || ೬೩ ||

ಹಾ ಹೇತಿ ಕರುಣಂ ಕೃತ್ವಾ ಸುರಸೈನ್ಯೇ ಚ ಬಾಡವ || ೬೪ ||

ವಿಷ್ಣುಶ್ಚ ತ್ರಾಸಿತಸ್ತೇನ ಗತೋ ಬದರಿಕಾಶ್ರಮಂ |
ಗುಹಾ ಸಿಂಹಾವತೀ ನಾಮ ತತ್ರ ಸುಪ್ತೋ ಜನಾರ್ದನಃ || ೬೫ ||

ಯೋಜನಾದ್ದ್ವಾದಶಾನ್ಮಧ್ಯೇ ದ್ವಾರಮೇಕಂ ತು ಬಾಡವ |
ತತ್ರ ಪ್ರಸುಪ್ತೋ ದೇವೇಶೋ ಭಯಭೀತೋ ಜನಾರ್ದನಃ || ೬೬ ||

ದಾನವಃ ಪೃಷ್ಠತೋ ಲಗ್ನಃ ಪ್ರವಿಷ್ಟೋ ಮಹತೀಂ ಗುಹಾಂ |
ಪ್ರಸುಪ್ತಂ ಚ ಹರಿಂ ದೃಷ್ಟ್ವಾ ದಾನವೇಂದ್ರೇಣ ಭಾಷಿತಂ || ೬೭ ||

---

೬೩–೬೪. ಆ ಬಾಹು ಯುದ್ಧದಲ್ಲಿ ದೇವತೆಗಳ ಸಾವಿರವರ್ಷಗಳವರೆಗೂ, ರಟ್ಟೆಗಳನ್ನು ಸುತ್ತಿಕೊಂಡು ಕುಸ್ತಿ ಮಾಡುತ್ತಿದ್ದರು. ಕೊನೆಗೆ ವಿಷ್ಣುವೇನಾಗುವನೋ! ಎಂದು ಯೋಚಿಸುತ್ತಾ ಹಾ! ಹಾ!! ಎಂಬುದಾಗಿ ದುಃಖದಿಂದ ಕೂಗಿಕೊಳ್ಳುತ್ತ, ಆ ದೇವತೆಗಳೂ ಅವರ ಸೈನ್ಯವೂ ದಿಕ್ಕಾಪಾಲಾಗಿ ಓಡಿದುವು.

೬೫. ಆಮೇಲೆ ವಿಷ್ಣುವು ಅದರಲ್ಲಿಯೂ ಸೋಲಲು, ಆ ದೈತ್ಯನು ಮತ್ತೆ ಹೊಡೆಯಲು ಬಂದನು. ಇದರಿಂದ ಆ ಜನಾರ್ದನನು ಹೆದರಿ ಬದರಿಕಾಶ್ರಮಕ್ಕೆ ಓಡಿಹೋದನು. ಅಲ್ಲಿ ಸಿಂಹಾವತೀ ಎಂಬ ಗುಹೆಯೊಂದಿರುವುದು. ಅದರೊಳಕ್ಕೆ ನುಗ್ಗಿ ಅಲ್ಲಿ ಮಲಗಿದನು.

೬೬. ಆ ಗುಹೆಯು ಹನ್ನೆರಡು ಯೋಜನ ಉದ್ದವಿರುವುದು. ಅದರ ಮಧ್ಯದಲ್ಲಿ ಒಂದು ಬಾಗಿಲಿರುವುದು. ಈ ಹೆದರಿ ಬಂದ ಜನಾರ್ದನನು ಭಯದಿಂದ ಅಲ್ಲಿ ಮಲಗಿದ್ದನು.

೬೭. ಆ ದಾನವನು ವಿಷ್ಣುವನ್ನು ಓಡಿಸಿಕೊಂಡು ಬಂದು, ಆ ದೊಡ್ಡ ಗುಹೆಯೊಳಕ್ಕೆ ನುಗ್ಗಿದನು. ಅಲ್ಲಿ ಹರಿಯು ಮಲಗಿರುವುದನ್ನು ನೋಡಿ ಆ ಮುರುದಾನವನು ಇಂತೆಂದನು.

|| ದೈತ್ಯ ಉವಾಚ ||

ಭೃಶಂ ಮಯಾ ಹರಿರ್ದೃಷ್ಟಃ ಪ್ರಸುಪ್ತಸ್ಸಂಕಟೇ ಕಥಂ |
ನಯೇಽಹಂ ಚ ನ ಸಂದೇಹೋ ಹ್ಯಸುರಾಣಾಂ ಭಯಂಕರಂ || ೧೮ ||

|| ಮಹಾದೇವ ಉವಾಚ ||

ನಿರ್ಗತಾ ಕನ್ಯಕಾ ಚೈಕಾ ಶರೀರಾದ್ಧಿ ಹರೇಸ್ತದಾ |
ರೂಪಸ್ವಿನೀ ಚ ಸೌಭಾಗ್ಯಾ ದಿವ್ಯಪ್ರಹರಣಾಯುಧಾ || ೧೯ ||

ವಿದ್ಯುತ್ತೇಜಸ್ಸಮಾಕ್ರಾನ್ತಾ ಮಹಾಬಲಪರಾಕ್ರಮಾ |
ಮೋಹಿತೋ ದಾನವಸ್ತತ್ರ ಮುರುರ್ನಾಮೇತಿ ನಾರದ || ೨೦ ||

ಕೃತೋ ವಧಸ್ತದಾ ತೇನ ದಾನವೇಂದ್ರಸ್ಯ ಪಾರ್ಥಿವ |
ಸಾ ಕನ್ಯಾ ಯುದ್ಧ್ಯತೇ ತೇನ ಕೋಪೇನೋಜ್ವಲಲೋಚನಾ || ೨೧ ||

ತಸ್ಯಾಃ ಕೋಪೇನ ಭೋ ವಿದ್ವನ್ ಭಸ್ಮೀಭೂತ ಸ್ಸದಾನವಃ |
ನಿಹತೋ ದಾನವಸ್ತತ್ರ ಸ ಬಾಂಧವಪರಿಗ್ರಹಃ || ೨೨ ||

---

೧೮. ದೈತ್ಯನು ಹೇಳಿದನು-ಓಹೋ! ನಾನು ಹರಿಯನ್ನು ಕಂಡೆನು. ಅವನು ಈ ಇಕ್ಕಟ್ಟಿನಲ್ಲಿ ಏಕೆ ಮಲಗಿರುವನು? ಇರಲಿ, ಸಿಕ್ಕಿದನಲ್ಲ! ಅಸುರರಿಗೆ ಭಯಂಕರನಾದ ಈತನನ್ನು ಎಳೆದುಕೊಂಡು ಹೋಗುತ್ತೇನೆ. ಸಂದೇಹವಿಲ್ಲ.

೧೯-೨೦. ಮಹಾದೇವನು ಹೇಳಿದನು-ಆಗ ಆ ವಿಷ್ಣುವಿನ ಶರೀರದಿಂದ ಒಬ್ಬಳು ಕನ್ಯೆಯು ಹುಟ್ಟಿದಳು. ಆಕೆಯು ರೂಪವತಿಯಾಗಿಯೂ, ಸೌಭಾಗ್ಯವತಿಯಾಗಿಯೂ, ಉತ್ತಮವಾದ ಆಯುಧಗಳನ್ನು ಧರಿಸಿಯೂ, ಮಿಂಚಿನಂತೆ ಕಾಂತಿಯುಳ್ಳವಳಾಗಿಯೂ, ಬಹು ಪರಾಕ್ರಮವುಳ್ಳವಳಾಗಿಯೂ ಇದ್ದಳು. ಆಕೆಯನ್ನು ನೋಡಿ ಆ ಮುರುವೆಂಬ ದಾನವನು ಮೋಹವನ್ನೇ ಹೊಂದಿದನು.

೨೧-೨೨. ಅವಳ ಮೂಲಕವಾಗಿ ವಿಷ್ಣುವು ಆ ದಾನವನನ್ನು ಕೊಂದನು. ಆಕೆಯಾದರೋ ಅವನೊಡನೆ ಯುದ್ಧಮಾಡುತ್ತ, ಕೋಪದಿಂದ ಕಣ್ಣನ್ನು ಕೆಂಪಗೆ ಮಾಡಿಕೊಂಡು ಜ್ವಲಿಸಿದಳು. ಆ ಕೋಪದಿಂದ ಆ ಮುರುವು ಸುಟ್ಟು ಬೂದಿಯಾದನು. ಅನಂತರ ಅವರ ಕಡೆಯುವರನ್ನೆಲ್ಲಾ ಆಕೆಯೇ ಕೊಂದಳು.

ನಿಹತೇ ದಾನವೇ ತತ್ರ ತತೋ ದೇವೋ ಹ್ಯಬುಧ್ಯತ ।
ಪತಿತಂ ದಾನವಂ ದೃಷ್ಟ್ವಾ ದೇವೋ ವಿಸ್ಮಯಮಾಗತಃ ॥ ೭೩ ॥

॥ ವಿಷ್ಣುರುವಾಚ ॥

ಕೇನಾಯಂ ನಿಹತೋ ದೈತ್ಯೋ ಮಮ ವೈರೀ ಮಹಾಬಲಃ ।
ಅದ್ಭುತಂ ಚ ಕೃತಂ ಕರ್ಮ ಮಮ ವಿಸ್ಮಯಕಾರಕಂ ॥
ನ ಚ ದೇವೋ ನ ಗಂಧರ್ವಃ ತತ್ಸಮೋ ನಾಸ್ತಿ ದಾನವಃ ॥ ೭೪ ॥

॥ ಮಹಾದೇವ ಉವಾಚ ॥

ವಿಸ್ಮಯೋ ಹಿ ಹರೇರ್ಜಾತಸ್ತತ್ರೋವಾಚಾಶರೀರಿಣೀ ॥ ೭೫ ॥

॥ ಆಕಾಶವಾಗುವಾಚ ॥

ಮಯಾ ಚ ನಿಹತೋ ದೈತ್ಯೋ ದೇವಾಸುರಭಯಂಕರಃ ।
ಯೇನ ಸರ್ವೇ ಸುರಾ ಜಿತ್ವಾ ಸ್ವರ್ಗಾದೇವ ನಿವಾರಿತಾಃ ॥ ೭೬ ॥

---

೭೩. ಈ ದಾನವನು ಸಂಹೃತನಾದಮೇಲೆ, ವಿಷ್ಣುವು ಎಚ್ಚೆತ್ತನು. ದಾನವನು ಸತ್ತು ಬಿದ್ದಿರುವುದನ್ನು ನೋಡಿ, ಆತನು ಆಶ್ಚರ್ಯಗೊಂಡನು.

೭೪. ವಿಷ್ಣುವು ಹೇಳಿದನು–ಮಹಾ ಬಲಿಷ್ಠನೂ, ನನ್ನ ವೈರಿಯೂ ಆದ ಈ ದೈತ್ಯನನ್ನು ಕೊಂದವರು ಯಾರು? ಈ ಕೆಲಸವು ಬಹು ಅದ್ಭುತವಾಗಿದೆ. ನನಗೆ ಆಶ್ಚರ್ಯವಾಗುತ್ತಿದೆ. ಆ ದಾನವನಿಗೆ ಸಮರಾದವರು ದೇವತೆಗಳಲ್ಲಾಗಲಿ, ಗಂಧರ್ವರಲ್ಲಾಗಲಿ ಇಲ್ಲವೇ ಇಲ್ಲ. ದಾನವರಲ್ಲಂತೂ ಅವನ ಸಮನೇ ಇಲ್ಲ.

೭೫. ಮಹಾದೇವನು ಹೇಳಿದನು– ಈರೀತಿ ಹರಿಯು ಆಶ್ಚರ್ಯಪಡುತ್ತಿರಲು ಅಶರೀರವಾಣಿಯು ಇಂತೆಂದಿತು.

೭೬. ಅಶರೀರವಾಣಿಯು ಹೇಳಿತು–ದೇವತೆಗಳೆಲ್ಲರನ್ನೂ ಜಯಿಸಿ, ಸ್ವರ್ಗದಿಂದ ಅವರನ್ನು ಓಡಿಸಿದ ಭಯಂಕರನಾದ ಮುರುವನ್ನು ನಾನು ಕೊಂದೆನು.

ಪ್ರಸುಪ್ತಂ ಚ ಹರಿಂ ದೃಷ್ಟ್ವಾ ದಾನವಸ್ತತ್ರ ಚಾಗತಃ ।
ಸಂಹರಿಷ್ಯಾಮಿ ತ್ರೈಲೋಕ್ಯಂ ತ್ವತ್ಕೃತೇ ಚ ಜನಾರ್ದನ ॥ ೭೭ ॥

॥ ಮಹಾದೇವ ಉವಾಚ ॥

ತಸ್ಯಾಸ್ತದ್ವಚನಂ ಶ್ರುತ್ವಾ ವಿಷ್ಣುರ್ವಚನಮಬ್ರವೀತ್ ॥ ೭೮ ॥

॥ ವಿಷ್ಣುರುವಾಚ ॥

ಉಪಕಾರಃ ಕೃತಃ ತೇನ ಮಮ ಕಾರುಣ್ಯಮಿಚ್ಛತಾ ।
ನಿಹತೋ ದಾನವೋ ದುಷ್ಟೋ ದೇವಾಸುರಭಯಂಕರಃ ॥
ಅಹಂ ಚ ನಿರ್ಜಿತೋ ಯೇನ ಕಥಂ ಸೋಽಪಿ ನಿಪಾತಿತಃ ॥ ೭೯ ॥

॥ ಮಹಾದೇವ ಉವಾಚ ॥

ವಿಷ್ಣೋಸ್ತದ್ವಚನಂ ಶ್ರುತ್ವಾ ಕನ್ಯಾ ವಚನಮಬ್ರವೀತ್ ॥ ೮೦ ॥

---

೭೭. ನಿನ್ನನ್ನು ಸೋಲಿಸಿ ನೀನು ಈ ಗುಹೆಯಲ್ಲಿ ಮಲಗಿರುವುದನ್ನು ತಿಳಿದು ಇಲ್ಲಿಗೂ ಬಂದನು. ಇದನ್ನು ನೋಡಿ ನಾನೇ ಅವನನ್ನು ಕೊಂದೆನು. ಎಲೈ ಜನಾರ್ದನನೆ! ನಿನಗೋಸ್ಕರವಾಗಿ ಮೂರು ಲೋಕವನ್ನೂ ಸಂಹಾರ ಮಾಡುತ್ತೇನೆ.

೭೮. ಮಹಾದೇವನು ಹೇಳಿದನು–ಆಕೆಯ ಮಾತನ್ನು ಕೇಳಿ ವಿಷ್ಣುವು ಇಂತೆಂದನು.

೭೯. ವಿಷ್ಣುವು ಹೇಳಿದನು–ನನ್ನ ಕೃಪೆಯನ್ನಿಚ್ಛಿಸುವವನು ನನಗೆ ಈ ಉಪಕಾರವನ್ನು ಮಾಡಿದನು. ದುಷ್ಟನೂ ಭಯಂಕರನೂ ಆದ ದಾನವನು ಸತ್ತನು. ಯಾವ ದಾನವನು ನನ್ನನ್ನು ಸೋಲಿಸಿದನೋ ಅಂಥವನನ್ನೂ ಕೂಡ ಕೊಂದುಹಾಕಿರುವರಲ್ಲ! ಇದು ಬಹು ಆಶ್ಚರ್ಯವಾಗಿರುವುದು! ಅವನು ನನ್ನ ಕೃಪೆಗೆ ಪಾತ್ರನೇ ಸರಿ.

೮೦. ಮಹಾದೇವನು ಹೇಳಿದನು– ವಿಷ್ಣುವಿನ ಈ ಮಾತನ್ನು ಕೇಳಿ ಆ ಕನ್ಯೆಯು ಇಂತೆಂದಳು.

|| ಕನ್ಯೋವಾಚ ||

ಅಹಂ ಏಕಾದಶೀ ವಿಷ್ಣೋ ಸರ್ವಶತ್ರುಕ್ಷಯಂಕರೀ ।
ಕ್ಷೀಯಮಾಣಂ ಹರಿಂ ದೃಷ್ಟ್ವಾ ಪ್ರಸುಪ್ತಂ ಚ ಜನಾರ್ದನಂ || ೮೧ ||

ತ್ರಿಷು ಲೋಕೇಷು ಭಯದಂ ಅವ್ಯಯಂ ದಾನವಂ ತತಃ ।
ಮಯಾ ಕುಪಿತಯಾ ವಿಷ್ಣೋ ದಾನವಶ್ಚ ನಿಪಾತಿತಃ || ೮೨ ||

|| ಶ್ರೀ ಭಗವಾನುವಾಚ ||

ವರಂ ವರಯ ಭದ್ರಂ ತೇ ಯತ್ತೇ ಮನಸಿ ವರ್ತತೇ ।
ತತ್ಸರ್ವಂ ಸಂಪ್ರದಾಸ್ಯಾಮಿ ಯಾಚಿತಂ ಮಮ ಚಾನಘೇ || ೮೩ ||

|| ಏಕಾದಶ್ಯುವಾಚ ||

ಮಮ ದಿವಸೋ ಮಹಾಪುಣ್ಯಃ ಸರ್ವಪುಣ್ಯೇಷು ಪಠ್ಯತೇ ।
ಅತೋ ಮದ್ದಿವಸೇ ಪ್ರಾಪ್ತೇ ಉಪವಾಸಂ ಕರೋತಿ ಯಃ || ೮೪ ||

ಸೋಽಶ್ವಮೇಧಸಮಂ ಪುಣ್ಯಂ ಪ್ರಾಪ್ಸ್ಯತ್ಯೇವ ಜನಾರ್ದನ ।
ಏಕಭುಕ್ತೇನ ನಕ್ತೇನೋಪವಾಸೇನ ವಿಶೇಷತಃ || ೮೫ ||

---

೮೧–೮೨. ಕನ್ಯೆಯು ಹೇಳಿದಳು–ಎಲೈ ವಿಷ್ಣುವೆ! ನಾನು ಸರ್ವಶತ್ರುಗಳಿಗೂ, ಭಯವನ್ನುಂಟುಮಾಡುವ ಏಕಾದಶಿಯು. ಹರಿಯು ಬಲಗುಂದುತ್ತಾ ಮಲಗಿರುವುದನ್ನು ನೋಡಿ, ಮರುಕಗೊಂಡು ಮೂರು ಲೋಕಕ್ಕೂ ಭಯವನ್ನುಂಟುಮಾಡುವ ಶಕ್ತನಾದ ಆ ದಾನವನನ್ನು ನಾನು ಕೊಂದೆನು.

೮೩. ಭಗವಂತನು ಹೇಳಿದನು-ಎಲೈ ಭದ್ರೆಯೆ! ನಿನಗೆ ಮಂಗಳವಾಗಲಿ. ನಿನ್ನ ಮನಸ್ಸಿನಲ್ಲಿರುವುದನ್ನು ಕೇಳಿಕೊ. ಅವೆಲ್ಲ ವರಗಳನ್ನೂ ಕೊಡುತ್ತೇನೆ. ಸಂದೇಹವಿಲ್ಲ.

೮೪–೮೫. ಏಕಾದಶಿಯು ಹೇಳಿದಳು– ಎಲೈ ಜನಾರ್ದನನೇ! ನನ್ನ ದಿವಸವು ಎಲ್ಲಾ ಪುಣ್ಯದಿನಗಳಿಗಿಂತಲೂ, ಮುಖ್ಯವೆಂದು ಹೇಳಿಸಿಕೊಳ್ಳಬೇಕು. ನನ್ನ ದಿವಸದಲ್ಲಿ ಉಪವಾಸ ಮಾಡಿದವನು ಅಶ್ವಮೇಧಯಾಗದ ಪುಣ್ಯವನ್ನು ಹೊಂದಬೇಕು. ಒಪ್ಪತ್ತು ಊಟ ಮತ್ತು ಫಲಹಾರ ಉಪವಾಸಗಳನ್ನು ಯಾರು

ಯೇ ಕುರ್ವಂತಿ ನರಶ್ರೇಷ್ಠಾಸ್ತೇ ವೈ ಯಾನ್ತಿ ತ್ವದಾಲಯೇ ।
ರಾತ್ರೌ ಜಾಗರಣಂ ಕಾರ್ಯಂ ಮಮ ಸ್ವಾಮಿರ್ನಿ ವಿಶೇಷತಃ ॥ ೮೬ ॥

ಪ್ರಹರೇ ಪ್ರಹರೇ ಪುಣ್ಯಾ ಪವಿತ್ರಾ ಪಾಪನಾಶಿನೀ ।
ಏವಂ ವಿಧಂ ಮಮ ವ್ರತೇ ಯೇ ಕುರ್ವಂತಿ ನರೋತ್ತಮಾಃ ॥ ೮೭ ॥

ತೇ ವೈ ವಿಷ್ಣುಪದಂ ಯಾನ್ತಿ ಹ್ಯುಪವಾಸೇ ಕೃತೇ ನರಾಃ ।
ಪುಷ್ಪೈರ್ದೀಪೈ ಸ್ತಥಾ ಧೂಪೈರ್ಭಕ್ತಿಭಾವಸಮನ್ವಿತಃ ॥ ೮೮ ॥

ಕರೋತಿ ಜಾಗರಂ ರಾತ್ರೌ ನಿಷ್ಪಾಪೋ ಜಾಯತೇ ನರಃ ।
ವದಾಮಿ ವೈಷ್ಣವಂ ಲೋಕಂ ಕಲ್ಪಕೋಟಿಶತಾನಿ ಚ ।
ಗರ್ಭವಾಸಂ ನ ಯಾಸ್ಯಂತಿ ತಾದೃಶೀಂ ಕುರು ಮೇ ಪ್ರಭೋ ॥ ೮೯ ॥

॥ ಶ್ರೀ ಭಗವಾನುವಾಚ ॥

ಯತ್ತ್ವಯಾ ವಾಂಛಿತಂ ಭದ್ರೇ ತತ್ಸರ್ವಂ ಚ ಭವಿಷ್ಯತಿ
ಧರ್ಮಕಾಮಾರ್ಥ ಮೋಕ್ಷಾಶ್ಚ ಭವಿಷ್ಯಂತಿ ನ ಸಂಶಯಃ ॥ ೯೦ ॥

---

ಮಾಡುತ್ತಾರೆಯೋ ಅವರು ನಿನ್ನ ವೈಕುಂಠವನ್ನು ಹೊಂದಬೇಕು. ರಾತ್ರಿಯಲ್ಲಿ ಜಾಗರಣೆಯನ್ನು ಮಾಡಬೇಕು. ಹೀಗೆ ಜಾಗರಣೆಯನ್ನು ಮಾಡುವಾಗ ಗಂಟೆ ಗಂಟೆಗೂ ಪುಣ್ಯವೃದ್ಧಿಯೂ, ಪಾಪನಾಶವೂ ಆಗಬೇಕು. ಈ ರೀತಿಯಾಗಿ ಉಪವಾಸ ಮಾಡಿ ನನ್ನ ಈ ಏಕಾದಶಿ ವ್ರತವನ್ನು ಯಾರು ಮಾಡುತ್ತಾರೆಯೋ ಅವರಿಗೆ ವೈಕುಂಠವು ದೊರಕಬೇಕು. ಹೂವು, ದೂಪ, ದೀಪಗಳಿಂದಲೂ, ಭಕ್ತಿ ಯಿಂದಲೂ ವಿಷ್ಣುವನ್ನು ಪೂಜಿಸಿ, ರಾತ್ರಿಯಲ್ಲಿ ಜಾಗರಣೆ ಮಾಡಿದರೆ ಅವನು ಪಾಪದಿಂದ ಮುಕ್ತನಾಗಬೇಕು.

೮೯. ಅಂಥವನಿಗೆ ವೈಷ್ಣವಲೋಕವನ್ನು ಕೊಟ್ಟು, ನೂರುಕೋಟಿ ಕಲೆ ಗಳನ್ನು ಕೊಡು. ಅವರು ಗರ್ಭವಾಸವನ್ನು ಹೊಂದಕೂಡದು. ಆರೀತಿಯಾಗಿ ಮಾಡಬೇಕು.

೯೦. ಶ್ರೀ ಭಗವಂತನು ಹೇಳಿದನು–ಎಲೈ ಭದ್ರೆಯೆ! ನೀನು ಅಪೇಕ್ಷಿಸು ವುದೆಲ್ಲವೂ, ಉಂಟಾಗಲಿ. ಧರ್ಮ, ಅರ್ಥ, ಕಾಮ ಮೋಕ್ಷಗಳು ಸಿದ್ಧಿಸುವುವು, ಸಂಶಯವಿಲ್ಲ.

|| ಮಹಾದೇವ ಉವಾಚ ||

ಏಕಾದಶೀ ಅಹೋರಾತ್ರಂ ದಶಮೀ ಘಟಿಕಾಪಿ ಚೇತ್ ।
ಸಾ ತಿಥಿಃ ಪರಿಹರ್ತವ್ಯಾ ಹ್ಯುಪೋಷ್ಯಾ ದ್ವಾದಶೀ ಶುಭಾ　　|| ೯೧ ||

ಏಕಾದಶೀ ತು ಸಂಪೂರ್ಣಾ ದ್ವಾದಶೀ ವೃದ್ಧಿಗಾಮಿನೀ ।
ತಸ್ಯಾಂ ಶತಗುಣಂ ಪುಣ್ಯಂ ತ್ರಯೋದಶ್ಯಾಂ ತು ಪಾರಣಾ　　|| ೯೨ ||

ನ ಗಂಗಾ ನ ಗಯಾ ಭೂಮೌ ನ ಕಾಶೀ ನ ಚ ಪುಷ್ಕರಂ ।
ನ ಚಾಪಿ ವೈಷ್ಣವಂ ಕ್ಷೇತ್ರಂ ತುಲ್ಯಂ ಹರಿದಿನೇನ ತು　　|| ೯೩ ||

ಯಃ ಕರೋತಿ ನರೋ ಭಕ್ತ್ಯೈಕಾದಶೀಂ ವಿಷ್ಣುವಲ್ಲಭಾಂ ।
ಐಹಿಕಂ ಚ ಫಲಂ ಪ್ರಾಪ್ಯ ಹ್ಯನ್ತೇ ಮೋಕ್ಷಮವಾಪ್ನುಯಾತ್　　|| ೯೪ ||

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಪತಿ
ನಾರದ ಸಂವಾದೇ ಏಕಾದಶ್ಯುತ್ಪತಿರ್ನಾಮ
ಷಟ್ತ್ರಿಂಶೋಽಧ್ಯಾಯಸ್ಸಮಾಪ್ತಃ

---

೯೧-೯೪. ಶಿವನು ಹೇಳಿದನು—ದಿನದಲ್ಲಿ ಏಕಾದಶಿಯು ರಾತ್ರಿ ಹಗಲೂ ಪೂರ್ತಿಯಾಗಿದ್ದು, ದಶಮಿಯು ಒಂದುಘಳಿಗೆ ಆದಿನವಿದ್ದರೂ, ಆ ದಶಮಿಯಿಂದ ಕೂಡಿದ ಏಕಾದಶಿಯನ್ನು ಬಿಟ್ಟುಬಿಡಬೇಕು. ಆ ಮಾರನೆಯ ದ್ವಾದಶಿಯ ಉಪವಾಸವು ಶುಭವಾದುದು. ಏಕಾದಶಿಯು ದಿನವೆಲ್ಲವೂ ಪೂರ್ತಿಯಾಗಿದ್ದು, ದ್ವಾದಶಿಯು ಮುಂದಿನ ದಿನವೂ ವೃದ್ಧಿಯಾಗಿದ್ದರೆ ಆ ದಿನವೂ ಉಪವಾಸವಿದ್ದು ತ್ರಯೋದಶಿಯ ದಿನ ಪಾರಣೆ ಮಾಡಬೇಕು. ಆದಿನ ಉಪವಾಸ ಮಾಡಿದರೆ ನೂರುಪಾಲು ಪುಣ್ಯಹೆಚ್ಚುಂಟು. ಹರಿದಿನಕ್ಕೆ ಸಮಾನವಾದ ಪುಣ್ಯವನ್ನು ಗಂಗೆ, ಗಯೆ, ಕಾಶಿ, ಪುಷ್ಕರ ಇವು ಯಾವುವೂ ಕೊಡುವುದಿಲ್ಲ. ಆದಿನಕ್ಕೆ ಸಮಾನವಾದ ಕ್ಷೇತ್ರಗಳೇ ಯಾವುವೂ ಇಲ್ಲ. ವಿಷ್ಣುವಿಗೆ ಪ್ರೀತಿಪಾತ್ರವಾದ, ಈ ಏಕಾದಶಿವ್ರತವನ್ನು ಭಕ್ತಿಯಿಂದ ಯಾವನು ಮಾಡುವನೋ ಅವನು ಈ ಲೋಕದ ಫಲವನ್ನು ಹೊಂದಿ, ಸತ್ತನಂತರ ಮೋಕ್ಷವನ್ನು ಹೊಂದುತ್ತಾನೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಪತಿ ನಾರದರ
ಸಂವಾದದಲ್ಲಿ ಏಕಾದಶಿಯ ಉತ್ಪತ್ತಿ ಎಂಬ ಹೆಸರಿನ
ಮೂವತ್ತಾರನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ಸಪ್ತತ್ರಿಂಶೋಽಧ್ಯಾಯಃ ||



|| ಮಹಾದೇವ ಉವಾಚ ||

ಅತಸ್ತ್ವಾಂ ಸಂಪ್ರವಕ್ಷ್ಯಾಮಿ ಹ್ಯುನ್ಮೀಲನೀಮನುತ್ತಮಾಂ |
ಯಸ್ಯಾಃ ಶ್ರವಣಮಾತ್ರೇಣ ಜನ್ಮಸಂಸಾರಬಂಧನಾತ್ || ೧ ||

ಯಥಾತ್ಮಾ ಮುಚ್ಯತೇ ಪಾಪೈಃ ಸ್ವರ್ಗಲೋಕೇ ಮಹೀಯತೇ ।
ಪ್ರಾಪ್ಯ ದೇವಾನ್ಪಿತೄಂಶ್ಚೈವ ತಸ್ಯಾ ಗತಿಮವಾಪ್ನುಯಾತ್ || ೨ ||

ವಿದ್ಯಾರ್ಥೀ ಲಭತೇ ವಿದ್ಯಾಂ ಸರ್ವಕಾಮಾನವಾಪ್ನುಯಾತ್ |
ತಸ್ಯ ಚಾತ್ರ ನ ಸಂದೇಹಃ ಸ್ವರ್ಗಲೋಕೇ ಮಹೀಯತೇ || ೩ ||

---

## ಮೂವತ್ತೇಳನೆಯ ಅಧ್ಯಾಯವು



೧-೨. ಮಹಾದೇವನು ಹೇಳಿದನು–ಇನ್ನುಮೇಲೆ ನಿನಗೆ, ಉನ್ಮೀಲನೀ ಎಂಬ ಉತ್ತಮ ವ್ರತವನ್ನು ಹೇಳುತ್ತೇನೆ. ಇದನ್ನು ಕೇಳುವುದರಿಂದಲೇ, ಮನುಷ್ಯನು ಜನ್ಮಬಂಧ ಸಂಸಾರ ಬಂಧಗಳಿಂದಲೂ, ಪಾಪಗಳಿಂದಲೂ, ಮುಕ್ತನಾಗಿ ಸ್ವರ್ಗದಲ್ಲಿ ಸುಖಿಸುತ್ತಾನೆ. ದೇವತೆಗಳನ್ನೂ, ಪಿತೃಗಳನ್ನೂ ಹೊಂದಿ. ಅವರಿರುವ ಜಾಗಕ್ಕೆ ಹೋಗುವನು.

೩. ವಿದ್ಯಾರ್ಥಿಯಾದವನು, ವಿದ್ಯೆಯನ್ನೂ, ಹೊಂದುವುದಲ್ಲದೆ, ಎಲ್ಲಾ ಇಷ್ಟಾರ್ಥಗಳನ್ನೂ, ಹೊಂದುವನು. ಮತ್ತು ಸ್ವರ್ಗದಲ್ಲಿಯೂ ಸುಖಿಸುವನು. ಸಂದೇಹವಿಲ್ಲ.

ಸ್ವಸ್ಥಾನಂ ತತ್ರ ವೈ ಪ್ರಾಪ್ತಃ ಶಿವಲೋಕೇ ಮಹೀಯತೇ ।
ಅತಸ್ತ್ವಂ ಕುರುಷೇ ರಾಜ ವೈಷ್ಣವಾನಾಂ ತು ಪೂಜನಂ　　॥ ೪ ॥

ವೈಷ್ಣವಾನಾಂ ತು ಯೇ ರಾಜನ್ನಪಕುರ್ವಂತಿ ನಿತ್ಯಶಃ ।
ತೇಷಾಂ ದಂಡಂ ತು ಕುರುಷೇ ನೋ ವಾ ತೇಷಾಂ ನರಾಧಿಪ　　॥ ೫ ॥

ಭೋಜನಾಂತರಂ ತೇಷಾಂ ಭೋಜನಂ ಕುರುಷೇ ನೃಪ ।
ತೈರೇವ ಪೂಜಿತೋ ವಿಷ್ಣುರ್ಯೈರ್ಭಕ್ತಾಸ್ತು ಪ್ರಪೂಜಿತಾಃ　　॥ ೬ ॥

ಸಾಲಗ್ರಾಮಶಿಲಾಭೂತಾಂ ದತ್ವಾ ಮೂರ್ಧನಿ ಪ್ರತ್ಯಹಂ ।
ತ್ವಂ ಧಾರಯಸಿ ಭೂಪಾಲ ಕಂಠೇ ನಿತ್ಯಂ ಸುಭಕ್ತಿತಃ　　॥ ೭ ॥

ಧೂಪಶೇಷಂ ತು ವೈ ವಿಷ್ಣೋರ್ಭಕ್ತ್ಯಾ ಭಜಸಿ ಭೂಭುಜ ।
ಆರಾರ್ತಿಕಂ ಸದಾ ಕೃತ್ವಾ ಭಕ್ತಾನಾಂ ವೇದಯೇನ್ನೃಪ　　॥ ೮ ॥

---

೪. ಅವನು ಸ್ವರ್ಗವನ್ನು ಹೊಂದಿದವನಾಗಿ, ಶಿವಲೋಕಕ್ಕೂ ಹೋಗುತ್ತಾನೆ. ಎಲೈ ರಾಜನೆ! ಆದುದರಿಂದ ಈ ಉನ್ಮೀಲಿನೀ ವ್ರತವನ್ನು, ನೀನು ಮಾಡು. ವೈಷ್ಣವರನ್ನು ಭಕ್ತಿಯಿಂದ ಪೂಜಿಸು.

೫. ವೈಷ್ಣವರಿಗೆ ಯಾರು ನಿತ್ಯವೂ ಅಪಕಾರ ಮಾಡುತ್ತಾರೆಯೋ ಅವರಿಗೆಲ್ಲಾ, ಶಿಕ್ಷೆಯನ್ನು ವಿಧಿಸು. ಆ ರೀತಿ ಅಪರಾಧ ಮಾಡಿದರೆ ನನಗೂ ದಂಡವನ್ನು ವಿಧಿಸು.

೬. ಆ ವಿಷ್ಣು ಭಕ್ತರಿಗೆ ಭೋಜನವಾದಮೇಲೆ, ನೀನು ಭೋಜನಮಾಡಬೇಕು. ಭಕ್ತರನ್ನು ಪೂಜೆಮಾಡಿದರೆ, ಅದರಿಂದಲೇ ವಿಷ್ಣುವು ಪೂಜಿತನಾಗುತ್ತಾನೆ.

೭. ಸಾಲಿಗ್ರಾಮದ ಶಿಲೆಯ ರೂಪವಾದ, ವಿಷ್ಣುವನ್ನು ದಿನವೂ ತಲೆಯ ಮೇಲೆ ಇಟ್ಟುಕೊಂಡು ಆ ಸಾಲಗ್ರಾಮವನ್ನು ಕತ್ತಿನಲ್ಲಿಯೂ ಧರಿಸಿಕೊಳ್ಳಬೇಕು.

೮. ಧೂಪವನ್ನು ವಿಷ್ಣುವಿಗೆ ಸಮರ್ಪಿಸಿ, ಆ ಶೇಷವನ್ನು ಭಕ್ತಿಯಿಂದ, ನೀನು ಸ್ವೀಕರಿಸಬೇಕು. ಮಂಗಳಾರತಿಯನ್ನು ಮಾಡಿ, ಭಕ್ತರೆಲ್ಲರಿಗೂ ಕೊಡಬೇಕು.

**ಶಂಖೋದಕಂ ಹರೇಃ ಮೂರ್ಧ್ನಿ ಭ್ರಾಮಯಿತ್ವಾ ತು ಭಕ್ತಿತಃ ।**
**ನಿತ್ಯಂ ಬಿಭರ್ಷಿ ಶಿರಸಿ ಶೇಷಂ ಯಚ್ಛಸಿ ವೈಷ್ಣವಾನ್ ॥ ೯ ॥**

**ನೈವೇದ್ಯಂ ಪ್ರತ್ಯಹಂ ಕೃತ್ವಾ ಸರ್ವೋಪಸ್ಕರಸಂಯುತಂ ।**
**ವಿಷ್ವಕ್ಸೇನಾಯ ದತ್ವಾ ವೈ ಸ್ವಯಂ ಭುನಕ್ಷಿ ವಾ ನೃಪ ॥ ೧೦ ॥**

**ವಿಷ್ಣೋರ್ನಿವೇದಿತಂ ಚಾನ್ನಂ ವೈಷ್ಣವೈಸ್ಸಹ ಭುಜ್ಯತೇ ।**
**ನಿತ್ಯಂ ನಾಮಸಹಸ್ರೇಣ ಭಕ್ತ್ಯಾ ತೋಷಿ ಜನಾರ್ದನಂ ॥ ೧೧ ॥**

**ವಿಷ್ಣೋರ್ದೀಪಾರ್ಘದಾನಾನ್ತೇ ಕುರುಷೇ ಗೀತನರ್ತನಂ ।**
**ಶ್ಯಾಮಾಂಕುರೈಃ ಪೂಜಯಸೇ ಪೂಜಾಂತೇ ನೃಪಸತ್ತಮ ॥ ೧೨ ॥**

**ಶ್ಯಾಮಾಂಕುರೈಸ್ಸದಾ ವತ್ಸ ಪೂಜನಂ ಅತಿದುರ್ಲಭಂ ।**
**ಪೃಥ್ವೀ ದಾನಸಮಂ ಪುಣ್ಯಂ ದೂರ್ವಯಾ ಪೂಜನೇ ಕೃತೇ ॥ ೧೩ ॥**

---

೯. ಶಂಖದಲ್ಲಿ ನೀರನ್ನು, ತೆಗೆದುಕೊಂಡು ಆ ಸಾಲಗ್ರಾಮರೂಪವಾದ ಸ್ವಾಮಿಯ ತಲೆಯಮೇಲೆ, ತಿರುಗಿಸಿ, ಆ ತೀರ್ಥವನ್ನು ನೀನು ತಲೆಯಮೇಲೆ ಪ್ರೋಕ್ಷಿಸಿಕೊಂಡು, ಉಳಿದುವನ್ನು ವೈಷ್ಣವರಿಗೂ ಕೊಡಬೇಕು.

೧೦. ಪ್ರತಿದಿನವೂ ನೈವೇದ್ಯವನ್ನು, ಅದಕ್ಕೆ ಬೇಕಾದ ಪದಾರ್ಥಗಳೊಡನೆ ವಿಷ್ಣುವಿಗೆ ಸಮರ್ಪಿಸಿ, ಅದನ್ನು ವಿಷ್ವಕ್ಸೇನನಿಗೆ ಸಮರ್ಪಿಸಿ ಅನಂತರ ಅದನ್ನು ನೀನು ಊಟಮಾಡಬೇಕು.

೧೧. ವಿಷ್ಣುವಿಗೆ ನಿವೇದನಮಾಡಿ, ಆ ಅನ್ನವನ್ನು ವೈಷ್ಣವರೊಡನೆ ಊಟ ಮಾಡಬೇಕು. ನಿತ್ಯವೂ ಸಹಸ್ರನಾಮವನ್ನು ಹೇಳಿ, ಭಕ್ತಿಯಿಂದ ಜನಾರ್ದನ ನನ್ನು, ಸಂತೋಷಪಡಿಸಬೇಕು.

೧೨. ವಿಷ್ಣುವಿಗೆ ಧೂಪ, ದೀಪ ನೈವೇದ್ಯ ಅರ್ಘ್ಯಗಳನ್ನು ಸಮರ್ಪಿಸಿ ಅವನಮುಂದೆ ಸಂಗೀತವನ್ನು ಹಾಡುತ್ತಾ, ಕುಣಿಯಬೇಕು. ಕೊನೆಯಲ್ಲಿ ಹಸುರುಗರಿಕೆಯಿಂದ ಪೂಜೆಮಾಡಿ, ಪೂಜೆಯನ್ನು ಮುಗಿಸಬೇಕು.

೧೩. ಎಲೈ ನಾರದನೆ! ಹಸರು ಗರಿಕೆಯಿಂದ ಪೂಜೆಮಾಡುವುದು ದುರ್ಲಭವು. ಆ ಗರಿಕೆಯಿಂದ ಪೂಜೆ ಮಾಡಿದರೆ ಭೂಮಿಯನ್ನೆಲ್ಲಾ ದಾನ ಮಾಡಿದ ಪುಣ್ಯವು ಬರುವುದು.

ಅತೋ ವೈ ನಾಸ್ತಿ ಲೋಕೇಽಸ್ಮಿನ್ ದೂರ್ವಯಾ ಸದೃಶಂ ಭುವಿ ।
ತಯಾ ವೈ ಪೂಜನಂ ಕಾರ್ಯಂ ವಿಷ್ಣುಸಾಯುಜ್ಯ ಮಿಚ್ಛತಾ || ೧೪ ||

ಅತಸ್ತ್ವಂ ಕುರುಷೇ ನಿತ್ಯಂ ಪೂಜನಂ ದೂರ್ವಯಾ ಸಹ ।
ಯವಾಕ್ಷತೈರ್ವಿಶೇಷೇಣ ಪೂಜನಂ ಕುರುಷೇ ನ ವಾ || ೧೫ ||

ಪಕ್ಷೇ ಪಕ್ಷೇ ನೃಪಶ್ರೇಷ್ಠ ವಿಧಿವದ್ದ್ವಾದಶೀವ್ರತಂ ।
ಯತ್ಕೃತಂ ತು ಮಹಾರಾಜ ಮಹಾಪಾಪಪ್ರಣಾಶನಂ || ೧೬ ||

ಮೋಕ್ಷದಂ ಸುಖದಂ ಚೈವ ತಥಾ ಹ್ಯಾಯುಷ್ಯದಂ ಸದಾ ।
ಏತದ್ವಿಷ್ಣುವ್ರತಂ ಪ್ರೋಕ್ತಂ ವೈಷ್ಣವಾನಾಂ ತು ಮೋಕ್ಷದಂ || ೧೭ ||

ಗೃಹಸ್ಥಾನಾಂ ತು ಸುಖದಂ ಯತೀನಾಂ ಮುಕ್ತಿದಾಯಕಂ ।
ಸರ್ವರೋಗಾದಿ ಶಮನಂ ಪವಿತ್ರಂ ಕಾಯಶೋಧನಂ || ೧೮ ||

---

೧೪. ಆದುದರಿಂದಲೇ ದೂರ್ವೆಗೆ ಸಮವಾದುದು ಈ ಭೂಮಿಯಲ್ಲಿಯೇ ಇಲ್ಲ. ವಿಷ್ಣುವಿನ ಸಾಯುಜ್ಯಮೋಕ್ಷವನ್ನು ಅಪೇಕ್ಷಿಸುವವನು ಆ ದೂರ್ವೆಯಿಂದ ಪೂಜಿಸಬೇಕು.

೧೫. ಆದುದರಿಂದ ಎಲೈ ಧರ್ಮಜನೆ! ನೀನು ನಿತ್ಯವೂ ದೂರ್ವೆಯಿಂದ ಪೂಜೆ ಮಾಡು. ಯವಾಕ್ಷತೆಗಳಿಂದ ಪೂಜೆ ಮಾಡಿದರೆ ಮಾಡು. ಬಿಟ್ಟರೆ ಬಿಡು. ದೂರ್ವೆಯಿಂದ ಮಾಡದಿರಬೇಡ.

೧೬. ಎಲೈ ಧರ್ಮಜನೆ! ಪ್ರತಿ ಪಕ್ಷದಲ್ಲಿಯೂ ಏಕಾದಶ್ಯುಪವಾಸಮಾಡಿ ದ್ವಾದಶೀ ವ್ರತವನ್ನು ಮಾಡು. ಅದನ್ನು ಮಾಡಿದರೆ ಮಹಾ ಪಾಪಗಳು ಹೋಗುತ್ತವೆ.

೧೭. ಆ ದ್ವಾದಶಿ ವ್ರತವು ಮೋಕ್ಷವನ್ನು ಕೊಡುತ್ತದೆ. ಸುಖವನ್ನು ಕೊಡುತ್ತದೆ. ಆಯುಸ್ಸನ್ನು ಹೆಚ್ಚಿಸುತ್ತದೆ. ಇದು ವಿಷ್ಣುವ್ರತವೆನ್ನಿಸಿಕೊಳ್ಳುತ್ತದೆ. ವೈಷ್ಣವರಿಗೆ ಮೋಕ್ಷವನ್ನು ಕೊಡುತ್ತದೆ.

೧೮. ಈ ಏಕಾದಶ್ಯುಪವಾಸ ವ್ರತವು ಗೃಹಸ್ಥರಿಗೆ ಸುಖವನ್ನೂ, ಯತಿಗಳಿಗೆ ಮೋಕ್ಷವನ್ನೂ ಕೊಡುತ್ತದೆ. ಸರ್ವ ರೋಗಗಳನ್ನೂ ಹೋಗಲಾಡಿಸುತ್ತದೆ. ಪವಿತ್ರವಾದುದು. ದೇಹವನ್ನು ಶೋಧಿಸುತ್ತದೆ.

ವ್ರತಮೇತಚ್ಚ ಕುರುಷೇ ಸ ವಾ ಚೈವ ನರಾಧಿಪ ।
ಏಕಾಮೀ ವೇಧರಹಿತಂ ಕುರುಷೇ ಜಾಗರಾನ್ವಿತಂ ॥ ೧೯ ॥

ತುಲಸೀಪತ್ರನಿಕರೈರ್ನಿತ್ಯಂ ಪೂಜಯಸೇ ಹರಿಂ ।
ಗೋಪೀಚಂದನಜಂ ಪುಂಡ್ರಂ ಭಾಲೇ ವಾ ನೃಪಸತ್ತಮ ॥ ೨೦ ॥

ಧಾರಿತಂ ಸರ್ವಲೋಕಾನಾಂ ಪವಿತ್ರೀಕರಣಂ ನೃಪ ।
ಅಸ್ತ್ರಂ ಚ ಧಾರಯ ಸದಾ ಗೋಪೀಚಂದನಸಂಭವಂ ॥ ೨೧ ॥

ಬ್ರಹ್ಮಹಾ ಹೇಮಹಾರೀ ಚ ಮದ್ಯಪಾನೀ ತಥೈವ ಚ ।
ಅಗಮ್ಯಾಗೋ ಮಹಾಪಾಪೀ ತಥಾ ಹ್ಯನೃತಭಾಷಿತಃ ॥ ೨೨ ॥

ತೇ ಸರ್ವೇ ಮುಕ್ತಿಮಾಯಾನ್ತಿ ತಿಲಕಧಾರಣಾದತಃ ।
ಬಿಭರ್ಷಿ ಕಂಠೇ ನಿತ್ಯಂ ತ್ವಂ ಧಾತ್ರೀಫಲಸಮುದ್ಭವಂ ॥ ೨೩ ॥

ಮಾಲಾಂ ಮುಖ್ಯಾಮುತ ಸಮಾಂ ತುಲಸೀಪತ್ರಸಂಭವಾಂ ।
ಸಾಲಗ್ರಾಮಶಿಲಾಯುಕ್ತಂ ದ್ವಾರಕಾಯಾಂ ಸಮುದ್ಭವಂ ॥ ೨೪ ॥

---

೧೯. ಎಲೈ ಧರ್ಮಜನೆ! ಈ ಏಕಾದಶಿ ವ್ರತವನ್ನು ಮಾಡಿಯೇ ಮಾಡು. ಆ ಏಕಾದಶಿಯು ದಶಮಿಯಿಂದ ವಿದ್ಧವಾಗಿರಬಾರದು. ಜಾಗರಣೆಯನ್ನು ಮಾಡು. ಹಾಗಾದರೆ ಫಲ ಬರುತ್ತದೆ.

೨೦–೨೧. ತುಳಸಿಯ ದಳಗಳಿಂದ, ಹರಿಯನ್ನು ಯಾವಾಗಲೂ ಪೂಜಿಸು. ಗೋಪಿಚಂದನದಿಂದ ನಾಮಗಳನ್ನು ಹಾಕಿಕೊ. ಆ ಗೋಪಿಚಂದನದ ಧಾರಣವು ಲೋಕದಲ್ಲಿಯೇ ಬಹು ಪವಿತ್ರವಾದುದು. ಶಂಖ, ಗದೆ ಮುಂತಾದುವನ್ನೂ ಗೋಪಿಚಂದನದಿಂದ ಧರಿಸು.

೨೨–೨೪. ಚಿನ್ನವನ್ನು ಕದ್ದವನು, ಹೆಂಡ ಕುಡಿದವನು, ಗುರುವಿನ ಹೆಂಡತಿಯಲ್ಲಿ ರಮಿಸಿದವನು, ಸುಳ್ಳು ಹೇಳಿದವನು ಇಂತಹ ಮಹಾಪಾಪಿಗಳೆಲ್ಲರೂ ಈ ಗೋಪೀಚಂದನದ ಧಾರಣದಿಂದ ಮುಕ್ತಿಯನ್ನು ಹೊಂದುತ್ತಾರೆ. ನೀನು ನಿತ್ಯವೂ ನೆಲ್ಲಿಕಾಯನ್ನು ಪೋಣಿಸಿರುವ ತುಲಸಿಯಮಾಲೆಯನ್ನು ಕತ್ತಿನಲ್ಲಿ ಧರಿಸಿಕೊಂಡಿರು. ಸಾಲಗ್ರಾಮ ಶಿಲಾರೂಪಿಯಾದ, ದ್ವಾರಕಾವಾಸಿಯಾದ

ನಿತ್ಯಂ ಪೂಜಯಸೇ ಭೂಪ ಭುಕ್ತಿಮುಕ್ತಿ ಫಲಪ್ರದಂ ।
ಪದ್ಮಸಂಜ್ಞಂ ಪುರಾಣಂ ವೈ ಪಠಸೇ ಪುರತೋಃ ಹರೇಃ ॥ ೨೫ ॥

ಚತದೈತ್ಯಸ್ಯ ರಾಜ್ಯಸ್ಯ ಆಹ್ಲಾದಸ್ಯ ಚ ಭೂಪತೇಃ ।
ವಾಸರಂ ವಾಸುದೇವಸ್ಯ ಸವೇಧಂ ಕುರ್ವತೋ ನರಾನ್ ॥ ೨೬ ॥

ನಿವಾರಯಸಿ ಭೂಪಾಲ ಶಾಸ್ತ್ರಂ ದೃಷ್ಟ್ವಾ ಪ್ರಯತ್ನತಃ ।
ಸವೇಧಂ ವಾಸರಂ ವಿಷ್ಣೋಃ ಯಸ್ಮಿನ್ ರಾಷ್ಟ್ರೇ ಪ್ರವರ್ತತೇ ॥ ೨೭ ॥

ಲಿಪ್ಯತೇ ತೇನ ಪಾಪೇನ ರಾಜಾ ಭವತಿ ನಾರಕೀ ।
ಕುಲಕೋಟಿಂ ಸಮುದ್ಧೃತ್ಯ ವಿಷ್ಣುಲೋಕೇ ಮಹೀಯತೇ ॥ ೨೮ ॥

॥ ಗೌತಮ ಉವಾಚ ॥

ಶೃಣು ಭೂಪಾಲ ವಕ್ಷ್ಯಾಮಿ ವೈಷ್ಣವಾಖ್ಯಂ ಮಹಾವ್ರತಂ ।
ಯಚ್ಛ್ರುತ್ವಾ ಪಾಪಿನಸ್ಸರ್ವೇ ಮುಕ್ತಿಮಾಯಾಂತಿ ತತ್ಕ್ಷಣಾತ್ ॥ ೨೯ ॥

---

ಶ್ರೀಕೃಷ್ಣನನ್ನು ನಿತ್ಯವೂ ಪೂಜಿಸು. ಹಾಗೆ ಮಾಡಿದರೆ ಭುಕ್ತಿಯೂ, ಮುಕ್ತಿಯೂ ಸಿಕ್ಕುತ್ತವೆ. ಪದ್ಮಪುರಾಣವನ್ನು ದೇವರೆದುರಿಗೆ ಯಾವಾಗಲೂ ಓದುತ್ತಿರು.

೨೬–೨೮. ಚತನೆಂಬ ದೈತ್ಯನ ರಾಜ್ಯಕ್ಕೂ, ಆಹ್ಲಾದನೆಂಬ ದೊರೆಯ ರಾಜ್ಯಕ್ಕೂ ತೊಂದರೆಯನ್ನುಂಟುಮಾಡುವವರನ್ನೂ, ವಾಸುದೇವನ ಸಂಬಂಧ ವಾದ ಏಕಾದಶಿ-ತಿಥಿಯನ್ನೂ, ದಶಮಿಯಿಂದ ವೇಧೆಯಿರುವಾಗ ಮಾಡುವವರನ್ನೂ ನಿಗ್ರಹಿಸಿ, ಸರಿಯಾಗಿ ನಡೆವಂತೆ ಮಾಡು. ಆ ನಿಗ್ರಹವನ್ನು ಶಾಸ್ತ್ರಾನುಸಾರವಾಗಿ ಮಾಡು. ವೇಧೆಯಿಂದ ಕೂಡಿ ನಿಷಿದ್ಧವಾದ, ವಿಷ್ಣುವಿನ ದಿನಗಳು, ಯಾವ ರಾಜ್ಯದಲ್ಲಿ ಆಚರಿಸಲ್ಪಡುತ್ತವೆಯೋ, ಆ ರಾಜ್ಯದಲ್ಲಿ ರಾಜನು ಆ ಪ್ರಜೆಗಳ ಪಾಪದಿಂದ ಕೂಡಿದವನಾಗಿ, ನರಕಭಾಗಿಯಾಗುತ್ತಾನೆ. ನಾಲ್ಕು ಬಗೆಯಾದ ವೇಧೆಗಳನ್ನು ಬಿಟ್ಟು ಹರಿವಾಸರದಲ್ಲಿ ಉಪವಾಸ ಮಾಡಿದರೆ, ತನ್ನ ಕೋಟಿ ಕುಲ ಗಳನ್ನು ಉದ್ಧಾರ ಮಾಡಿ ವಿಷ್ಣುಲೋಕದಲ್ಲಿ ಸುಖಿಸುತ್ತಾನೆ.

೨೯. ಗೌತಮನು ಹೇಳಿದನು– ಎಲೈ ದೊರೆಯೆ! ವೈಷ್ಣವ ವ್ರತವನ್ನು ಹೇಳುತ್ತೇನೆ. ಕೇಳು. ಅದನ್ನು ಕೇಳಿದುದರಿಂದಲೇನೆ, ಪಾಪಿಗಳು ಪಾಪಗಳನ್ನು ಕಳೆದುಕೊಂಡು ಮುಕ್ತಿಯನ್ನು ಹೊಂದುತ್ತಾರೆ.

ದ್ವಾದಶೀಸಂಭವಂ ಪುಣ್ಯಂ ಮಯಾಖ್ಯಾತಂ ನ ಕಸ್ಯ ಚಿತ್ ।
ವೈಷ್ಣವೋಽಸಿ ಮಹಾರಾಜ ಭಕ್ತೋ ಭಾಗವತೋ ನೃಣಾಂ ॥ ೩೦ ॥

ವೈಷ್ಣವಂ ತನ್ಮಹಾಗುಪ್ತಂ ತದ್ವ್ರತಂ ತ್ವಂ ನಿಶಾಮಯ ।
ಉನ್ಮೀಲಿನೀ ನಾಮ ಪುರಾ ಭಕ್ತ್ಯಾ ಮೇ ಮಾಧವೇನ ತು ॥ ೩೧ ॥

ಕಥಿತಾ ಸುಪ್ರಸನ್ನೇನ ತಾಂ ತೇ ಭೂಪ ವದಾಮ್ಯಹಂ ।
ಏಕಾದಶೀ ಹ್ಯಹೋರಾತ್ರಂ ಪ್ರಭಾತೇ ಘಟಿಕಾ ಭವೇತ್ ॥ ೩೨ ॥

ಉನ್ಮೀಲಿನೀ ತು ಸಾ ಜ್ಞೇಯಾ ವಿಶೇಷೇಣ ಹರಿಪ್ರಿಯಾ ।
ತ್ರೈಲೋಕ್ಯೇ ಯಾನಿ ತೀರ್ಥಾನಿ ಪುಣ್ಯಾನ್ಯಾಯತನಾನಿ ಚ ॥ ೩೩ ॥

ಕೋಟ್ಯಂಶೇನೈವ ತುಲ್ಯಾನಿ ಮಖಾ ವೇದಾ ಸ್ತಪಾಂಸಿ ಚ ।
ಉನ್ಮೀಲಿನೀ ಸಮಂ ಕಿಂಚಿನ್ನ ಭೂತಂ ನ ಭವಿಷ್ಯತಿ ॥ ೩೪ ॥

---

೩೦. ಎಲೈ ದೊರೆಯೆ! ದ್ವಾದಶಿಯಿಂದ ಬರುವ ಪುಣ್ಯವನ್ನು ನಾನು ಯಾರಿಗೂ ಹೇಳಿಲ್ಲ. ನೀನು ವೈಷ್ಣವನಾಗಿದ್ದೀಯೆ. ಭಾಗವತರಲ್ಲಿ ಬಹು ಭಕ್ತಿಯಿಂದಿರುವೆ.

೩೧-೩೪. ಅದು ಬಲು ರಹಸ್ಯವಾದ ವೈಷ್ಣವ ವ್ರತವು. ಅದನ್ನು ನೀನು ಕೇಳು. ಉನ್ಮೀಲಿನಿ ಎಂಬ ಒಂದು ವ್ರತವು ಇರುವುದು. ಅದನ್ನು ಮಾಧವನು ನನಗೆ ಹೇಳಿರುವನು. ಅದನ್ನು ಈಗ ನಾನು ನಿನಗೆ ಹೇಳುತ್ತೇನೆ. ಏಕಾದಶಿಯು ದಿನವೆಲ್ಲವೂ ಪೂರ್ತಿಯಾಗಿದ್ದು, ಮಾರನೆದಿನ ಬೆಳಗ್ಗೆ ಒಂದು ಘಳಿಗೆಯಿದ್ದರೆ ಅದು ಉನ್ಮೀಲಿನೀ ಏಕಾದಶಿ ಎಂದೆನಿಸಿಕೊಳ್ಳುತ್ತದೆ. ಅದು ಹರಿಗೆ ಬಹು ಪ್ರಿಯವಾದುದು. ಮೂರು ಲೋಕದಲ್ಲಿರುವ ತೀರ್ಥಗಳೂ, ಪುಣ್ಯಸ್ಥಾನಗಳೂ, ವೇದಗಳೂ, ತಪಸ್ಸುಗಳೂ ಈ ಉನ್ಮೀಲಿನಿಯ ಕೋಟಿ ಅಂಶದಲ್ಲಿ ಒಂದಂಶಕ್ಕೆ ಸಮವಿಲ್ಲ. ಮತ್ತು ಆ ಉನ್ಮೀಲಿನಿಯ ಸಮವು ಹಿಂದೆಯೂ ಇಲ್ಲ. ಮುಂದೆಯೂ ಇರುವುದಿಲ್ಲ.

ಪ್ರಯಾಗೋ ನ ಕುರುಕ್ಷೇತ್ರಂ ನ ಕಾಶೀ ನ ಚ ಪುಷ್ಕರಂ ।
ಶೈಲೋ ಹಿಮಾಚಲೋ ನೈವ ನ ಮೇರುರ್ಗಂಧಮಾದನಃ ॥ ೩೫ ॥

ಶೈಲೋ ನೈವೇಹ ಮಲಯೋ ವಿಂಧ್ಯೋ ನೈವ ಚ ನೈಮಿಷಂ ।
ಗೋದಾವರೀ ನ ಕಾವೇರೀ ಚಂದ್ರಭಾಗಾ ನ ವೇದಿಕಾ ॥ ೩೬ ॥

ನ ತಾಪೀ ನ ಪಯೋಷ್ಣೀ ಚ ಶಿವಾಪ್ತಾ ನೈವ ಚಂದನಾ ।
ಚರ್ಮಣ್ವತೀ ಚ ಸರಯೂಶ್ಚಂದ್ರಭಾಗಾ ನ ಗಿಲ್ಲಕಾ ॥ ೩೭ ॥

ಗೋಮತೀ ಚ ವಿಪಾಶಾ ಚ ಶೋಣಾಖ್ಯಶ್ಚ ಮಹಾಹ್ರದಃ ।
ಕಿಮತ್ರ ಬಹುನೋಕ್ತೇನ ಭೂಯೋ ಭೂಯೋ ನರಾಧಿಪ ॥ ೩೮ ॥

ಉನ್ಮೀಲಿನೀಸಮಂ ಕಿಂಚಿನ್ನ ದೇವಃ ಕೇಶವಾತ್ಪರಃ ।
ಉನ್ಮೀಲಿನೀಮನುಪ್ರಾಪ್ಯ ಯೈಃ ಕೃತಂ ಕೇಶವಾರ್ಚನಂ ॥ ೩೯ ॥

ಪಾಪಚಕ್ರಸಮೂಹಸ್ಯ ರಾಶಿಂ ನಾಶಯತಿ ಕ್ಷಣಾತ್ ।
ಯಸ್ಮಿನ್ ಮಾಸೇ ಮಹೀಪಾಲ ತಿಥಿರುನ್ಮೀಲಿನೀ ಭವೇತ್ ॥ ೪೦ ॥

---

೩೫–೩೬. ಪ್ರಯಾಗ, ಕುರುಕ್ಷೇತ್ರ, ಕಾಶಿ, ಪುಷ್ಕರ, ಹಿಮಾಚಲ, ಮೇರು, ಗಂಧಮಾದನ, ಮಲಯ, ವಿಂಧ್ಯ, ನೈಮಿಷ, ಗೋದಾವರಿ, ಕಾವೇರಿ, ಚಂದ್ರಭಾಗೆ, ವೇದಿಕೆ ಇವುಗಳಾವುವೂ ಈ ಉನ್ಮೀಲಿನಿಯ ಪುಣ್ಯವನ್ನು ಕೊಡುವುದಿಲ್ಲ.

೩೭–೩೮. ತಪತಿ, ಪಯೋಷ್ಣೀ, ಶಿವಾಪ್ತೆ, ಚಂದನೆ, ಚರ್ಮಣ್ವತಿ, ಸರಯೂ, ಚಂದ್ರಭಾಗೆ, ಗಿಲಕಾ, ಗೋಮತಿ, ವಿಪಾಶೆ, ಶೋಣಾ ಇವುಗಳೊಂದೂ ಆ ಉನ್ಮೀಲಿನಿಯ ಫಲವನ್ನು ಕೊಡುವುದಿಲ್ಲ. ಮತ್ತೆ ಮತ್ತೆ ಹೇಳುವುದರಿಂದ ಉಪಯೋಗವೇನಿರುವುದು ?

೩೯–೪೩. ಉನ್ಮೀಲಿನಿಗೆ ಸಮವಾದ ವ್ರತವಿಲ್ಲ. ಕೇಶವನಿಗಿಂತಲೂ ಬೇರೆ ಯಾದ ದೇವರಿಲ್ಲ. ಉನ್ಮೀಲಿನಿಯನ್ನು ಹೊಂದಿ, ಕೇಶವನ ಪೂಜೆಯನ್ನು ಮಾಡಿದರೆ, ಒಡನೆಯೇ ಪಾಪಗಳ ಸಮೂಹವೆಲ್ಲವೂ ನಾಶವಾಗುತ್ತವೆ. ಆ ಉನ್ಮೀಲಿನೀ ಏಕಾದಶಿಯು ಯಾವ ಮಾಸದಲ್ಲಿ ಬರುತ್ತದೆಯೋ ಕೇಶವನನ್ನು

ತನ್ಮಾಸನಾಮ್ನಾ ಗೋವಿಂದಃ ಪೂಜನೀಯಃ ಪ್ರಯತ್ನತಃ ।
ಜಾತರೂಪಮಯಃ ಕಾರ್ಯೋ ಮಾಸನಾಮ್ನಾ ತು ಮಾಧವಃ ॥ ೪೧ ॥

ಸ್ವಶಕ್ತ್ಯಾ ವಿಶ್ವರೂಪಂ ತು ಶ್ರದ್ಧಾಭಕ್ತಿಸಮನ್ವಿತಃ ।
ಪವಿತ್ರೋದಕಸಂಯುಕ್ತಂ ಪಂಚರತ್ನಸಮನ್ವಿತಂ ॥ ೪೨ ॥

ಗಂಧಪುಷ್ಪಾಕ್ಷತೈರ್ಯುಕ್ತಂ ಕುಂಭಂ ಸ್ರಗ್ದಾಮಭೂಷಿತಂ ।
ಪಾತ್ರಂ ಚ ಸೋದರಂ ಕಾರ್ಯಂ ಗೋಧೂಮೈಶ್ಚಾಪಿ ಪೂರಿತಂ ॥ ೪೩ ॥

ನಾನಾ ರತ್ನೈಶ್ಚ ಸಂಯುಕ್ತಂ ನಾನಾಗಂಧೈಃ ಪ್ರಪೂಜಿತಂ ।
ಮಲ್ಲಿಕಾಮೋದಸಂಯುಕ್ತಂ ಜಾತೀಪುಷ್ಪೈಃ ಪ್ರಪೂಜಿತಂ ॥ ೪೪ ॥

ಶ್ವೇತಾಕ್ಷತೈಸ್ತಂಡುಲೈಶ್ಚ ಪೂರಣೀಯಂ ಪ್ರಯತ್ನತಃ ।
ಪ್ರದದ್ಯಾದ್ವಸ್ತ್ರಯುಗ್ಮಂ ತು ಉಪವೀತಂ ತು ಸೋತ್ತರಂ ॥ ೪೫ ॥

ಉಪಾನಹೌ ತು ರಾಜರ್ಷೇ ಆತಪತ್ರಂ ಶಿರೋಪರಿ ।
ಭಾಜನಂ ಜಲಪಾತ್ರಂ ಚ ಸಪ್ತಧಾನ್ಯಂ ತಿಲೈಸ್ಸಹ ॥ ೪೬ ॥

---

ಆ ಮಾಸದ ಹೆಸರಿನಿಂದ ಪೂಜಿಸಬೇಕು. ಆ ಮಾಸದ ಹೆಸರನ್ನು ಆ ಉನ್ಮೀಲಿನಿಗೆ ಹೇಳಬೇಕು. ಆ ಕೇಶವನನ್ನು ಚಿನ್ನದಲ್ಲಿ ಮಾಡಿಸಬೇಕು. ಅದಕ್ಕೆ ಆ ಮಾಸದ ಹೆಸರನ್ನು ಇಡಬೇಕು. ಆ ಸ್ವಾಮಿಯನ್ನು ಶಕ್ತ್ಯನುಸಾರವಾಗಿ ಶ್ರದ್ಧೆಯಿಂದಲೂ, ಭಕ್ತಿಯಿಂದಲೂ ಪೂಜಿಸಬೇಕು. ಒಂದು ಬೆಳ್ಳಿಯ ಕಲಶವನ್ನಿಡಬೇಕು. ಅದರಲ್ಲಿ ದರ್ಭೆಯ ಪವಿತ್ರವನ್ನೂ ನೀರನ್ನೂ ಹಾಕಬೇಕು. ಐದುಬಗೆಯ ರತ್ನಗಳನ್ನೂ ಹಾಕಬೇಕು. ಅದನ್ನು ಹೂವು, ಗಂಧಗಳಿಂದ ಪೂಜಿಸಿ, ಮಾಲೆಯನ್ನು ಹಾಕಬೇಕು. ಆ ಪಾತ್ರೆಯನ್ನು ಗೋಧಿಯನ್ನು ಹರಡಿ ಅದರ ಮಧ್ಯದಲ್ಲಿಡಬೇಕು.

೪೪–೪೬. ಅನೇಕಬಗೆಯ ರತ್ನಗಳಿಂದಲೂ, ಗಂಧಗಳಿಂದಲೂ, ಮಲ್ಲಿಗೆ ಮೊದಲಾದ ಹೂಗಳಿಂದಲೂ, ಜಾಜಿ ಹೂಗಳಿಂದಲೂ, ಪ್ರಯತ್ನದಿಂದಲೂ, ಭಕ್ತಿಯಿಂದಲೂ ಪೂಜಿಸಬೇಕು. ಬಿಳಿಯ ಅಕ್ಷತೆಗಳಿಂದಲೂ ಪೂಜೆಮಾಡಿ ಅಕ್ಕಿಯನ್ನೂ ಅದರೊಳಕ್ಕೆ ಹಾಕಬೇಕು. ಒಂದು ಜೊತೆ ಬಟ್ಟೆಯನ್ನೂ ಹೊದ್ದಿಸಬೇಕು.

ರೂಪ್ಯಂ ಚೈವ ತು ಕಾರ್ಪಾಸಂ ಪಾಯಸಂ ಮುದ್ರಿಕಾ ಹರೇಃ ।
ಧೇನುರ್ವಾತ್ರ ಪ್ರದಾತವ್ಯಾ ಸಾಲಂಕಾರಾ ಸುಸಂಯುತಾ ॥ ೪೭ ॥

ಸ್ವರ್ಣಶೃಂಗೀಂ ರೌಪ್ಯಖುರಾಂ ತಾಮ್ರಪೃಷ್ಠೀಂ ತಥೈವ ಚ ।
ಕಾಂಸ್ಯದೇಹಾಂ ರತ್ನಪುಚ್ಛಾಂ ದದ್ಯಾದ್ವೈ ಗುರವೇ ತದಾ ॥ ೪೮ ॥

ಶಯ್ಯಾಂ ಚ ಪೌಷ್ಕರಾಂ ದದ್ಯಾತ್ ಮಾಧವೇ ಭಕ್ತಿಪೂರ್ವಕಂ ।
ಧೂಪಂ ದೀಪಂ ತು ನೈವೇದ್ಯಂ ಫಲಂ ಪತ್ರಂ ನಿವೇದಯೇತ್ ॥ ೪೯ ॥

ಪೂಜನೀಯೋ ಮಹಾಭಕ್ತೈರ್ಮಂತ್ರೈರೇಭಿಸ್ತು ಕೇಶವಃ ।
ತುಲಸೀಪತ್ರಸಂಯುಕ್ತೈಃ ಪುಷ್ಪೈಃ ಕಾಲೋದ್ಭವೈಸ್ತಥಾ ॥ ೫೦ ॥

---

ಒಂದನ್ನು ಉಪವೀತವನ್ನಾಗಿಯೂ ಮತ್ತೊಂದನ್ನು ಉತ್ತರೀಯವನ್ನಾಗಿಯೂ ಹಾಕಬೇಕು. ಕಾಲಿಗೆ ಕೆರಗಳನ್ನೂ, ತಲೆಗೆ ಛತ್ರಿಯನ್ನೂ ಸಮರ್ಪಿಸಬೇಕು. ಒಂದು ದೊಡ್ಡ ಪಾತ್ರೆ, ಒಂದು ನೀರು ಕುಡಿಯುವ ಪಾತ್ರೆ, ಏಳು ಬಗೆಯ ಧಾನ್ಯಗಳು, ಎಳ್ಳು, ಬೆಳ್ಳಿ, ಹತ್ತಿ, ಪಾಯಸ, ಉಂಗುರಗಳನ್ನೂ ಸಮರ್ಪಿಸಬೇಕು. ಅಲಂಕಾರ ಮಾಡಿದ ಒಂದು ಕರೆಯುವ ಹಸುವನ್ನೂ ದಾನಮಾಡಬೇಕು.

೪೮. ಅದರ ಕೊಂಬಿಗೆ ಚಿನ್ನದ ಗೊಣಸನ್ನೂ, ಗೊರಸಿಗೆ ಬೆಳ್ಳಿಯ ಗದ್ದುಗವನ್ನೂ, ಹಿಂದುಗಡೆಗೆ ಬಾಲಕ್ಕೆ ತಾಮ್ರದ ತಗಡನ್ನೂ ಮಾಡಿರಬೇಕು. ಕರೆಯುವುದಕ್ಕೆ ಕಂಚಿನಪಾತ್ರೆ ಇರಬೇಕು. ಬಾಲಕ್ಕೆ ರತ್ನಗಳನ್ನು ಕಟ್ಟಿರಬೇಕು. ಇಂಥಹ ಹಸುವನ್ನು ಗುರುವಿಗೆ ಕೊಡಬೇಕು.

೪೯. ಪುಷ್ಕಳವೆಂದರೆ ಎಲ್ಲಾ ಸಾಮಗ್ರಿಗಳಿಂದ ಕೂಡಿದುದು. ಅಂಥಹ ಹಾಸಿಗೆಯನ್ನು ಭಕ್ತಿಯಿಂದ ಮಾಧವನಿಗೆ ಸಮರ್ಪಿಸಬೇಕು. ಧೂಪ, ದೀಪ, ನೈವೇದ್ಯ, ಫಲ, ಪತ್ರಗಳನ್ನು ದೇವರಿಗೆ ಸಮರ್ಪಿಸಬೇಕು.

೫೦. ಭಕ್ತರಾಗಿರುವವರು ತುಳಸಿಯ ದಳಗಳಿಂದಲೂ, ಆ ಕಾಲದಲ್ಲಿ ಹುಟ್ಟಿದ ಹೂಗಳಿಂದಲೂ, ಮಂತ್ರಗಳಿಂದಲೂ ಕೇಶವನನ್ನೇ ಪೂಜಿಸಬೇಕು.

ಮಾಸದಾಮ್ನಾ ವೈ ಚರಣೌ ಜಾನುನೀ ವಿಷ್ಣುರೂಪಿಣೇ ।
ಗುಹ್ಯಂ ತು ಭೂತಪತಯೇ ಕಟಿಂ ವೈ ಪೀತವಾಸಸೇ ॥ ೫೧ ॥

ಬ್ರಹ್ಮಮೂರ್ತಿಭೃತೇ ನಾಭಿಮುದರಂ ವಿಶ್ವಯೋನಯೇ ।
ಹೃದಯಂ ಜ್ಞಾನಗಮ್ಯಾಯ ಕಂಠಂ ವೈಕುಂಠಮೂರ್ತಯೇ ॥ ೫೨ ॥

ಉರಗಾಯ ಲಲಾಟೇ ತು ಬಹುದಂತಾನುಕಾರಿಣೇ ।
ಉತ್ತಮಾಂಗಂ ಸುರೇಶಾಯ ಸರ್ವಾಂಗಂ ಸರ್ವಮೂರ್ತಯೇ । ॥ ೫೩ ॥

ಸ್ವನಾಮ್ನಾ ಚಾಯುಧಾದೀನಿ ಪೂಜನೀಯಾನಿ ಭಕ್ತಿತಃ ।
ಅರ್ಘ್ಯದಾನಂ ಪ್ರಕರ್ತವ್ಯಂ ನಾರಿಕೇಳಾದಿಭಿಸ್ಸಮಂ ॥ ೫೪ ॥

ಶಂಖೋಪರಿ ಫಲಂ ಕೃತ್ವಾ ಗಂಧಪುಷ್ಪಾಕ್ಷತಾನ್ವಿತಂ ।
ಸೂತ್ರೇಣ ವೇಷ್ಟನಂ ಕೃತ್ವಾ ದದ್ಯಾದರ್ಘ್ಯಂ ವಿಧಾನತಃ ॥ ೫೫ ॥

---

೫೧-೫೩. ಆ ತಿಂಗಳಿನ ಹೆಸರಿನಿಂದ ಕಾಲುಗಳನ್ನೂ "ವಿಷ್ಣುರೂಪಿಣೇ ನಮಃ" ಎಂದು ಮೊಣಕಾಲುಗಳನ್ನೂ, "ಭೂತಪತಯೆ ನಮಃ" ಎಂದು ಗುಹ್ಯಭಾಗವನ್ನೂ, "ಪೀತವಾಸಸೆ ನಮಃ" ಎಂದು ಸೊಂಟವನ್ನೂ, "ಬ್ರಹ್ಮಮೂರ್ತಿಭೃತೆ ನಮಃ" ಎಂದು ಹೊಕ್ಕುಳನ್ನೂ, "ವಿಶ್ವಯೋನಯೆ ನಮಃ" ಎಂದು ಹೊಟ್ಟೆಯನ್ನೂ, "ಜ್ಞಾನಗಮ್ಯಾಯ ನಮಃ" ಎಂದು ಹೃದಯವನ್ನೂ, "ವೈಕುಂಠಮೂರ್ತಯೇ ನಮಃ" ಎಂದು ಕಂಠವನ್ನೂ, "ಉರಗಾಯ ನಮಃ" ಎಂದು ಹಣೆಯನ್ನೂ, "ಬಹುದಂತಾನುಕಾರಿಣೇ ನಮಃ" ಎಂದು ತಲೆಯನ್ನೂ, "ಸರ್ವಮೂರ್ತಯೆ ನಮಃ" ಎಂದು ಸರ್ವಾಂಗಗಳನ್ನೂ ಪೂಜಿಸಬೇಕು.

೫೪. ಆಯುಧಗಳ ಹೆಸರುಗಳನ್ನು ಹೇಳುತ್ತ ಅವನ್ನು ಪೂಜಿಸಬೇಕು. ಅನಂತರ ಎಳನೀರಿನಿಂದ ಅರ್ಘ್ಯವನ್ನು ಬಿಡಬೇಕು.

೫೫. ಶಂಖದಲ್ಲಿ ಆ ನೀರನ್ನು ಹಾಕಿಕೊಂಡು, ಅದರಮೇಲೆ ತೆಂಗಿನ ಕಾಯನ್ನಾಗಲಿ, ಮತ್ತಾವುದಾದರೂ ಹಣ್ಣನ್ನಾಗಲಿ ಇಟ್ಟುಕೊಳ್ಳಬೇಕು. ಅವೆರಡಕ್ಕೂ ದಾರವನ್ನು ಕಟ್ಟಿಕೊಂಡು ಶಾಸ್ತ್ರರೀತಿಯಿಂದ ಅರ್ಘ್ಯವನ್ನು ಕೊಡಬೇಕು.

ದೇವದೇವ ಮಹಾದೇವ ಶ್ರೀ ಕೇಶವ ಜನಾರ್ದನ ।
ಸುಬ್ರಹ್ಮಣ್ಯ ನಮಸ್ತೇಽಸ್ತು ಪುಣ್ಯರಾಶಿವಿವರ್ಧನ ॥ ೫೬ ॥

ಶೋಕಮೋಹಮಹಾಪಾಪಾನ್ಮಾಮುದ್ಧರ ಮಹಾರ್ಣವಾತ್ ।
ಸುಕೃತಂ ನ ಕೃತಂ ಕಿಂಚಿತ್ ಜನ್ಮಕೋಟಿಶತೈರಪಿ ॥ ೫೭ ॥

ತಥಾಪಿ ಮಾಂ ಮಹಾಸ್ವಾಮಿನ್ ಸಮುದ್ಧರ ಭವಾರ್ಣವಾತ್ ।
ವ್ರತೇನಾನೇನ ದೇವೇಶ ಯೇ ಚಾನ್ಯೇ ಮಮ ಪೂರ್ವಜಾಃ ॥ ೫೮ ॥

ವಿಯೋನಿಂ ಚ ಗತಾಶ್ಚಾನ್ಯೇ ಪಾಪಾನ್ಮೃತ್ಯುವಶಂ ಗತಾಃ ।
ಯೇ ಭವಿಷ್ಯಂತಿ ಯೇಽತೀತಾಃ ಪ್ರೇತಲೋಕಾತ್ಸಮುದ್ಧರ ॥ ೫೯ ॥

ಆರ್ತಸ್ಯ ಮಮ ದೀನಸ್ಯ ಭಕ್ತಿರವ್ಯಭಿಚಾರಿಣೀ ।
ದತ್ತಮರ್ಘ್ಯಂ ಮಯಾ ತುಭ್ಯಂ ಭಕ್ತ್ಯಾ ಗೃಹ್ಣ ಗದಾಧರ ॥ ೬೦ ॥

---

೫೬–೫೭. ದೇವದೇವನೆ! ಮಹಾದೇವನೆ! ಕೇಶವನೆ! ಜನಾರ್ದನನೆ! ಸುಬ್ರಹ್ಮಣ್ಯನೆ! ಪುಣ್ಯದ ರಾಶಿಯನ್ನು ಹೆಚ್ಚಿಸುವವನೆ! ನಿನಗೆ ನಮಸ್ಕಾರವು. ಶೋಕ, ಮೋಹವೆಂಬ ಮಹಾ ಸಮುದ್ರದ ಪಾಪದಿಂದ ನನ್ನನ್ನು ಕಾಪಾಡು. ಅನೇಕ ಕೋಟಿ ಜನ್ಮಗಳಿಂದಲೂ ನಾನು ಸುಕೃತವನ್ನು ಮಾಡಿಯೇ ಇಲ್ಲ.

೫೮-೫೯. ಆದರೂ ಕೂಡ ಸ್ವಾಮಿ! ನನ್ನನ್ನು ಈ ಸಂಸಾರಸಾಗರದಿಂದ ಮೇಲಕ್ಕೆತ್ತು. ಯಾರು ನನಗಿಂತಲೂ ಪೂರ್ವಿಕರು, ಕೆಟ್ಟ ಜನ್ಮಗಳಲ್ಲಿ ಹುಟ್ಟಿದ್ದಾರೆಯೋ? ಪಾಪದಿಂದ ಸತ್ತಿರುವರೋ? ಇಂತಹ ಹಿಂದಿನವರನ್ನೂ, ಮುಂದೆ ಹುಟ್ಟುವವರನ್ನೂ, ನಾನು ಈ ವ್ರತವನ್ನು ಆಚರಿಸುವುದರಿಂದ ಪ್ರೇತ ಲೋಕದಿಂದ ಪಾರು ಮಾಡು.

೬೦. ನಾನು ದುಃಖಗೊಂಡು, ಶೋಚ್ಯನಾಗಿ ದಯಾಪಾತ್ರನಾಗಿದ್ದೇನೆ. ನನ್ನ ಭಕ್ತಿಯು ಖಚಿತವಾಗಿರುವುದು. ನಾನು ನಿನಗೆ ಭಕ್ತಿಯಿಂದ ಅರ್ಘ್ಯವನ್ನು ಕೊಟ್ಟಿರುವೆನು. ಎಲೈ ಗದಾಧರನೆ! ಸ್ವೀಕರಿಸು.

ದತ್ವಾರ್ಘ್ಯಂ ಧೂಪದೀಪಾದ್ಯೈಃ ನೈವೇದ್ಯೈರ್ವಿಷ್ಣುಸಂಭವೈಃ ।
ಸ್ತೋತ್ರೈರ್ನೀರಾಜನೈರ್ಗೀತೈಃ ನೃತ್ಯೈಸ್ಸಂತೋಷಯೇದ್ಧರಿಂ ॥ ೬೧ ॥

ವಸ್ತ್ರದಾನೈಶ್ಚ ಗೋದಾನೈಃ ಭೋಜನೈಸ್ತೋಷಯೇದ್ಗುರುಂ ।
ತಥಾ ತಥಾ ವಿಧಾತವ್ಯಂ ಗುರುರ್ವೈ ಪ್ರೀತಿಮಾಪ್ನುಯಾತ್ ॥ ೬೨ ॥

ಲೋಕಾನಾಂ ತಾರಣಾರ್ಥಾಯ ಧಾತ್ರಾ ಸೃಷ್ಟೋ ಗುರುರ್ಯತಃ ।
ಅತೋ ವೈ ಗುರುಪೂಜಾ ಚ ಕರ್ತವ್ಯಾ ವೈ ಪ್ರಯತ್ನತಃ ॥ ೬೩ ॥

ಅಹಿತಂ ಯೋ ನಾಶಯತಿ ಸ್ವಹಿತಂ ದರ್ಶಯೇತ್ಸದಾ ।
ಸ ಗುರುಸ್ಸ ಚ ವಿಜ್ಞೇಯಃ ಸರ್ವಧರ್ಮಾರ್ಥಕೋವಿದಃ ॥ ೬೪ ॥

ಅಕುರ್ವನ್ವಿತ್ತಶಾಠ್ಯಂ ಚ ಗುರವೇ ತನ್ನಿವೇದಯೇತ್ ।
ಗುರೋರ್ನಿವೇದಿತೇ ಭೂಪ ಪರಿಪೂರ್ಣಂ ಭವೇದ್ವ್ರತಂ ॥ ೬೫ ॥

---

೬೧. ಅರ್ಘ್ಯವನ್ನು ಕೊಟ್ಟು ಧೂಪ, ದೀಪ, ನೈವೇದ್ಯಗಳನ್ನು ಸಮರ್ಪಿಸಿ, ಸ್ತೋತ್ರಗಳಿಂದಲೂ, ಆರತಿಗಳಿಂದಲೂ, ಸಂಗೀತಗಳಿಂದಲೂ, ನರ್ತನಗಳಿಂದಲೂ ಆ ವಿಷ್ಣುವಿಗೆ ಸಂತೋಷವನ್ನುಂಟುಮಾಡಬೇಕು.

೬೨. ವಸ್ತ್ರದಾನ, ಗೋದಾನ, ಒಳ್ಳೆಯ ಊಟ ಇವುಗಳನ್ನು ಕೊಟ್ಟು ಗುರುವು ಸಂತೋಷಪಡುವಂತೆ ಮಾಡಬೇಕು.

೬೩. ಲೋಕಗಳ ಹಿತಕ್ಕೋಸ್ಕರಲೇ, ಬ್ರಹ್ಮನು ಗುರುವನ್ನು ಸೃಷ್ಟಿಮಾಡಿ ಇರುವನು. ಆದುದರಿಂದಲೇ ಗುರುಪೂಜೆಯನ್ನು ಪ್ರಯತ್ನಪಟ್ಟು ಮಾಡಬೇಕು.

೬೪. ಯಾವನು ಮಹತ್ತಾದ ಕಷ್ಟಗಳೆಲ್ಲವನ್ನೂ ನಾಶಮಾಡಿ, ಮನುಷ್ಯನಿಗೆ ಬೇಕಾದ ಹಿತವನ್ನು ತೋರಿಸುತ್ತಾನೋ ಅವನೇ ಗುರುವೆಂದು ತಿಳಿ. ಅವನು ಎಲ್ಲಾ ಧರ್ಮಗಳನ್ನೂ ತಿಳಿದವನಾಗಿರಬೇಕು.

೬೫. ಹಣದಲ್ಲಿ ಲೋಭತನಮಾಡದೆ ಅದನ್ನು ಗುರುವಿಗೆ ಒಪ್ಪಿಸಬೇಕು. ಗುರುವಿಗೆ ದಕ್ಷಿಣೆಯನ್ನು ಕೊಟ್ಟನಂತರ ವ್ರತವು ಪೂರ್ಣವಾಗುತ್ತದೆ.

**ಕೃತ್ವಾ ದಿನ ಕೃತಂ ಕರ್ಮ ಭೋಜನಂ ಬ್ರಾಹ್ಮಣೈಸ್ಸಹ ।**
**ಕರ್ತವ್ಯಂ ನೃಪಶಾರ್ದೂಲ ದಿನಂ ನೇಯಂ ಕಥಾನಕೈಃ || ೬೬ ||**

**ಅನೇನ ವಿಧಿನಾ ಯಸ್ತು ಕುರ್ಯಾದುನ್ಮೀಲಿನೀವ್ರತಂ ।**
**ಕಲ್ಪಕೋಟಿಸಹಸ್ರಾಣಿ ವಸತೇ ವಿಷ್ಣುಸನ್ನಿಧೌ || ೬೭ ||**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಪತಿ ನಾರದ ಸಂವಾದೇ ಉನ್ಮೀಲಿನೀವ್ರತಂ ನಾಮ ಸಪ್ತತ್ರಿಂಶೋऽಧ್ಯಾಯಸ್ಸಮಾಪ್ತಃ**

---

೬೬. ದಿನಚರಿಯಲ್ಲಿ ಮಾಡಬೇಕಾದ ಸ್ನಾನ, ಸಂಧ್ಯಾವಂದನೆಗಳನು ಮಾಡಿಕೊಂಡು, ಬ್ರಾಹ್ಮಣರೊಡನೆ ಊಟಮಾಡಬೇಕು. ಆ ದಿನವೆಲ್ಲವನ್ನೂ ಧರ್ಮಕಥೆಗಳನ್ನು ಹೇಳಿಕೊಂಡು ಕಳೆಯಬೇಕು.

೬೭. ಈರೀತಿಯಾದ ವಿಧಿಯಿಂದ ಯಾವನು, ಉನ್ಮೀಲಿನೀ ವ್ರತವನ್ನು ಮಾಡುವನೋ ಅವನು ಕೋಟಿಕಲ್ಪಗಳವರೆಗೆ ವಿಷ್ಣುವಿನ ಸನ್ನಿಧಿಯಲ್ಲಿ ವಾಸ ಮಾಡುತ್ತಾನೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಪತಿ ನಾರದರ ಸಂವಾದದಲ್ಲಿ ಉನ್ಮೀಲಿನೀವ್ರತ ಎಂಬ ಮೂವತ್ತೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-x-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಅಷ್ಟತ್ರಿಂಶೋಽಧ್ಯಾಯಃ ॥



॥ ನಾರದ ಉವಾಚ ॥

ಕೀದೃಶೀ ಸ್ಯಾನ್ಮಹಾದೇವ ಪಕ್ಷವರ್ಧಿನಿಸಂಜ್ಞಿಕಾ ।
ಯಯಾ ವೈ ಕೃತಯಾ ಜನ್ತುಃ ಮಹಾಪಾಪಾತ್ಪ್ರಮುಚ್ಯತೇ ॥ ೧ ॥

॥ ಶ್ರೀ ಮಹಾದೇವ ಉವಾಚ ॥

ಅಮಾ ವಾ ಯದಿ ವಾ ಪೂರ್ಣಾ ಸಂಪೂರ್ಣಾ ಜಾಯತೇ ತದಾ ।
ಭೂತ್ವಾ ವೈ ನಾಡಿಕಾಷಷ್ಟಿಃ ಜಾಯತೇ ಪ್ರತಿಪದ್ದಿನೇ
ಅಶ್ವಮೇಧಾಯುತೈಸ್ತುಲ್ಯಾ ಸಾ ಭವೇತ್ಪಕ್ಷವರ್ಧಿನೀ ॥ ೨ ॥

---

## ಮೂವತ್ತೆಂಟನೆಯ ಅಧ್ಯಾಯವು



೧. ನಾರದನು ಹೇಳಿದನು—ಎಲೈ ಮಹಾದೇವನೆ! ಪಕ್ಷವರ್ಧಿನೀ ಎಂಬುವ ವ್ರತವಾವುದು? ಅದನ್ನು ಮಾಡಿದರೆ ಪ್ರಾಣಿಗೆ ಪಾಪವೆಲ್ಲವೂ ನಾಶವಾಗೇ ಆಗುತ್ತದೆಯಲ್ಲ!

೨. ಮಹಾದೇವನು ಹೇಳಿದನು.—ಒಂದು ದಿನ ಅರವತ್ತು ಗಳಿಗೆಗಳಕಾಲ ಅಮಾವಾಸ್ಯೆಯು ಅಥವಾ ಹುಣ್ಣಿಮೆಯು ಆ ದಿನವೆಲ್ಲವೂ ಪೂರ್ತಿಯಾಗಿ ಅರವತ್ತುಗಳಿಗೆಯೂ ಇದ್ದು, ಮಾರನೆಯದಿನ, ಪಾಡ್ಯದಲ್ಲಿಯೂ, ಹೆಚ್ಚಾಗಿ ಇದ್ದರೆ, ಅದರ ಹಿಂದಿನ ಏಕಾದಶಿಗೆ ಪಕ್ಷವರ್ಧಿನೀ ಎಂದು ಹೆಸರು. ಅದು ಅಶ್ವಮೇಧಾದಿಯಾಗಗಳಿಗೆ, ಸಮವಾದುದು.

|| ನಾರದ ಉವಾಚ ||

ಪೂಜಾವಿಧಿಂ ತು ಇಚ್ಛಾಮಿ ಸಾಂಪ್ರತಂ ದೇವಸತ್ತಮ |
ಯತ್ಕೃತೇ ತು ಮಹಾದೇವ ಮಹಾಫಲಮವಾಪ್ನುಯಾತ್ || ೩ ||

|| ಮಹಾದೇವ ಉವಾಚ ||

ಪೂಜಾವಿಧಿಂ ಪ್ರವಕ್ಷ್ಯಾಮಿ ಸಾಂಪ್ರತಂ ದ್ವಿಜನಂದನ |
ಪೂಜಿತೇ ಚಾರ್ಚಿತೇ ವಿಷ್ಣೌ ಫಲಂ ಪ್ರಾಪ್ನೋತ್ಯಸಂಶಯಂ || ೪ ||

ಯೇನ ಪೂಜಾವಿಧಾನೇನ ತುಷ್ಟಿಂ ಪ್ರಾಪ್ನೋತಿ ಮಾಧವಃ |
ಅವ್ರಣಂ ಜಲಪೂರ್ಣಂ ಚ ಕುಂಭಂ ಚಂದನಚರ್ಚಿತಂ || ೫ ||

ಪಂಚರತ್ನಸಮಾಯುಕ್ತಂ ಪುಷ್ಪಮಾಲಾಭಿವೇಷ್ಟಿತಂ |
ಸ್ಥಾಪ್ಯಂ ತಾಮ್ರಮಯಂ ಪಾತ್ರಂ ಸಗೋಧೂಮಂ ಘಟೋಪರಿ || ೬ ||

ಸೌವರ್ಣಂ ಕಾರಯೇದ್ದೇವಂ ಮಾಸಸಂಜ್ಞಾಭಿಧಾನಕಂ !
ಪಂಚಾಮೃತೇನ ವಿಧಿನಾ ಸ್ನಪನಂ ಸುಮನೋಹರಂ || ೭ ||

---

೩. ನಾರದನು ಹೇಳಿದನು–ಆ ಪಕ್ಷವರ್ಧಿನಿಯನ್ನು, ಆಚರಿಸಿದರೆ, ಮಹಾ ಫಲವು ಬರುತ್ತದೆಯಷ್ಟೆ! ಅದುದರಿಂದ ಆ ಪೂಜೆಯ ವಿಧಿಯನ್ನು ಹೇಳು. ಕೇಳಬೇಕೆಂದಿದ್ದೇನೆ.

೪. ಮಹಾದೇವನು ಹೇಳಿದನು–ಎಲೈ ನಾರದನೆ! ಈಗ ಪೂಜಾವಿಧಿ ಯನ್ನು ಹೇಳುತ್ತೇನೆ. ಆ ವಿಷ್ಣುವನ್ನು ಪೂಜಿಸಿದರೆ, ಸಂಶಯವಿಲ್ಲದೆ ಫಲವನ್ನು ಹೊಂದುತ್ತಾನೆ.

೫-೬. ಈಪೂಜೆಯ ವಿಧಿಯಿಂದ ಮಾಧವನು ತೃಪ್ತನಾಗುತ್ತಾನೆ. ಒಂದು ತೂತೂ, ತಗ್ಗೂ ಇಲ್ಲದ, ಬಿಂದಿಗೆಯನ್ನು ತರಬೇಕು. ಅದಕ್ಕೆ ಗಂಧ ಮುಂತಾ ದುವುಗಳನ್ನು, ಹಚ್ಚಬೇಕು. ಪಂಚರತ್ನಗಳನ್ನು ಅದರೊಳಗೆ ಹಾಕಬೇಕು. ಹೂವಿನ ಮಾಲೆಯನ್ನು ಸುತ್ತಹಾಕು. ಆ ಕಲಶದಮೇಲೆ ಒಂದು ತಾಮ್ರದ ಪಾತ್ರೆಯನ್ನು ಇಡಬೇಕು. ಅದರ ತುಂಬ ಗೋದುವೆಯನ್ನು, ತುಂಬಿರಬೇಕು.

೭. ಒಂದು ವಿಷ್ಣುವಿನ ಪ್ರತಿಮೆಯನ್ನು, ಚಿನ್ನದಲ್ಲಿ ಮಾಡಿಸಬೇಕು. ಅದಕ್ಕೆ ಆತಿಂಗಳ ಹೆಸರನ್ನಿಡಬೇಕು. ಪಂಚಾಮೃತಗಳಿಂದ ಸ್ನಾನಮಾಡಿಸಬೇಕು.

ಕಾರಯೇದ್ದೇವದೇವೇಶಂ ಜಗನ್ನಾಥಂ ಜಗತ್ಪತಿಂ ।
ವಿಲೇಪನಂ ತು ಕರ್ತವ್ಯಂ ಕುಂಕುಮಾಗರುಚಂದನೈಃ ॥ ೮ ॥

ವಸ್ತ್ರಯುಗ್ಮಂ ಚ ದಾತವ್ಯಂ ಛತ್ರೋಪಾನಹಸಂಯುತಂ ।
ಪೂಜಯೇದ್ದೇವತಾಧೀಶಂ ಕುಂಭಪಾತ್ರೋಪರಿ ಸ್ಥಿತಂ ॥ ೯ ॥

ಪದ್ಮನಾಭಾಯ ವೈ ಪಾದೌ ಜಾನುನೀ ವಿಶ್ವಮೂರ್ತಯೇ ।
ಊರೂ ವೈ ಜ್ಞಾನಗಮ್ಯಾಯ ಕಟಿಂ ಜ್ಞಾನಪ್ರಧಾಯ ಚ ॥ ೧೦ ॥

ಉದರಂ ವಿಶ್ವನಾಥಾಯ ಹೃದಯಂ ಶ್ರೀಧರಾಯ ಚ ।
ಕಂಠಂ ಕೌಸ್ತುಭಕಂಠಾಯ ಬಾಹೂ ಕ್ಷತ್ರಾಂತಕಾರಿಣೇ ॥ ೧೧ ॥

ಲಲಾಟಂ ವ್ಯೋಮಮೂರ್ಧ್ನೇ ತು ಶಿರೋ ವೈ ಸರ್ವರೂಪಿಣೇ ।
ಸ್ವನಾಮ್ನಾ ಚೈವ ಶಸ್ತ್ರಾಣಿ ಸರ್ವಾಂಗಂ ದಿವ್ಯರೂಪಿಣೇ ॥ ೧೨ ॥

---

೮-೯. ಈರೀತಿ ಆ ಸ್ವಾಮಿಗೆ, ಪಂಚಾಮೃತಸ್ನಾನವನ್ನು, ಮಾಡಿಸಿ, ಕುಂಕುಮಕೇಸರಿ, ಶ್ರೀಗಂಧಗಳನ್ನು, ಅನಂತರ ಹಚ್ಚಬೇಕು. ಉಡುವ, ಹೊದೆಯುವ, ಬಟ್ಟೆಗಳನ್ನು ಕೊಟ್ಟು, ಛತ್ರಿ, ಕೆರಗಳನ್ನು ಕೊಡಬೇಕು. ಹೀಗೆ ಆ ದೇವರನ್ನು ತಾಮ್ರದ ಪಾತ್ರೆಯಲ್ಲಿಟ್ಟು, ಪೂಜಿಸಬೇಕು.

೧೦-೧೫. "ಪದ್ಮನಾಭಾಯ ನಮಃ" ಎಂದು ಪಾದಗಳನ್ನೂ, "ವಿಶ್ವಮೂರ್ತಯೇ ನಮಃ" ಎಂದು ಮಂಡಿಗಳನ್ನೂ, "ಜ್ಞಾನಗಮ್ಯಾಯ ನಮಃ"ಎಂದು ತೊಡೆಗಳನ್ನೂ, "ಜ್ಞಾನಪ್ರದಾಯ ನಮಃ" ಎಂದು ಸೊಂಟವನ್ನೂ, "ವಿಶ್ವನಾಥಾಯ ನಮಃ" ಎಂದು ಹೊಟ್ಟೆಯನ್ನೂ, "ಶ್ರೀಧರಾಯ ನಮಃ" ಎಂದು ಹೃದಯವನ್ನೂ, "ಕೌಸ್ತುಭಕಂಠಾಯ ನಮಃ" ಎಂದು ಕಂಠವನ್ನೂ, "ಕ್ಷತ್ರಾಂತಕಾರಿಣೇ ನಮಃ" ಎಂದು ತೋಳುಗಳನ್ನೂ "ವ್ಯೋಮಮೂರ್ಧ್ನೇ ನಮಃ" ಎಂದು ಹಣೆಯನ್ನೂ "ಸರ್ವರೂಪಿಣೇ ನಮಃ" ಎಂದು ಶಿರಸ್ಸನ್ನೂ "ದಿವ್ಯರೂಪಿಣೇ ನಮಃ" ಎಂದು ಸರ್ವಾಂಗವನ್ನೂ, ಪೂಜಿಸಬೇಕು. ಈರೀತಿಯಾಗಿ ವಿಧಿಯಿಂದ ಪೂಜಿಸಿ

ಏವಂ ವಿಧಿವತ್ಸಂಪೂಜ್ಯ ತತೋಽರ್ಘ್ಯಂ ದಾಪಯೇತ್ಸುಧೀಃ ।
ನಾರಿಕೇಳೇನ ಶುಭ್ರೇಣ ದೇವದೇವಸ್ಯ ಚಕ್ರಿಣಃ || ೧೩ ||

ಅನೇನೈವಾರ್ಘ್ಯದಾನೇನ ಸಂಪೂರ್ಣಂ ಜಾಯತೇ ವ್ರತಂ ।
ಸಂಸಾರಾರ್ಣವಮುಗ್ನಂ ಭೋ ಮಾಮುದ್ಧರ ಜಗತ್ಪತೇ || ೧೪ ||

ತ್ವಮೀಶಸ್ಸರ್ವಲೋಕಾನಾಂ ತ್ವಂ ಸಾಕ್ಷಾಜ್ಜ ಜಗತ್ಪತಿಃ ।
ಗೃಹಾಣಾರ್ಘ್ಯಂ ಮಯಾ ದತ್ತಂ ಪದ್ಮನಾಭ ನಮೋಽಸ್ತು ತೇ || ೧೫ ||

ನೈವೇದ್ಯಾನಿ ಸುಹೃದ್ಯಾನಿ, ಷಡ್ರಸಾನಿ ವಿಶೇಷತಃ ।
ದೇಯಾನಿ ತು ವಿಶೇಷೇಣ, ಕೇಶವಾಯ ಸುಭಕ್ತಿತಃ || ೧೬ ||

ನಾಗಪತ್ರಂ ಸಕರ್ಪೂರಂ ದದ್ಯಾದ್ದೇವಸ್ಯ ಭಕ್ತಿತಃ ।
ಘೃತೇನ ದೀಪಂ ಕುರ್ಯಾತ್ತು ತಿಲತೈಲೇನ ವಾ ಪುನಃ || ೧೭ ||

---

ಆಮೇಲೆ ಅರ್ಘ್ಯವನ್ನು ಕೊಡಬೇಕು. ಕೈಯ್ಯಲ್ಲಿ ತೆಂಗಿನಕಾಯನ್ನು ಹಿಡಿದು ಕೊಂಡು, ಅರ್ಘ್ಯವನ್ನು ಕೊಡಬೇಕು. ಈ ಅರ್ಘ್ಯದಾನದಿಂದಲೇ ವ್ರತವು ಪೂರ್ಣವಾಗುತ್ತದೆ. ಎಲೈ ಜಗತ್ಪತಿಯೆ! ನಾನು ಸಂಸಾರಸಾಗರದಲ್ಲಿ, ಬಿದ್ದಿದ್ದೇನೆ. ನನ್ನನ್ನು ಉದ್ಧಾರಮಾಡು. ನೀನು ಎಲ್ಲಾ ಲೋಕಗಳಿಗೂ, ಈಶ್ವರನು. ನೀನೇ ಪ್ರತ್ಯಕ್ಷನಾದ ಜಗತ್ಪತಿಯು. ಸ್ವಾಮಿ! ನಾನು ಕೊಟ್ಟ ಅರ್ಘ್ಯವನ್ನು ತೆಗೆದುಕೋ. ಎಲೈ ಪದ್ಮನಾಭನೆ! ನಿನಗೆ ನಮಸ್ಕಾರವು.

೧೬. ಆರು ರಸಗಳಿಂದಕೂಡಿದ, ಚೆನ್ನಾಗಿರುವ ನೈವೇದ್ಯಗಳನ್ನು ಭಕ್ತಿಯಿಂದ ಕೇಶವನಿಗೆ, ಸಮರ್ಪಿಸಬೇಕು.

೧೭. ವೀಳೆಯದೆಲೆಯನ್ನೂ, ಕರ್ಪೂರದ ಅಡಿಕೆಗಳನ್ನೂ, ತಾಂಬೂಲವನ್ನೂ, ಭಕ್ತಿಯಿಂದ ನಿವೇದಿಸಬೇಕು. ತುಪ್ಪದಿಂದ ದೀಪವನ್ನು ಹಚ್ಚಬೇಕು. ಅದಾಗದಿದ್ದರೆ ಒಳ್ಳೆಣ್ಣೆಯಿಂದಲಾದರೂ ಹಚ್ಚಬೇಕು.

ಕೃತ್ವಾ ಸಮ್ಯಕ್ ವಿಧಾನೇನ ಗುರೋಃ ಪೂಜಾಂ ಪ್ರಕಾರಯೇತ್ ।
ವಸ್ತ್ರಾಣಿ ಚೈವ ಸೋಷ್ಣೀಷಂ ಕಂಚುಕಂ ಚ ಪ್ರದಾಪಯೇತ್ ॥ ೧೮ ॥

ದಕ್ಷಿಣಾಂ ಚ ಯಥಾಶಕ್ತಿ ಗುರವೇ ಸಂಪ್ರದಾಪಯೇತ್ ।
ಭೋಜನಂ ಚೈವ ತಾಂಬೂಲಂ ದತ್ವಾಚಾರ್ಯಂ ಪ್ರತೋಷಯೇತ್ ॥ ೧೯ ॥

ಸ್ವವಿತ್ತಸ್ಯಾನುಸಾರೇಣ ಯಥಾಶಕ್ತಿ ತು ನಿರ್ಧನೈಃ ।
ಕಾರ್ಯಾ ಸಮ್ಯಕ್ ಪ್ರಯತ್ನೇನ ದ್ವಾದಶೀಪಕ್ಷವರ್ಧಿನೀ ॥ ೨೦ ॥

ತತೋ ಜಾಗರಣಂ ಕುರ್ಯಾತ್ ಗೀತನೃತ್ಯಸಮನ್ವಿತಂ ।
ಪುರಾಣಪಾಠಸಹಿತಂ ಹಾಸ್ಯಾಹ್ಲಾದಸುಸಂಯುತಂ ॥ ೨೧ ॥

ಸ್ತುವಂತಿ ಚ ಪ್ರಶಂಸಂತಿ ಜಾಗರಂ ಚಕ್ರಪಾಣಿನಃ ।
ನಿತ್ಯೋತ್ಸವೋ ಭವೇತ್ತೇಷಾಂ ಗೃಹೇ ವೈ ದಶಜನ್ಮಸು ॥ ೨೨ ॥

---

೧೮. ಅನಂತರ ವಿಧಿವತ್ತಾಗಿ, ಗುರುಪೂಜೆಯನ್ನು ಮಾಡಬೇಕು. ವಸ್ತ್ರಗಳನ್ನೂ, ರುಮಾಲುಗಳನ್ನೂ, ಅಂಗಿಗಳನ್ನೂ, ಕೊಡಬೇಕು.

೧೯. ಕೈಲಾದಮಟ್ಟಿಗೆ, ಗುರುವಿಗೆ ದಕ್ಷಿಣೆಯನ್ನು ಕೊಟ್ಟು, ಭೋಜನವನ್ನು ಮಾಡಿಸಿ, ತಾಂಬೂಲವನ್ನು ಕೊಟ್ಟು, ಸಂತೋಷಪಡಿಸಬೇಕು.

೨೦. ತನ್ನ ದುಡ್ಡಿಗೆ ಅನುಸಾರವಾಗಿ ಧನಿಕನೂ, ಬಡವನಾದವನು ಕೈಲಾದಮಟ್ಟಿಗೂ ದಕ್ಷಿಣೆಯನ್ನು ಕೊಡಬೇಕು. ಈರೀತಿಯಾಗಿ ಪಕ್ಷವರ್ಧಿನಿಯಾದ ದ್ವಾದಶಿಯನ್ನು ಚೆನ್ನಾಗಿ ಮಾಡಬೇಕು.

೨೧. ಅನಂತರ ಜಾಗರಣೆಯನ್ನು ಮಾಡಬೇಕು. ಆಗ ನೃತ್ಯ, ಗೀತ, ವಾದ್ಯಗಳೆನ್ನು ಆಚರಿಸಬೇಕು. ಪುರಾಣವನ್ನು ಓದಬೇಕು. ಹಾಸ್ಯಸಂತೋಷಗಳಿಂದ, ಕಾಲವನ್ನು ಕಳೆಯಬೇಕು.

೨೨, ಆ ಜಾಗರಣೆಯಲ್ಲಿ, ಚಕ್ರಪಾಣಿಯಾದ ಸ್ವಾಮಿಯನ್ನು, ಸ್ತೋತ್ರ ಮಾಡಬೇಕು. ಶ್ಲಾಘಿಸಬೇಕು. ಹೀಗೆ ಮಾಡಿದರೆ ಅವರ ಮನೆಯಲ್ಲಿ, ಹತ್ತು ಜನ್ಮಗಳವರೆಗೂ ನಿತ್ಯೋತ್ಸವಗಳು ನಡೆಯುತ್ತವೆ.

ಅತೋ ಧನ್ಯತಮಾ ಚೇಯಂ ಕರ್ತವ್ಯಾ ಪಕ್ಷವರ್ಧಿನೀ ।
ಕೃತ್ವಾ ತು ಸಕಲಂ ಪುಣ್ಯಫಲಮಾಪ್ನೋತ್ಯಸಂಶಯಂ ॥ ೨೩ ॥

ಪಕ್ಷವರ್ಧಿನೀಮಾಹಾತ್ಮ್ಯಂ ಯೇ ಶೃಣ್ವಂತಿ ಮುನೀಷಿಣಃ ।
ತೈರ್ವ್ರತಂ ತತ್ಕೃತಂ ಸರ್ವಂ ಯಾವದಾಭೂತಸಂಪ್ಲವಂ ॥ ೨೪ ॥

ಪಂಚಾಗ್ನಿಸಾಧನೇ ಪುಣ್ಯಂ ಯಚ್ಚ ಸ್ಯಾತ್ತೀರ್ಥಸಾಧನೇ ।
ತತ್ಪುಣ್ಯಫಲಮಾಪ್ನೋತಿ ವಿಷ್ಣೋರ್ಜಾಗರಕಾರಣಾತ್ ॥ ೨೫ ॥

ಪಕ್ಷವರ್ಧಿನೀ ಮಹಾಪುಣ್ಯಾ ಪವಿತ್ರಾ ಪಾಪನಾಶಿನೀ ।
ಉಪವಾಸಕೃತಾಂ ವಿಪ್ರ ಹತ್ಯಾಕೋಟಿವಿನಾಶಿನೀ ॥ ೨೬ ॥

---

೨೩. ಆದುದರಿಂದ ಬಹುಧನ್ಯವಾದ ಈ ಪಕ್ಷವರ್ಧಿನಿಯನ್ನು, ಮಾಡಬೇಕು. ಹಾಗೆಮಾಡಿದರೆ ಪೂರ್ಣವಾದ ಪುಣ್ಯವನ್ನು ಹೊಂದುತ್ತಾನೆ. ಸಂಶಯವಿಲ್ಲ.

೨೪. ಯಾವ ಮಹಿಮನು ಪಕ್ಷವರ್ಧಿನಿಯ, ಮಹಿಮೆಯನ್ನು ಕೇಳುತ್ತಾನೆಯೋ, ಅವನು ಈ ವ್ರತವನ್ನು ಸಂಪೂರ್ಣವಾಗಿ ಮಾಡಿದಂತಾಗಿ, ಚರಾಚರಗಳಿರುವವರೆಗೂ ಸುಖಿಸುತ್ತಾನೆ.

೨೫. ಪಂಚಾಗ್ನಿಯ ಮಧ್ಯದಲ್ಲಿ ತಪಸ್ಸುಮಾಡಿದರೆ, ತೀರ್ಥಗಳೆಲ್ಲದರಲ್ಲಿಯೂ ಸ್ನಾನಮಾಡಿದರೆ, ಯಾವಪುಣ್ಯವು ಬರುತ್ತದೆಯೋ, ಆ ಪುಣ್ಯವನ್ನು ಈ ದ್ವಾದಶಿಯಲ್ಲಿ ಜಾಗರಣಮಾಡುವುದರಿಂದ ಪಡೆಯುತ್ತಾನೆ.

೨೬. ಈ ಪಕ್ಷವರ್ಧಿನಿಯು, ಮಹಾಪುಣ್ಯವಾದುದು. ಪವಿತ್ರವಾದುದು. ಪಾಪನಾಶಕವಾದುದು. ಇದರಲ್ಲಿ ಉಪವಾಸಮಾಡಿದರೆ, ಕೋಟಿ ಬ್ರಹ್ಮಹತ್ಯಾದಿ ಪಾಪಗಳೂ, ನಾಶವಾಗುತ್ತವೆ.

ವಸಿಷ್ಠೇನ ಕೃತಾ ಪೂರ್ವಂ ಭಾರದ್ವಾಜೇನ ವೈ ಮುನೇ ।
ಧ್ರುವೇಣ ಚಾಂಬರೀಷೇಣ ಕೃತೇಯಂ ವಿಷ್ಣುವಲ್ಲಭಾ ॥ ೨೭ ॥

ಇಯಂ ಕಾಶೀಸಮಾ ಪುಣ್ಯಾ ಇಯಂ ವೈ ದ್ವಾರಕಾ ಸಮಾ ।
ಉಪೋಷಿತಾ ಚ ಭಕ್ತೇನ ವಾಂಛಿತಂ ಚ ದದಾತ್ಯಸೌ ॥ ೨೮ ॥

ಇಯಂ ಧನ್ಯಾ ಧನ್ಯತಮಾ ಹತ್ಯಾಯುತವಿನಾಶಿನೀ ।
ಕರ್ತವ್ಯಾ ತು ವಿಶೇಷೇಣ ವೈಷ್ಣವೈರ್ಜ್ಞಾನತತ್ಪರೈಃ ॥ ೨೯ ॥

ಅತೋ ಸರ್ವೇಶ್ವರೋ ದೇವಃ ಸಂಸೇವ್ಯೋ ವ್ರತತತ್ಪರೈಃ ।
ಕಿಮನ್ಯದ್ಬಹುನೋಕ್ತೇನ ಕರ್ತವ್ಯಂ ವ್ರತಮುತ್ತಮಂ ॥ ೩೦ ॥

ಯಥಾ ಚ ವರ್ಧತೇ ಚಂದ್ರಃ ಸಿತೇ ಪಕ್ಷೇ ವಿಶೇಷತಃ ।
ತಥಾ ವೈ ವರ್ಧತೇ ಭಕ್ತಃ ಕರಣಾತ್ಪಕ್ಷವರ್ಧಿನೀಂ ॥ ೩೧ ॥

---

೨೭. ಪೂರ್ವದಲ್ಲಿ ವಸಿಷ್ಠ, ಭಾರದ್ವಾಜ, ಧ್ರುವ, ಅಂಬರೀಷ, ಇವರೆಲ್ಲರೂ ಕೂಡ, ಈ ವಿಷ್ಣುಪ್ರಿಯವಾದ, ಪಕ್ಷವರ್ಧಿನಿಯನ್ನಾಚರಿಸಿದರು.

೨೮. ಇದು ಪುಣ್ಯದಲ್ಲಿ ಕಾಶಿಗೆ ಸಮವಾದುದು. ದ್ವಾರಕೆಗೂ ಸಮವಾದುದು. ಭಕ್ತನಾದವನು ನಿಯಮದಿಂದ ಉಪವಾಸ ಮಾಡಿದರೆ ಆಪೇಕ್ಷಿಸಿದುದನ್ನು ಹೊಂದುತ್ತಾನೆ.

೨೯. ಇದು ಧನ್ಯವಾದುದು. ಧನ್ಯತಮವೂ ಆದುದು. ಅನೇಕ ಹತ್ಯಗಳನ್ನು ನಾಶಮಾಡುತ್ತದೆ. ಜ್ಞಾನಿಗಳಾದ ವೈಷ್ಣವರು ಇದನ್ನು ಅಗತ್ಯ ವಾಗಿ ಮಾಡಲೇಬೇಕು.

೩೦. ಆದುದರಿಂದ ಸರ್ವೇಶ್ವರನಾದ ದೇವದೇವನನ್ನು ವ್ರತಿಗಳು ಸೇವಿಸ ಬೇಕು. ಬಹಳ ಹೇಳಿದುದರಿಂದೇನು? ಇದು ಉತ್ತಮವಾದ ವ್ರತವು. ಇದನ್ನು ಮಾಡಬೇಕು.

೩೧. ಶುಕ್ಲಪಕ್ಷದಲ್ಲಿ ಚಂದ್ರನು ಬೆಳೆಯುವಂತೆ, ಭಕ್ತನು ಇದನ್ನು ಆಚರಿಸಿದರೆ ವೃದ್ಧಿಯಾಗುತ್ತಾನೆ.

**ಸೂರ್ಯೋದಯೇ ಯಥಾ ಧ್ವಾನ್ತಂ ನಶ್ಯತೇ ತತ್ ಕ್ಷಣಾದಪಿ ।**
**ತಥಾಘಂ ನಾಶಮಾಪ್ನೋತಿ ಕರಣಾತ್ಪಕ್ಷವರ್ಧಿನೀಂ　　॥ ೩೨ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಪತಿ ನಾರದ ಸಂವಾದೇ ಪಕ್ಷವರ್ಧಿನೀ ಏಕಾದಶೀ ಮಹಾತ್ಮ್ಯಂ ನಾಮ ಅಷ್ಟತ್ರಿಂಶೋಽಧ್ಯಾಯಸ್ಸಮಾಪ್ತಃ**

---

೩೨. ಸೂರ್ಯನು ಹುಟ್ಟಿದರೆ ಕತ್ತಲೆಯು ನಾಶವಾಗುವಂತೆ, ಈ ಪಕ್ಷವರ್ಧಿನಿಯನ್ನು ಮಾಡುವುದರಿಂದ ಒಡನೆಯೇ ಪಾಪವೆಲ್ಲವೂ ನಾಶವಾಗುತ್ತವೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಪತಿ ನಾರದರ ಸಂವಾದದಲ್ಲಿ ಪಕ್ಷವರ್ಧಿನೀ ಏಕಾದಶಿಯ ಮಹಿಮೆ ಎಂಬ ಹೆಸರಿನ ಮೂವತ್ತೆಂಟನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

-X-

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ಏಕೋನಚತ್ವಾರಿಂಶೋऽಧ್ಯಾಯಃ ||



|| ಮಹಾದೇವ ಉವಾಚ ||

ಶೃಣು ನಾರದ ವಕ್ಷ್ಯಾಮಿ ಮಾಹಾತ್ಮ್ಯಂ ಜಾಗರಸ್ಯ ತು ।
ಯಚ್ಛೃತ್ವಾ ಮುಕ್ತಿಮಾಪ್ನೋತಿ ಮಹಾಪಾಪೀ ನ ಸಂಶಯಃ || ೧ ||

|| ನಾರದ ಉವಾಚ ||

ಅಹೋ ವಿಶ್ವೇಶ್ವರೋ ವಿಷ್ಣುಃ ಪವಿತ್ರೀಕರಣಸ್ಸದಾ ।
ತಸ್ಯೋಪವಾಸಮಾಹಾತ್ಮ್ಯಂ ಶ್ರುತಂ ಹಿ ತ್ವನ್ಮುಖಾಚ್ಛಿವ || ೨ ||

ತಥಾಪಿ ಶ್ರೋತುಮಿಚ್ಛಾಮಿ ಮಾಹಾತ್ಮ್ಯಂ ಜಾಗರಸ್ಯ ತು ।
ಕೀದೃಗ್ಜಾಗರಮಾಹಾತ್ಮ್ಯಂ ರಾತ್ರೌ ಭಕ್ತಿಸ್ತು ಕೀದೃಶೀ || ೩ ||

---

## ಮೂವತ್ತೊಂಭತ್ತನೆಯ ಅಧ್ಯಾಯವು



೧. ಮಹಾದೇವನು ಹೇಳಿದನು–ಎಲೈ ನಾರದನೆ! ಜಾಗರಣದ ಮಹಿಮೆಯನ್ನು ಹೇಳುತ್ತೇನೆ. ಕೇಳು. ಇದನ್ನು ಕೇಳಿದರೆ ಮಹಾಪಾಪಿಯಾದರೂ ಮುಕ್ತಿಯನ್ನು ಹೊಂದುತ್ತಾನೆ. ಸಂಶಯವಿಲ್ಲ.

೨. ನಾರದನು ಹೇಳಿದನು–ಪ್ರಪಂಚಕ್ಕೆ ಒಡೆಯನಾದ ವಿಷ್ಣುವು, ಬಹು ಪವಿತ್ರನಾದವನು. ಪವಿತ್ರವನ್ನು ಮಾಡತಕ್ಕವನು. ಅವನ ದಿವಸದಲ್ಲಿ ಉಪವಾಸ ಮಾಡಿದರೆ, ಬರುವ ಫಲವನ್ನೂ, ಆ ದಿನದ ಮಹಿಮೆಯನ್ನೂ ಕೇಳಿದುದಾಯಿತು.

೩. ಆದರೂ ಕೂಡ ಆ ಜಾಗರಣೆಯ ಮಹಿಮೆಯನ್ನು ಕೇಳಲಿಚ್ಛಿಸುತ್ತೇನೆ. ಜಾಗರಣೆಯ ಮಹಿಮೆಯೇನು? ಭಕ್ತಿಯಿಂದ ಮಾಡಿದರೆ ಅದು ಎಂಥಹ ಫಲವನ್ನು ಕೊಡುತ್ತದೆ?

ಪ್ರಹರೇಣ ತು ಯಥಾ ಪೂಜಾ ವದ ವಿಶ್ವೇಶ್ವರ ಪ್ರಭೋ ।
ತ್ವಂ ಲೋಕೇಷು ಸದಾ ಪೂಜ್ಯಃ ತ್ವಂ ಹಿ ದೇವೋ ಜನಾರ್ದನಃ　॥ ೪ ॥

ತ್ವಂ ಹಿ ವಿಶ್ವೇಶ್ವರೋ ದೇವೋ ಯತೋ ಭಕ್ತಿರ್ಜನಾರ್ದನೇ ।
ಸರ್ವೇಷಾಂ ಚೈವ ಭಕ್ತಾನಾಂ ತ್ವಂ ಚ ಶ್ರೇಷ್ಠೋ ಹ್ಯುಮಾಪತೇ　॥ ೫ ॥

ಲೋಕೇಽಸ್ಮಿನ್ ಸರ್ವದಾ ಭಕ್ತ್ಯಾ ತವಾಖ್ಯಾ ವರ್ತತೇ ಶಿವ ।
ಅತೋ ಯೇನ ಪ್ರಕಾರೇಣ ಲೋಕಾನಾಂ ಮುಕ್ತಿರೇವ ಚ ।
ವಿಶ್ವೇಶ್ವರ ವದ ತ್ವಂ ಹಿ ಮಾಹಾತ್ಮ್ಯಂ ಜಾಗರಸ್ಯ ತು　॥ ೬ ॥

॥ ಮಹಾದೇವ ಉವಾಚ ॥

ಏಕಾದಶ್ಯಾಂ ಜನೋ ವಿಷ್ಣುಂ ರಾತ್ರೌ ಸಂಪೂಜ್ಯ ಭಕ್ತಿತಃ ।
ಕುರ್ಯಾತ್ ಜಾಗರಣಂ ವಿಷ್ಣೋಃ ಪುರತೋ ವೈಷ್ಣವೈಸ್ಸಹ　॥ ೭ ॥

ಗೀತಂ ವಾದ್ಯಂ ತಥಾ ನೃತ್ಯಂ ಪುರಾಣಪಠನಂ ತಥಾ ।
ಧೂಪಂ ದೀಪಂ ಚ ನೈವೇದ್ಯಂ ಪುಷ್ಪಗಂಧಾನುಲೇಪನಂ　॥ ೮ ॥

---

೪. ಎಲೈ ವಿಶ್ವೇಶ್ವರನೆ! ಅದರಲ್ಲಿ ಯಾವುದ ಪೂಜೆಯು ಎಂಥಾದ್ದು? ಎಂಬುದನ್ನು ದಯವಿಟ್ಟು ವಿಸ್ತರಿಸು. ನೀನು ಲೋಕಕ್ಕೆಲ್ಲಾ ಪೂಜ್ಯನು. ನೀನೇ ಜನಾರ್ದನನು.

೫. ನಿನಗೆ ಜನಾರ್ದನನಲ್ಲಿ ಭಕ್ತಿಯು ಹೆಚ್ಚಾಗಿರುವುದರಿಂದಲೇ ಪ್ರಪಂಚಕ್ಕೆಲ್ಲಾ ಸ್ವಾಮಿಯಾಗಿದ್ದೀಯೆ. ಭಕ್ತರಲ್ಲೆಲ್ಲಾ ಮೊದಲನೆಯವನಾಗಿದ್ದೀಯೆ.

೬. ಎಲೈ ಶಿವನೆ! ಲೋಕದಲ್ಲಿ ನಿನ್ನ ಹೆಸರು ಪ್ರಸಿದ್ಧಿಯಾಗಿರುವುದು. ಆದುದರಿಂದ ಲೋಕಕ್ಕೆ ಮುಕ್ತಿಸಾಧನವಾವುದು? ಎಂಬುದನ್ನು ತಿಳಿಸು. ಎಲೈ ವಿಶ್ವೇಶ್ವರನೆ! ಜಾಗರಣದ ಮಹಿಮೆಯನ್ನು ಹೇಳು.

೭. ಮಹಾದೇವನು ಹೇಳಿದನು–ಏಕಾದಶಿಯ ದಿವಸ ಜನರು ವಿಷ್ಣುವನ್ನು ಪೂಜಿಸಿ, ರಾತ್ರಿಯಲ್ಲಿ ಜಾಗರಣೆ ಮಾಡಬೇಕು. ಜೊತೆಗೆ ಇನ್ನೂ ಅನೇಕ ಜನ ವೈಷ್ಣವರೆಲ್ಲರೂ ಸೇರಿರಬೇಕು.

೮–೧೦. ಗೀತ, ವಾದ್ಯ, ನೃತ್ಯ, ಪುರಾಣ ಪಠಣಗಳನ್ನು ಆ ಸ್ವಾಮಿಯ ಎದುರಿಗೆ ಮಾಡಬೇಕು. ಧೂಪ, ದೀಪ, ನೈವೇದ್ಯ, ಪುಷ್ಪ, ಗಂಧ, ಅನುಲೇಪನ,

ಫಲಂ ಅರ್ಘ್ಯಂ ಚ ಶ್ರದ್ಧಾಂ ಚ ದಾನಮಿಂದ್ರಿಯಸಂಯಮಂ ।
ಸತ್ಯಾನ್ವಿತಂ ಚ ವಿಪ್ರೇಂದ್ರ ವಚೋ ಯುಕ್ತಂ ಕ್ರಿಯಾನ್ವಿತಂ ॥ ೯ ॥

ವಿನಿದ್ರಂ ವೈ ಮುದಾ ಯುಕ್ತೋ ಯಃ ಕರೋತಿ ನರಸ್ಸದಾ ।
ಸರ್ವಪಾಪವಿನಿರ್ಮುಕ್ತೋ ಜಾಯತೇ ವಿಷ್ಣುವಲ್ಲಭಃ ॥ ೧೦ ॥

ರಾತ್ರೌ ಜಾಗರಣೇ ಪ್ರಾಪ್ತೇ ನಿದ್ರಾಂ ಕುರ್ವಂತ್ಯವೈಷ್ಣವಾಃ ।
ಹಾರಿತಂ ಸೋಪವಾಸಂ ಚ ವ್ರತಂ ವೈ ವಿಷ್ಣುಸಂಜ್ಞಕಂ ॥ ೧೧ ॥

ಯೇ ಕುರ್ವಂತಿ ನರಾಃ ಪ್ರಾಜ್ಞಾ ಜಾಗರೇ ವಿಷ್ಣುಸಂಜ್ಞಕೇ ।
ಜಾಗರಂ ಕೃಷ್ಣಭಾವೇನ ನ ಸ್ವಪಂತಿ ಕದಾಚನ ॥ ೧೨ ॥

ಕೃಷ್ಣಸ್ಯ ನಾಮ ಮನಸಾ ವದಂತಿ ಚ ಪುನಃ ಪುನಃ ।
ತೇ ತು ಧನ್ಯತಮಾ ಜ್ಞೇಯಾ ಅಸ್ಯಾಂ ರಾತ್ರೌ ವಿಶೇಷತಃ ॥ ೧೩ ॥

---

ಫಲ, ಅರ್ಘ್ಯಗಳನ್ನೂ, ದಾನವನ್ನೂ ಕೊಡಬೇಕು. ಇಂದ್ರಿಯ ನಿಗ್ರಹವನ್ನು ಮಾಡಿಕೊಂಡಿದ್ದು, ಸತ್ಯವನ್ನೇ ನುಡಿಯುತ್ತಿರಬೇಕು. ಒಳ್ಳೆಯ ಮಾತನ್ನೇ ಆಡುತ್ತಿರಬೇಕು. ಆದಿನ ಯಾವನು ಸಂತೋಷದಿಂದ ನಿದ್ದೆ ಮಾಡದಿರುವನೋ ಅವನು ಪಾಪಗಳೆಲ್ಲವನ್ನೂ ಕಳೆದುಕೊಳ್ಳುವುದಲ್ಲದೆ ವಿಷ್ಣುವಿಗೆ ಪ್ರಿಯನಾಗುವನು.

೧೧. ರಾತ್ರಿಯಲ್ಲಿ ಜಾಗರಣೆ ಮಾಡಬೇಕಾಗಿ ಬಂದಾಗ ನಿದ್ದೆ ಮಾಡಿದರೆ ಅವರು ವಿಷ್ಣುಭಕ್ತರಲ್ಲವು. ಉಪವಾಸ ಮಾಡಿ ಜಾಗರಣೆ ಮಾಡದಿದ್ದರೆ, ಅದು ಹಾರಿತವೆಂಬ ವ್ರತವಾಗುವುದು.

೧೨. ಯಾರು ಏಕಾದಶಿಯದಿನ ಉಪವಾಸಮಾಡಿ, ಜಾಗರಣ ಮಾಡುತ್ತ ವಿಷ್ಣುವಿನಲ್ಲಿ ಭಕ್ತರಾಗಿರುವರೋ ಅವರು ಮಲಗುವುದೇ ಇಲ್ಲವು.

೧೩. ಮನಸ್ಸಿನಲ್ಲಿಯೂ ಕೂಡ ಯಾವಾಗಲೂ ಕೃಷ್ಣನ ಧ್ಯಾನವನ್ನೇ ಮಾಡುತ್ತಿರಬೇಕು. ಈ ರಾತ್ರಿಯಲ್ಲಿ ಯಾರು ಜಾಗರಣೆ ಮಾಡುತ್ತಾರೆಯೋ ಅವರೇ ಧನ್ಯತಮರು.

ಕ್ಷಣೇ ಕ್ಷಣೇ ತು ಗೋವಿಂದನಾಮ್ನಾ ಚ್ಶೈವ ಚತುರ್ಗುಣಂ ।
ಪ್ರಹರೇ ಕೋಟಿಗುಣಿತಂ ಚತುರ್ಯಾಮೇ ತ್ವಸಂಖ್ಯಕಂ ॥ ೧೪ ॥

ಜಾಗರೇ ನಿಮಿಷಾರ್ಧೇ ತು ಕೇಶವಾಗ್ರೇ ವಿಶೇಷತಃ ।
ತತ್ಫಲಂ ಕೋಟಿಗುಣಿತಂ ತಸ್ಯ ಸಂಖ್ಯಾ ನ ವಿದ್ಯತೇ ॥ ೧೫ ॥

ನರ್ತನಂ ಕುರುತೇ ಯಸ್ತು ಕೇಶವಾಗ್ರೇ ನರೋತ್ತಮಃ ।
ನ ಫಲಂ ಹೀಯತೇ ತಸ್ಯ ಆಜನ್ಮಮರಣಾಂತಿಕಂ ॥ ೧೬ ॥

ಸಾಶ್ಚರ್ಯಂ ಚೈವ ಸೋತ್ಸಾಹಂ ಪಾಪಾಲಸ್ಯಾದಿವರ್ಜಿತಂ ।
ಪ್ರದಕ್ಷಿಣಸಮಾಯುಕ್ತಂ ನಮಸ್ಕಾರಂ ಪುರಸ್ಸರಂ ॥ ೧೭ ॥

ನೀರಾಜನಸಮಾಯುಕ್ತಮನಿರ್ವಿಣ್ಣೇನ ಚೇತಸಾ ।
ಯಾಮೇ ಯಾಮೇ ಮಹಾಭಾಗ ಕುರ್ಯಾದಾರಾರ್ತಿಕಂ ಹರೇಃ ॥ ೧೮ ॥

---

೧೪. ಆ ಜಾಗರಣ ರಾತ್ರಿಯಲ್ಲಿ ಗೋವಿಂದನಾಮವನ್ನು ಹೇಳುತ್ತಿದ್ದರೆ ಕ್ಷಣಕ್ಷಣಕ್ಕೂ ದಿನದಿನದ ನಾಲ್ಕರಷ್ಟು ಹೆಚ್ಚು ಪುಣ್ಯವೂ, ಜಾಮಕ್ಕೆ ಕೋಟಿಯಷ್ಟು ಹೆಚ್ಚು ಪುಣ್ಯವೂ, ನಾಲ್ಕು ಯಾಮದಲ್ಲಿಯೂ ಮಾಡಿದರೆ ಅಸಂಖ್ಯಾಕವಾದ ಫಲವೂ ಬರುತ್ತದೆ.

೧೫. ಕೇಶವನೆದುರಿಗೆ ಒಂದು ನಿಮಿಷಕಾಲ ಜಾಗರಣೆ ಮಾಡಿದರೂ, ಅದು ಕೋಟಿಸಂಖ್ಯಾಕ ಫಲವನ್ನು ಕೊಡುತ್ತದೆ. ಒಂದುವೇಳೆ ಸಂಖ್ಯೆಯಿಲ್ಲದಿದ್ದರೂ ಇರಬಹುದು.

೧೬. ಕೇಶವನ ಎದುರಿನಲ್ಲಿ ಕುಣಿದರೆ, ಹುಟ್ಟುವುದರಿಂದ ಸಾಯುವತನಕ ಆ ಫಲವು ಹೋಗುವುದೇ ಇಲ್ಲವು.

೧೭. ಆಶ್ಚರ್ಯಯುಕ್ತವಾದ ಕೆಲಸಗಳಿಂದಲೂ, ಉತ್ಸಾಹದಿಂದಲೂ ಕೂಡಿರಬೇಕು. ಪಾಪ ಕೆಲಸವನ್ನೂ, ಆಲಸ್ಯ ಕೆಲಸವನ್ನೂ ಮಾಡಬಾರದು. ಪ್ರದಕ್ಷಿಣೆ ಮಾಡಿ ನಮಸ್ಕಾರವನ್ನು ಮಾಡಬೇಕು.

೧೮. ಸಂತೋಷದಿಂದ ಮಂಗಳಾರತಿಯನ್ನು ಬೆಳಗಬೇಕು. ಪ್ರತಿ ಯಾಮದಲ್ಲಿಯೂ ಮಂಗಳಾರತಿಯನ್ನು ಮಾಡುತ್ತಿರಬೇಕು.

ಷಡ್ವಿಂಶಗುಣಸಂಯುಕ್ತಂ ಏಕಾದಶ್ಯಾಂ ಚ ಜಾಗರಂ ।
ಯಃ ಕರೋತಿ ನರೋ ಭಕ್ತ್ಯಾ ನ ಪುನರ್ಜಾಯತೇ ಭುವಿ ॥ ೧೯ ॥

ಏವಂ ಯಃ ಕುರುತೇ ಭಕ್ತ್ಯಾ ವಿತ್ತಶಾಠ್ಯವಿವರ್ಜಿತಃ ।
ಜಾಗರಂ ವಾಸರೇ ವಿಷ್ಣೋರ್ಲೀಯತೇ ಪರಮಾತ್ಮನಿ ॥ ೨೦ ॥

ಧನವಾನ್ ವಿತ್ತಶಾಠ್ಯೇನ ಯಃ ಕರೋತಿ ಪ್ರಜಾಗರಂ ।
ತೇನಾತ್ಮಾ ಹಾರಿತೋ ನೂನಂ ಕಿತವೇನ ದುರಾತ್ಮನಾ ॥ ೨೧ ॥

ವಿಷ್ಣೋರ್ಜಾಗರಣೇ ಪ್ರಾಪ್ತೇ ಹ್ಯುಪಹಾಸಂ ಕರೋತಿ ಯಃ ।
ಷಷ್ಟಿವರ್ಷಸಹಸ್ರಾಣಿ ವಿಷ್ಠಾಯಾಂ ಜಾಯತೇ ಕ್ರಿಮಿಃ ॥ ೨೨ ॥

ವೇದವಿದ್ಬ್ರಾಹ್ಮಣೋ ಯಸ್ತು ನರ್ತನೇ ಚ ವಿಶೇಷತಃ ।
ಉಪಹಾಸಪರಃ ಪ್ರಾಪ್ತಃ ಸ ವೈ ಚಾಂಡಾಲ ಉಚ್ಯತೇ ॥ ೨೩ ॥

---

೧೯. ಏಕಾದಶಿಯ ಜಾಗರಣೆಯಲ್ಲಿ ಇಪ್ಪತ್ತಾರು ಗುಣಗಳಿವೆ. ಅವುಗಳನ್ನು ಸೇರಿಸಿ ಜಾಗರಣ ಮಾಡಬೇಕು. ಹಾಗೆ ಭಕ್ತಿಯಿಂದ ಜಾಗರಣ ಮಾಡಿದರೆ ಅವನು ಭೂಮಿಯಲ್ಲಿ ಮತ್ತೆ ಹುಟ್ಟುವುದಿಲ್ಲ.

೨೦. ಈ ರೀತಿಯಾಗಿ ಲೋಭಿತನವಿಲ್ಲದೆ, ಭಕ್ತಿಯಿಂದ ಜಾಗರಣ ಮಾಡಿದರೆ ಅವನು ವಿಷ್ಣುವಿನಲ್ಲಿ ಐಕ್ಯನಾಗುತ್ತಾನೆ.

೨೧. ಧನಿಕನಾಗಿದ್ದವನು ಲೋಭಿತನದಿಂದ ಜಾಗರಣ ಮಾಡಿದರೆ ಅವನು ಅಯೋಗ್ಯನು. ತನ್ನನ್ನು ತಾನೇ ನಾಶಮಾಡಿಕೊಳ್ಳುವನು.

೨೨ ವಿಷ್ಣುವಿನ ಜಾಗರಣೆ ಮಾಡುತ್ತಿದ್ದರೆ, ಅದನ್ನು ನೋಡಿ ಹಾಸ್ಯ ಮಾಡುವವನು, ಅರವತ್ತು ಸಾವಿರ ವರ್ಷಗಳವರೆಗೆ ಅಮೇಧ್ಯದಲ್ಲಿ ಹುಳುವಾಗಿ ಹುಟ್ಟುತ್ತಾನೆ.

೨೩. ವೇದವನ್ನು ಓದಿದ ಬ್ರಾಹ್ಮಣನು ಅವರನ್ನು ನೋಡಿ ಹಾಸ್ಯ ಮಾಡಿದರೆ, ಅವನನ್ನು ಚಂಡಾಲನೆಂದು ಹೇಳುತ್ತೇನೆ.

ನಿಮಿಷಂ ನಿಮಿಷಾರ್ಧಂ ವಾ ಯಃ ಕರೋತಿ ಪ್ರಜಾಗರಂ ;
ಧರ್ಮಾರ್ಥಕಾಮಮೋಕ್ಷಾಣಾಂ ಪ್ರಾಪ್ನೋತಿ ಪರಮವ್ಯಯಂ || ೨೪ ||

ವೇದಶಾಸ್ತ್ರ ರತೋ ನಿತ್ಯಂ ನಿತ್ಯಂ ವೈ ಯಜ್ಞಯಾಜಕಃ ।
ರಾತ್ರೌ ಜಾಗರಣೇ ಪ್ರಾಪ್ತೇ ನಿಂದಾಂ ಕುರ್ವನ್ವ್ರಜತ್ಯಧಃ || ೨೫ ||

ಮಮ ಪೂಜಾಂ ಪ್ರಕುರ್ವಾಣೋ ವಿಷ್ಣುನಿಂದಾಸು ತತ್ಪರಃ ।
ಏಕವಿಂಶತ್ಕುಲೇರ್ನೈವ ನರಕಂ ಪ್ರತಿಪದ್ಯತೇ || ೨೬ ||

ವಿಷ್ಣುಶ್ಶಿವಶ್ಶಿವೋ ವಿಷ್ಣುರೇಕಮೂರ್ತಿರ್ದ್ವಿಧಾ ಸ್ಥಿತಾ ।
ತಸ್ಮಾತ್ ಸರ್ವ ಪ್ರಕಾರೇಣ ನೈವ ನಿಂದಾಂ ಪ್ರಕಾರಯೇತ್ || ೨೭ ||

ದಷ್ಟಾಃ ಕಾಲಭುಜಂಗೇನ ಸ್ವಪಂತಿ ಮಧುಹಾದಿನೇ ।
ಕುರ್ವಂತಿ ಜಾಗರಂ ನೈವ ಮಾಯಯಾ ಚೈವ ಮೋಹಿತಾಃ || ೨೮ ||

---

೨೪. ಯಾವನು ಒಂದು ನಿಮಿಷ ಅಥವಾ ಅರ್ಧ ನಿಮಿಷವಾಗಲೀ ಜಾಗರಣೆ ಮಾಡಿದರೆ, ಅವನು ಶಾಶ್ವತವಾದ ಧರ್ಮಾರ್ಥಕಾಮಮೋಕ್ಷಗಳನ್ನು ಹೊಂದುತ್ತಾನೆ. ಮತ್ತು ವೈಕುಂಠವನ್ನೂ ಹೊಂದುತ್ತಾನೆ.

೨೫. ವೇದಶಾಸ್ತ್ರಗಳನ್ನು ಓದಿದ್ದರೂ, ಯಾವಾಗಲೂ ಯಜ್ಞ ಯಾಗ ಗಳನ್ನು ಮಾಡುತ್ತಿದ್ದರೂ, ಜಾಗರಣೆಯ ದಿನ ರಾತ್ರಿಯಲ್ಲಿ ಜಾಗರಣೆ ಮಾಡದೆ, ನಿಂದಿಸಿದರೆ ಅವನು ನರಕವನ್ನು ಹೊಂದುತ್ತಾನೆ.

೨೬. ಯಾವನು ಶಿವನಾದ ನನ್ನ ಪೂಜೆಯನ್ನು ಮಾಡುತ್ತ, ವಿಷ್ಣುವನ್ನು ನಿಂದಿಸುತ್ತಾನೆಯೋ ಅವನು ಇಪ್ಪತ್ತೊಂದು ತಲೆಗಳೊಡನೆ ನರಕವನ್ನು ಹೊಂದುತ್ತಾನೆ.

೨೭. ಶಿವನೇ ವಿಷ್ಣುವು. ವಿಷ್ಣುವೇ ಶಿವನು. ಒಂದೇ ಮೂರ್ತಿಯು ಶಿವ ವಿಷ್ಣುವೆಂದು ಎರಡು ಪ್ರಕಾರವಾಗಿ ನಿಂತಿದೆ. ಆದುದರಿಂದ ಯಾವರೀತಿ ಯಲ್ಲಿಯೂ ಅವರನ್ನು ನಿಂದಿಸಬಾರದು.

೨೮. ಹರಿದಿನದಲ್ಲಿ ಜಾಗರಣ ಪ್ರಾಪ್ತವಾಗಿರುವಾಗ್ಯೆ, ಕಾಲವೆಂಬ ಸರ್ಪ ದಿಂದ ಕಚ್ಚಲ್ಪಟ್ಟವರು ಮಲಗುತ್ತಾರೆ. ಅವರು ಮಾಯೆಯಿಂದ ಪ್ರೇರಿತರಾಗಿ ಜಾಗರಣೆಯನ್ನು ಮಾಡುವುದಿಲ್ಲ.

ಪ್ರಾಪ್ತಾ ಹ್ಯೇಕಾದಶೀ ಯೇಷಾಂ ಕಲೌ ಜಾಗರಣಂ ವಿನಾ ।
ತೇ ವಿನಷ್ಟಾ ನ ಸಂದೇಹೋ ಯಸ್ಮಾಜ್ಜೀವಿತಮಧ್ರುವಂ ॥ ೨೯ ॥

ಉದ್ಧೃತಂ ನೇತ್ರಯುಗ್ಮಂ ತು ದತ್ವಾ ವೈ ವೈಷ್ಣವಂ ಪದಂ ।
ಕೃತಂ ಯೇ ನೈವ ಪಶ್ಯಂತಿ ಪಾಪಿನೋ ಹರಿಜಾಗರಂ ॥ ೩೦ ॥

ಅಭಾವೇ ವಾಚಕಸ್ಯಾಥ ಗೀತಂ ನೃತ್ಯಂ ತು ಕಾರಯೇತ್ ।
ವಾಚಕೇ ಸತಿ ದೇವರ್ಷೇ ಪುರಾಣಂ ಪ್ರಥಮಂ ಪಠೇತ್ ॥ ೩೧ ॥

ಅಶ್ವಮೇಧಸಹಸ್ರಸ್ಯ ವಾಜಪೇಯಾಯುತಸ್ಯ ಚ ।
ಪುಣ್ಯಂ ಕೋಟಿಗುಣಂ ವತ್ಸ ವಿಷ್ಣೋರ್ಜಾಗರಣೇ ಕೃತೇ । ॥ ೩೨ ॥

ಪಿತೃಪಕ್ಷೇ ಮಾತೃಪಕ್ಷೇ ಭಾರ್ಯಾಪಕ್ಷೇ ತು ನಾರದ ।
ಕುಲಾನುದ್ಧರತೇ ಚೈತಾನ್ ಕೃತ್ವಾ ಜಾಗರಣಂ ಹರೇಃ ॥ ೩೩ ॥

---

೨೯. ಕಲಿಯುಗದಲ್ಲಿ ಈ ಏಕಾದಶಿಯು ಪ್ರಾಪ್ತವಾಗಿರುವಾಗ ಉಪವಾಸ ಜಾಗರಣೆಗಳನ್ನು ಮಾಡದೆ ಯಾರಿರುವರೋ, ಅವರು ನಾಶವಾದಂತೆಯೇ, ಸಂದೇಹವಿಲ್ಲ. ಜೀವವು ಶಾಶ್ವತವಲ್ಲದುದರಿಂದ ಆ ಉಪವಾಸ ಜಾಗರಣೆಗಳನ್ನು ಮಾಡಬೇಕು.

೩೦. ಮನುಷ್ಯನು ಹರಿಯದಿನದ ಜಾಗರಣೆ ಮಾಡುವ ಸ್ಥಳಕ್ಕೆ ಹೋಗಿ, ಕಣ್ಣುಗಳನ್ನು ಬಿಟ್ಟುಕೊಂಡು, ವಿಷ್ಣುವಿನ ಸ್ಥಾನ ಮೊದಲಾದುವನ್ನು ನೋಡದಿದ್ದರೆ ಅವನ ಜನ್ಮವು ವ್ಯರ್ಥವು ಅವರೇ ಪಾಪಿಗಳು.

೩೧. ಪುರಾಣವನ್ನು ಓದುವವನು ಇಲ್ಲದಿದ್ದರೆ ನೃತ್ಯ ಗೀತಗಳನ್ನು ಮಾಡಬೇಕು. ಆತನು ಇದ್ದರೆ ಮೊದಲು ಪುರಾಣವನ್ನೇ ಓದಿಸಬೇಕು.

೩೨. ವಿಷ್ಣುವಿನ ದಿನದಲ್ಲಿ ಜಾಗರಣವನ್ನು ಮಾಡಿದರೆ, ಸಾವಿರ ಅಶ್ವಮೇಧಗಳ, ಹತ್ತುಸಾವಿರ ವಾಜಪೇಯ ಯಾಗಗಳ ಪುಣ್ಯಗಳ ಕೋಟಿ ಪುಣ್ಯವು ಬರುತ್ತದೆ.

೩೩. ಹರಿದಿನದಲ್ಲಿ ಜಾಗರಣವನ್ನು ಮಾಡಿದರೆ, ತಾಯಿಯ, ತಂದೆಯ, ಹೆಂಡತಿಯ ಕಡೆಯ ಕುಲಗಳನ್ನು ಉದ್ಧರಿಸುತ್ತಾನೆ.

ಉಪೋಷಣದಿನೇ ವಿದ್ಧೇ ಜಾಗರಂ ಪೂಜನಂ ಹರೇಃ ।
ವೃಥಾ ದಾನಾದಿಕಂ ಸರ್ವಂ ಕೃತಘ್ನೇಷು ಕೃತಂ ಯಥಾ　　|| ೩೪ ||

ಉಪೋಷಣದಿನೇ ವಿದ್ಧೇ ಪ್ರಾರಬ್ಧೇ ಜಾಗರೇ ಸ್ಥಿತಿಂ ।
ವಿಹಾಯ ಸ್ಥಾನಂ ತದ್ವಿಷ್ಣುಃ ಶಾಪಂ ದತ್ವಾ ಪ್ರಗಚ್ಛತಿ　　|| ೩೫ ||

ಅವಿದ್ಧೇ ವಾಸರೇ ವಿಷ್ಣೋರ್ಯೇ ಕುರ್ವಂತಿ ಪ್ರಜಾಗರಂ ।
ತೇಷಾಂ ಮಧ್ಯೇ ತು ತುಷ್ಟಸನ್ನೃತ್ಯಂ ತು ಕುರುತೇ ಹರಿಃ　　|| ೩೬ ||

ಯಾವದ್ದಿನಾನಿ ಕುರುತೇ ಜಾಗರಂ ಕೇಶವಾಗ್ರತಃ ।
ಯುಗಾನಿ ತಾನಿ ತಾವಂತಿ ವಿಷ್ಣುಲೋಕೇ ಮಹೀಯತೇ　　|| ೩೭ ||

ಯಾವದ್ದಿನಾನಿ ವಸತೇ ವಿನಾ ಜಾಗರಣಂ ಹರೇಃ ।
ತಾವದ್ವರ್ಷಸಹಸ್ರಾಣಿ ರೌರವಾನ್ನ ನಿವರ್ತತೇ　　|| ೩೮ ||

---

೩೪. ಏಕಾದಶಿಯು ದಶಮಿಯಿಂದ ಕೂಡಿದ್ದರೆ (ವೇಧೆ ಹೊಂದಿದ್ದರೆ) ಆದಿನ ಉಪವಾಸ ಜಾಗರಣೆಗಳನ್ನು ಮಾಡಿದರೆ, ದಾನಾದಿಗಳನ್ನೂ ಮಾಡಿದರೆ, ಅವೆಲ್ಲವೂ ಉಪಕಾರಸ್ಮರಣೆ ಮಾಡದವನಿಗೆ ಉಪಕಾರ ಮಾಡಿದಂತೆ ವ್ಯರ್ಥವಾಗುವುವು.

೩೫. ಏಕಾದಶಿಯು ದಶಮಿಯಿಂದ ಕೂಡಿದ್ದು ಆದಿನ ಉಪವಾಸ ಜಾಗರಣೆಗಳನ್ನು ಮಾಡಿದರೆ, ದಾನಾದಿಗಳನ್ನೂ ಮಾಡಿದರೆ, ವಿಷ್ಣುವು ಅವನಿಗೆ ಶಾಪವನ್ನು ಕೊಟ್ಟು ಆ ಸ್ಥಳವನ್ನು ಬಿಟ್ಟು ಹೊರಟುಹೋಗುವನು.

೩೬. ಏಕಾದಶಿಯು ದಶಮಿಯಿಂದ ವಿದ್ಧವಾಗಿಲ್ಲದಿದ್ದರೆ ಆದಿನ ಉಪವಾಸ ಜಾಗರಣೆಗಳನ್ನು ಮಾಡಿದರೆ, ವಿಷ್ಣುವು ತುಷ್ಟನಾಗಿ ಅವರ ಮಧ್ಯದಲ್ಲಿ ನರ್ತನ ಮಾಡುತ್ತಾನೆ.

೩೭. ಕೇಶವನ ಎದುರಿಗೆ, ವಿಷ್ಣುದಿನಗಳಲ್ಲಿ ಎಂದರೆ ಏಕಾದಶಿಯಲ್ಲಿ ಯಾವನು ಎಷ್ಟು ಏಕಾದಶಿಗಳ ಜಾಗರಣವನ್ನು ಮಾಡುತ್ತಾನೆಯೋ ಅವನು ಅಷ್ಟು ಯುಗಗಳವರೆಗೂ, ವಿಷ್ಣುಲೋಕದಲ್ಲಿ ಸುಖಿಸುತ್ತಾನೆ.

೩೮. ಹರಿಯ ಬಳಿಯಲ್ಲಿ ಎಷ್ಟುದಿನಗಳವರೆಗೂ, ಜಾಗರಣ ಮಾಡದೆ ಇರುವನೋ, ಅಷ್ಟುಸಾವಿರವರ್ಷಗಳವರೆಗೂ ರೌರವ ನರಕದಲ್ಲಿ ಬಿದ್ದಿರುತ್ತಾನೆ.

ಏಕಾದಶ್ಯಾಂ ಶಯಾನಸ್ಯ ವಿನಾ ಜಾಗರಣಂ ಹರೇಃ ।
ನೃತ್ಯಂತಿ ಧೃಶಸ್ತ್ರಾಶ್ಚ ತದ್ಗೃಹೇ ಯಮಕಿಂಕರಾಃ ॥ ೩೯ ॥

ಮೂಕವತ್ತಿಷ್ಠತೇ ಯೋ ವೈ ಗಾನಂ ಪಾಠಂ ನ ವಾ ಚರೇತ್ ।
ಸಪ್ತಜನ್ಮನಿ ಮೂಕತ್ವಂ ಜಾಯತೇ ಜಾಗರೇ ಹರೇಃ ॥ ೪೦ ॥

ಯೋ ನ ನೃತ್ಯತಿ ಮೂಢಾತ್ಮಾ ಪುರತೋ ಜಾಗರೇ ಹರೇಃ ।
ಪಂಗುತ್ವಂ ತಸ್ಯ ಜಾನೀಯಾತ್ ಜನ್ಮಜನ್ಮನಿ ಬಾಡಬ ॥ ೪೧ ॥

ಯಃ ಪುನಃ ಕುರುತೇ ಗೀತಂ ನೃತ್ಯಂ ಜಾಗರಣಂ ಹರೇಃ ।
ಬ್ರಾಹ್ಮಂ ಪದಂ ಮದೀಯಂ ಚ ಸತ್ಯಂ ವೈ ತಸ್ಯ ವೈಷ್ಣವಂ ॥ ೪೨ ॥

ಯಃ ಪ್ರಬೋಧಯತೇ ಲೋಕಾನ್ ವಿಷ್ಣೋರ್ಜಾಗರಣೇ ರತಃ ।
ವಸೇಚ್ಚಿರಂ ತು ವೈಕುಂಠೇ ಪಿತೃಭಿಸ್ಸಹ ವೈಷ್ಣವಃ ॥ ೪೩ ॥

---

೩೯. ಏಕಾದಶಿಯ ದಿನ, ಹರಿಯ ಎದುರಿಗೆ ಜಾಗರಣೆ ಮಾಡದೆ ಮಲಗಿರುವವನ ಮನೆಯಲ್ಲಿ, ಯಮಕಿಂಕರರು ಕೈಯಲ್ಲಿ ಶಸ್ತ್ರಗಳನ್ನು ಹಿಡಿದುಕೊಂಡು ಕುಣಿಯುತ್ತಾರೆ.

೪೦. ಏಕಾದಶಿಯದಿನ ಜಾಗರಣೆ ಮಾಡುತ್ತ ಯಾವನು ಗಾನಮಾಡದೆ, ಪಾಠವನ್ನು (ಕಥೆಯನ್ನು) ಹೇಳದೆ ಇರುವನೋ, ಅವನು ಏಳು ಜನ್ಮಗಳವರೆಗೂ ಮೂಕನಾಗಿರುತ್ತಾನೆ.

೪೧. ಜಾಗರಣೆ ಮಾಡುತ್ತ ಹರಿಯ ಎದುರಿಗೆ, ಯಾವನು ಕುಣಿಯುವುದಿಲ್ಲವೋ ಅವನು ಜನ್ಮ ಜನ್ಮದಲ್ಲಿಯೂ ಕುಂಟನಾಗುತ್ತಾನೆ.

೪೨. ಹರಿಯ ದಿನದಲ್ಲಿ ಜಾಗರಣ ಮಾಡುತ್ತ, ಯಾವನು ನೃತ್ಯ ಗೀತಗಳನ್ನು ಮಾಡುತ್ತಾನೆಯೋ, ಅವನಿಗೆ ಬ್ರಹ್ಮನಸ್ಥಾನ, ಶಿವನಸ್ಥಾನ, ವಿಷ್ಣುವಿನ ಸ್ಥಾನಗಳು ಸಿಕ್ಕುತ್ತವೆ.

೪೩. ಯಾವನು ಜಾಗರಣೆ ಮಾಡುತ್ತ, ಜನರ ಕೈಯಲ್ಲಿ ಜಾಗರಣ ಮಾಡಿಸುತ್ತಾ ಎಚ್ಚರಗೊಳಿಸುತ್ತಾನೆಯೋ, ಅವನು ಬಹುಕಾಲ ಪಿತೃಗಳೊಡನೆ ವೈಕುಂಠದಲ್ಲಿ ವಾಸಿಸುತ್ತಾನೆ.

ಮತಿಂ ಪ್ರಯಚ್ಛತೇ ಯಸ್ತು ಹರೇರ್ಜಾಗರಣಂ ಪ್ರತಿ ।
ಷಷ್ಟಿವರ್ಷಸಹಸ್ರಾಣಿ ಶ್ವೇತದ್ವೀಪೇ ವಸೇನ್ನರಃ ॥ ೪೪ ॥

ಯತ್ಕಿಂಚಿತ್ಕ್ರಿಯತೇ ಪಾಪಂ ಕೋಟಿಜನ್ಮನಿ ಮಾನವೈಃ ।
ಕೃಷ್ಣಸ್ಯ ಜಾಗರೇ ಸರ್ವಂ ರಾತ್ರೌ ನಶ್ಯತಿ ಬಾಡಬ ॥ ೪೫ ॥

ಶಾಲಗ್ರಾಮಶಿಲಾಗ್ರೇ ಯೇ ಪ್ರಕುರ್ವಂತಿ ಪ್ರಜಾಗರಂ ।
ಯಾಮೇ ಯಾಮೇ ಫಲಂ ಪ್ರೋಕ್ತಂ ಕೋಟಿತೀರ್ಥಸಮುದ್ಭವಂ ॥೪೬॥

ಸಂಪ್ರಾಪ್ತೇ ವಾಸರೇ ವಿಷ್ಣೋಃ ಯೇ ನ ಕುರ್ವಂತಿ ಜಾಗರಂ ।
ವೃಥಾ ಸ್ಯಾತ್ ಸುಕೃತಂ ತೇಷಾಂ ವೈಷ್ಣವಾನಾಂ ಚ ನಿಂದಯಾ ॥ ೪೭ ॥

ಕಾಮಾರ್ಥೌ ಸಂಪದಃ ಪುತ್ರಾಃ ಕೀರ್ತಿಲೋಕಾಶ್ಚ ಶಾಶ್ವತಾಃ ।
ಯಜ್ಞಾಯುತೈರ್ನ ಲಭ್ಯಂತೇ ದ್ವಾದಶೀಜಾಗರಂ ವಿನಾ ॥ ೪೮ ॥

---

೪೪. ಯಾವನು ಜನರು ಜಾಗರಣೆ ಮಾಡುವಂತೆ ಬುದ್ಧಿಯನ್ನು ಹುಟ್ಟಿಸುತ್ತಾನೆಯೋ, ಅವನು ಅರವತ್ತುಸಾವಿರ ವರ್ಷಗಳವರೆಗೆ ಶ್ವೇತದ್ವೀಪದಲ್ಲಿ ವಾಸಿಸುತ್ತಾನೆ.

೪೫. ಮನುಷ್ಯನು ಕೋಟಿ ಜನ್ಮಗಳಿಂದ ಮಾಡಿದ ಪಾಪವೂ ಕೂಡ, ಕೃಷ್ಣನನ್ನು ಪೂಜಿಸಿ ರಾತ್ರಿಯಲ್ಲಿ ಜಾಗರಣ ಮಾಡಿದರೆ ಅವೆಲ್ಲವೂ ಹೋಗುತ್ತವೆ.

೪೬. ಸಾಲಗ್ರಾಮದ ಶಿಲೆಯ ಎದುರಿಗೆ ಯಾರು ಜಾಗರಣ ಮಾಡುತ್ತಾರೆಯೋ, ಅವರಿಗೆ ಯಾಮ ಯಾಮಕ್ಕೂ ಕೋಟಿ ತೀರ್ಥಗಳಲ್ಲಿ ಸ್ನಾನಮಾಡಿದ ಫಲವು ಬರುತ್ತದೆ.

೪೭. ಏಕಾದಶಿಯ ದಿನ ಯಾರು ಜಾಗರಣೆ ಮಾಡುವುದಿಲ್ಲವೋ ಅವರ ಪುಣ್ಯಗಳೆಲ್ಲವೂ ವೈಷ್ಣವನಿಂದೆ ಮಾಡಿದಂತೆ ನಾಶವಾಗುತ್ತದೆ.

೪೮. ಎಲೈ ನಾರದನೆ! ಕಾಮ, ಅರ್ಥ, ಪುತ್ರರು, ಕೀರ್ತಿ, ಉತ್ತಮ ಲೋಕಗಳು ಇವು ಅನೇಕ ಯಜ್ಞಗಳನ್ನು ಮಾಡಿದರೂ, ದ್ವಾದಶಿಯ ಜಾಗರಣೆ ಇಲ್ಲದಿದ್ದರೆ ಲಭಿಸುವುದಿಲ್ಲ.

ಮತಿರ್ನ ಜಾಯತೇ ಯಸ್ಯ ದ್ವಾದಶ್ಯಾಂ ಜಾಗರಂ ಪ್ರತಿ ।
ನ ಹಿ ತಸ್ಯಾಧಿಕಾರೋಽಸ್ತಿ ಪೂಜನೇ ಕೇಶವಸ್ಯ ಹಿ ॥ ೪೯ ॥

ಯಾವತ್ಪದಾನಿ ಚಲತೇ ಕೇಶವಾಯತನಂ ಪ್ರತಿ ।
ಅಶ್ವಮೇಧಸಮಾನಿ ಸ್ಯುಃ ಜಾಗರಾರ್ಥಂ ಪ್ರಗಚ್ಛತಃ ॥ ೫೦ ॥

ಪಾದಯೋಃ ಪತಿತಂ ಯಾವದ್ಧರಣ್ಯಾಂ ಪಾಂಸು ಗಚ್ಛತಾಂ ।
ತಾವದ್ವರ್ಷಸಹಸ್ರಾಣಿ ಜಾಗರೀ ವಸತೇ ದಿವಿ ॥ ೫೧ ॥

ತಸ್ಮಾದ್ಗೃಹಾತ್ಪರಿತ್ಯಜ್ಯ ಗಸ್ತವ್ಯಂ ಜಾಗರೇ ಕೇಶವಾಲಯಂ ।
ಕಲೌ ಮಲವಿನಾಶಾಯ ದ್ವಾದಶೀದ್ವಾದಶೀಷು ಚ ॥ ೫೨ ॥

ಪರಾಪವಾದಸಂಯುಕ್ತಂ ಮನಃಪ್ರಸಾದವರ್ಜಿತಂ ।
ಶಾಸ್ತ್ರಹೀನಮಗಾಂಧರ್ವಂ ತಥಾ ದೀಪವಿವರ್ಜಿತಂ ॥ ೫೩ ॥

---

೪೯. ಯಾವನಿಗೆ ದ್ವಾದಶಿಯ ದಿನದ ಜಾಗರಣೆಯಲ್ಲಿ ಬುದ್ಧಿ ಹುಟ್ಟುವುದಿಲ್ಲವೋ ಅವನಿಗೆ ಕೇಶವನ ಪೂಜೆಯಲ್ಲಿ ಅಧಿಕಾರವಿರುವುದಿಲ್ಲ.

೫೦. ಜಾಗರಣೆ ಮಾಡುವುದಕ್ಕೋಸ್ಕರ ವಿಷ್ಣುವಿನ ದೇವಸ್ಥಾನವನ್ನು ಕುರಿತು ಎಷ್ಟು ಹೆಜ್ಜೆಗಳನ್ನು ಹೋಗುತ್ತಾನೆಯೋ ಅಷ್ಟು ಹೆಜ್ಜೆಗಳಿಗೂ ಅಷ್ಟು ಅಶ್ವಮೇಧವನ್ನು ಮಾಡಿದ ಪುಣ್ಯಗಳನ್ನು ಪಡೆಯುತ್ತಾನೆ.

೫೧. ಜಾಗರಣೆ ಮಾಡತಕ್ಕವನು ದೇವಸ್ಥಾನಕ್ಕೆ ಜಾಗರಣೆಗೆ ಹೋಗುವಾಗ ಅವನ ಕಾಲಿನಿಂದ ಎಷ್ಟು ಧೂಳು ಮೇಲಕ್ಕೇಳುತ್ತದೆಯೋ ಅಷ್ಟು ಸಾವಿರ ವರ್ಷಗಳು ಸ್ವರ್ಗದಲ್ಲಿ ಸುಖಿಸುತ್ತಾನೆ.

೫೨. ಆದುದರಿಂದ ಜಾಗರಣೆ ಮಾಡುವುದಕ್ಕೋಸ್ಕರ ಮನೆಯನ್ನು ಬಿಟ್ಟು ಈ ಕಲಿಗಾಲದಲ್ಲಿ ಕೇಶವನ ದೇವಸ್ಥಾನಕ್ಕೆ ಪ್ರತಿ ದ್ವಾದಶಿಯಲ್ಲಿಯೂ ಹೋಗಬೇಕು.

೫೩–೫೪. ಜಾಗರಣೆ ಮಾಡುವಾಗ ಪರರನ್ನು ಬಯ್ಯಕೂಡದು. ಸಂತೋಷವಿಲ್ಲದೆ ಇರಕೂಡದು. ಶಾಸ್ತ್ರದ ರೀತಿಯಂತೆ ಇರಬೇಕು. ಗಂಧರ್ವವಿದ್ಯೆಗೆ ವಿರುದ್ಧವಾಗಿರಕೂಡದು. ದೀಪವಿಲ್ಲದೆ ಇರಬಾರದು. ಶಕ್ತಿಯಿದ್ದಷ್ಟು ಉಪಚಾರ

**ಶಕ್ತ್ಯೋಪಚಾರರಹಿತಂ ಉದಾಸೀನಂ ಸನಿಂದನಂ ।**
**ಕಲಿಯುಕ್ತಂ ವಿಶೇಷೇಣ ಜಾಗರಂ ನವಧಾಽಧಮಂ ॥ ೫೪ ॥**

**ಸಶಾಸ್ತ್ರಂ ಜಾಗರಂ ಯಚ್ಚ ನೃತ್ಯಗಂಧರ್ವ ಸಂಯುತಂ ।**
**ಸವಾದ್ಯಂ ತಾಳಸಂಯುಕ್ತಂ ಸದೀಪಂ ಮಧುಭಿರ್ಯುತಂ ॥ ೫೫ ॥**

**ಉಚ್ಚಾರೈಸ್ತು ಸಮಾಯುಕ್ತಂ ಯಥೋಕ್ತೈರ್ಭಕ್ತಿ ಭಾವಿತೈಃ ।**
**ಪ್ರಸನ್ನಂ ಪುಷ್ಟಿಜನಸಂ ಸಮೂಢಂ ಲೋಕರಂಜನಂ ॥ ೫೬ ॥**

**ಗುಣೈರ್ದ್ವಾದಶಭಿರ್ಯುಕ್ತಂ ಜಾಗರಂ ಮಾಧವಪ್ರಿಯಂ ।**
**ಕರ್ತವ್ಯಂ ತತ್ ಪ್ರಯತ್ನೇನ ಪಕ್ಷಯೋಶ್ಶುಕ್ಲಕೃಷ್ಣಯೋಃ ॥ ೫೭ ॥**

**ಕಿಂ ವ್ರತೈರ್ಬಹುಭಿಶ್ಚೀರ್ಣೈಃ ತೀರ್ಥವಾಸೇನ ತಸ್ಯ ಕಿಂ ।**
**ದ್ವಾದಶೀವಾಸರೇ ಪ್ರಾಪ್ತೇ ನ ಕುರ್ಯಾಜ್ಜಾಗರಂ ಹರೇಃ ॥ ೫೮ ॥**

---

ಮಾಡುತ್ತಿರಬೇಕು. ಉದಾಸೀನದಿಂದಿರಕೂಡದು. ದೇವರನ್ನು ನಿಂದಿಸುತ್ತಿರ ಬಾರದು. ಜಗಳವಾಡಬಾರದು. ಹೀಗೆಲ್ಲಾ ಮಾಡಬೇಕು. ಈ ಒಂಭತ್ತು ಬಗೆಯಲ್ಲಿ ಯಾವುದಿದ್ದರೂ ಜಾಗರಣೆಯು ಅಧಮವೆನ್ನಿಸಿಕೊಳ್ಳುತ್ತದೆ. ಈ ಒಂಭತ್ತು ಬಗೆಯಾಗಿ ಜಾಗರಣವು ಅಧಮವೆಂದೆನಿಸಿಕೊಳ್ಳುತ್ತದೆ.

೫೫–೫೭. ಮಾಡತಕ್ಕ ಜಾಗರಣೆಯು ಶಾಸ್ತ್ರಕ್ಕೆ ವಿರೋಧವಾಗಬಾರದು. ಶಾಸ್ತ್ರದ ರೀತಿಯಾದ ಗಾಂಧರ್ವವೂ ನರ್ತನವೂ ಇರಬೇಕು. ವಾದ್ಯವಿರಬೇಕು. ತಾಳವಿರಬೇಕು. ದೀಪವಿರಬೇಕು. ಒಳ್ಳೆಯ ರುಚಿಕರಗಳಾದ ನಿವೇದನದ ಪದಾರ್ಥಗಳಿರಬೇಕು. ಭಜನೆಯಲ್ಲಿ ಸರಿಯಾದ ಉಚ್ಚಾರವಿರಬೇಕು. ಭಕ್ತಿ ಯಿಂದಿರಬೇಕು. ನೋಡುವುದಕ್ಕೆ ಸಂತೋಷವನ್ನುಂಟುಮಾಡುವಂತಿರಬೇಕು. ಹೆಚ್ಚು ಜನರು ಸೇರಿಕೊಂಡಿರಬೇಕು. ಲೋಕಕ್ಕೆ ರಂಜನೆಯಾಗಿರಬೇಕು. ಈ ಈ ಹನ್ನೆರಡು ಗುಣಗಳಿದ್ದರೆ ಆ ಜಾಗರಣೆಯು ಮಾಧವನಿಗೆ ಪ್ರೀತಿಯನ್ನುಂಟು ಮಾಡುತ್ತದೆ. ಈ ಜಾಗರಣೆಯನ್ನು ಶುಕ್ಲ ಕೃಷ್ಣ ಪಕ್ಷಗಳ ದ್ವಾದಶಿಯಲ್ಲಿಯೂ ಮಾಡಬೇಕು.

೫೮. ಯಾವನು ದ್ವಾದಶಿಯ ದಿವಸ ಹರಿಗೋಸ್ಕರ ಜಾಗರಣೆ ಮಾಡುವು ದಿಲ್ಲವೋ, ಅವನು ಎಷ್ಟು ವ್ರತಗಳನ್ನು ಮಾಡಿದರೆ ತಾನೆ ಪ್ರಯೋಜನವೇನು? ಎಷ್ಟು ತೀರ್ಥಗಳಲ್ಲಿ ಮಿಂದರೆ ತಾನೆ ಗುಣವೇನು?

ಪ್ರವಾಸೇ ನ ತ್ಯಜೇದ್ಯಸ್ತು ಪಥಿ ಖಿನ್ನೋಽಪಿ ಬಾಡಬ ।
ಜಾಗರಂ ವಾಸುದೇವಸ್ಯ ದ್ವಾದಶ್ಯಾಂ ತು ಸ ಮೇ ಪ್ರಿಯಃ ॥ ೫೯ ॥

ಮದ್ಭಕ್ತೋ ನ ಹರೇಃ ಕುರ್ಯಾಜ್ಜಾಗರಂ ಪಾಪಮೋಹಿತಂ ।
ವ್ಯರ್ಥಂ ಮತ್ಪೂಜನಂ ತಸ್ಯ ಮತ್ಪೂಜ್ಯಂ ಯೋ ನ ಪೂಜಯೇತ್ ॥೬೦॥

ನ ಶೈವೋ ನ ಚ ಸೌರೋಽಸೌ ನ ಶಾಕ್ತೋ ಗಣಸೇವಕಃ ।
ಯೋ ಭುಂಕ್ತೇ ವಾಸರೇ ವಿಷ್ಣೋಃ ಜ್ಞೇಯಃ ಪಶ್ವಧಿಕೋ ಹಿ ಸಃ ॥೬೧॥

ವಿಪ್ರಿಯಂ ಚ ಕೃತಂ ತೇನ ದುಷ್ಟೇನೈವ ಚ ಪಾಪಿನಾ ।
ಮದ್ಭಕ್ತಿಬಲಮಾಶ್ರಿತ್ಯ ಯೋ ಭುಂಕ್ತೇ ವೈ ಹರೇರ್ದಿನೇ ॥ ೬೨ ॥

ಸಬಾಹ್ಯಾಭ್ಯಂತರಂ ದೇಹಂ ವೇಷ್ಟಿತಂ ಪಾಪಕೋಟಿಭಿಃ ।
ಮುಚ್ಯಂತೇ ವಾಸರೇ ವಿಷ್ಣೋರ್ಯೇ ಕುರ್ವಂತಿ ಪ್ರಜಾಗರಂ ॥ ೬೩ ॥

---

೫೯. ಯಾವನು ದಾರಿ ನಡೆಯುತ್ತಿರುವಾಗ್ಯೆ ಆಯಾಸವಾದರೂ ಕೂಡ, ಈ ದ್ವಾದಶಿಯ ಜಾಗರಣೆಯನ್ನು ಬಿಡುವುದಿಲ್ಲವೋ ಅವನು ನನಗೆ ಪ್ರಿಯನು.

೬೦. ನನ್ನ ಭಕ್ತನಾದವನೂಕೂಡ, ಕೆಟ್ಟ ಅಭಿಪ್ರಾಯದಿಂದ, ಆ ಜಾಗರಣೆಯನ್ನು ಮಾಡದಿದ್ದರೆ, ನನಗೆ ಮಾಡಿದ ಪೂಜೆಯೂ, ವ್ಯರ್ಥವಾಗುತ್ತದೆ. ಆ ಹರಿಯು ನನಗೇ ಪೂಜ್ಯನಾದುದರಿಂದ ಅವನನ್ನೇ ನನ್ನ ಭಕ್ತರೂ ಪೂಜಿಸಬೇಕು.

೬೧. ಯಾವನು ಏಕಾದಶಿ ಉಪವಾಸವನ್ನು ಮಾಡದೆ ಆದಿನ ಊಟ ಮಾಡುತ್ತಾನೆಯೋ ಅವನು ಶಿವಭಕ್ತನೂ ಅಲ್ಲ. ಅವನು ಸೂರ್ಯಭಕ್ತನೂ ಅಲ್ಲ. ಶಕ್ತಿಪ್ರಿಯನೂ ಆಗಲಾರನು. ಗಣಸೇವನೂ (ಗಾಣಪತ್ಯನು) ಆಗಲಾರನು.

೬೨. ನನ್ನಲ್ಲಿಟ್ಟಿರುವ ಭಕ್ತಿಯ ಬಲದಿಂದ, ಯಾವನು ಹರಿವಾಸರದಲ್ಲಿ ಊಟಮಾಡುತ್ತಾನೆಯೋ ಅವನು ನನಗೆ ಕೆಟ್ಟದ್ದನ್ನೇ ಮಾಡಿದ ದುಷ್ಟನೂ, ಪಾಪಿಯೂ, ಆಗುತ್ತಾನೆ.

೬೩. ಹರಿಯವಾಸರದಲ್ಲಿ ಯಾವನು ಜಾಗರಣೆ ಮಾಡುತ್ತಾನೆಯೊ ಅವನು ಆಂತರಿಕವಾದ, ಪಾಪಗಳನ್ನೂ, ಬಾಹ್ಯವಾದ ಪಾಪಗಳನ್ನೂ, ಹೊಂದಿದ್ದರೂ ಅದರಿಂದ ಮುಕ್ತನಾಗುತ್ತಾನೆ.

ಕೂರ್ಪರಂ ಯಮದೂತಾನಾಂ ದಳನಂ ವೈ ಯಮಸ್ಯ ಚ ।
ಕೃತ್ವಾ ಜಾಗರಣಂ ವಿಷ್ಣೋರವಿದ್ಧಂ ದ್ವಾದಶೀವ್ರತಂ || ೬೪ ||

ಸ್ವರ್ಗಪ್ರದಾ ಮುನಿಶ್ರೇಷ್ಠ ಮುಕ್ತಾಸ್ತೇ ನೈವ ಸಂಶಯಃ ।
ವಾಂಛಿತಂ ನರಕಂ ಸೌಖ್ಯಂ ವಿದ್ಧಂ ಕೃತ್ವಾ ಹರೇರ್ದಿನಂ || ೬೫ ||

ನಿಹತಾಃ ಪಿತರಸ್ತೇನ ದೇವಾನಾಂ ವೈ ವಧಃ ಕೃತಃ ।
ದತ್ತಂ ರಾಜ್ಯಂ ತು ದೈತ್ಯಾನಾಂ ಕೃತ್ವಾವಿದ್ಧಂ ಹರೇರ್ದಿನಂ || ೬೬ ||

ಯೋ ನೃತ್ಯತಿ ಪ್ರಹೃಷ್ಟಾತ್ಮಾ ಕೃತ್ವಾ ವೈ ಕರತಾಡನಂ ।
ಗೀತಂ ಕುರ್ವನ್ ಮುಖೇನಾಪಿ ದರ್ಶಯನ್ಕೌತುಕಾನ್ಬಹೂನ್ || ೬೭ ||

ಪುರತೋ ವಾಸುದೇವಸ್ಯ ರಾತ್ರೌ ಜಾಗರಣಸ್ಥಿತಿಃ ।
ಪಠನ್ ಕೃಷ್ಣಚರಿತ್ರಾಣಿ ರಂಜಯನ್ ವೈಷ್ಣವಾನ್ ಗಣಾನ್ || ೬೮ ||

---

೬೪. ಆ ವೇಧೆಯನ್ನು ಹೊಂದದಿರುವ ಏಕಾದಶಿ ದಿವಸ ಉಪವಾಸಮಾಡಿ ದ್ವಾದಶಿಯಲ್ಲಿ ಜಾಗರಣೆಮಾಡಿದರೆ ಆ ವ್ರತವು ಯಮದೂತರಿಗೆ ಕ್ರೂರವಾದ ಶಿಕ್ಷೆಯು, ಯಮನನ್ನು ಸೀಳತಕ್ಕದ್ದು. ಇಂತಹ ಮಹಿಮೆಯನ್ನು ಹೊಂದಿರುವುದು.

೬೫. ಯಾರು ಈ ದ್ವಾದಶೀವ್ರತವನ್ನು, ಬಿಡದೆ ಮಾಡುತ್ತಾರೆಯೋ ಅವರು ಸ್ವರ್ಗವನ್ನು ಹೊಂದುತ್ತಾರೆ. ಇದರಲ್ಲಿ ಸಂಶಯವಿಲ್ಲ. ಹಾಗೆ ಜಾಗರಣಾದಿಗಳನ್ನು ಮಾಡದೆ ಸುಖಕ್ಕೆ ಮನಸೋತರೆ ನರಕವನ್ನು ಹೊಂದುತ್ತಾರೆ.

೬೬. ಹರಿಯ ದಿನದಲ್ಲಿ ಜಾಗರಣಾದಿಗಳನ್ನು ಮಾಡದಿದ್ದರೆ ಅವನು ಅವನ ಪಿತೃಗಳನ್ನೇ ಕೊಂದಂತೆ ಆಗುತ್ತದೆ. ದೇವತೆಗಳನ್ನೇ ವಧಿಸಿದಂತೆ ಆಗುತ್ತದೆ. ದೈತ್ಯರಿಗೆ ರಾಜ್ಯವನ್ನು ಕೊಡುತ್ತಾನೆ.

೬೭. ಯಾವನು ಚಪ್ಪಾಳೆ ಬಡಿದುಕೊಂಡು ಸಂತೋಷದಿಂದ ಹಾಡನ್ನು ಹೇಳಿಕೊಂಡು ಕುಣಿಯುತ್ತಾ ಅನೇಕ ವಿಧವಾದ ಆಶ್ಚರ್ಯಗಳನ್ನು ತೋರಿಸುತ್ತಾನೆಯೊ ? ಅವನು ಉತ್ತಮಲೋಕಗಳನ್ನು ಹೊಂದುತ್ತಾನೆ.

೬೮. ರಾತ್ರಿಯಲ್ಲಿ ವಾಸುದೇವನ ಮುಂದೆ ಜಾಗರಣೆಮಾಡುತ್ತಾ ಕೃಷ್ಣನ ಚರಿತ್ರೆಗಳನ್ನು ಹೇಳುತ್ತಾ ವೈಷ್ಣವರನ್ನು ಸಂತೋಷಪಡಿಸುವವನು ವೈಕುಂಠವನ್ನು ಹೊಂದುತ್ತಾನೆ.

ಮುಖೇನ ಕುರುತೇ ವಾದ್ಯಂ ಸಂಪ್ರಹೃಷ್ಟತನೂರುಹಃ ।
ದರ್ಶಯನ್ ವಿವಿಧಾನ್ನೃತ್ಯಾನ್ ಸ್ವೇಚ್ಛಾಲಾಪಾನ್ ಪ್ರಕಾರಯನ್ ॥ ೬೯ ॥

ಭಾವೈರೇತೈರ್ಗತೋ ಯಸ್ತು ಕುರುತೇ ಜಾಗರಂ ಹರೇಃ ।
ನಿಮಿಷೇ ನೈಮಿಷಂ ಪುಣ್ಯಂ ತೀರ್ಥಕೋಟಿಫಲಂ ಸ್ಮೃತಂ ॥ ೭೦ ॥

ಅನುದ್ವಿಗ್ನಮನಾ ಯಸ್ತು ಧೂಪಂ ನೀರಾಜನಂ ಹರೇಃ ।
ಕುರುತೇ ಜಾಗರಂ ರಾತ್ರೌ ಸಪ್ತದ್ವಿಪಾಧಿಪೋ ಭವೇತ್ ॥ ೭೧ ॥

ಯಾನಿ ಕಾನಿ ಚ ಪಾಪಾನಿ ಬ್ರಹ್ಮಹತ್ಯಾಸಮಾನಿ ಚ ।
ಕೃಷ್ಣಸ್ಯ ಜಾಗರೇ ತಾನಿ ವಿಲಯಂ ಯಾಂತಿ ಖಂಡಶಃ ॥ ೭೨ ॥

ಏಕತಃ ಕ್ರತವಸ್ಸರ್ವೇ ಸಮಾಪ್ತವರದಕ್ಷಿಣಾಃ ।
ಏಕತೋ ದೇವದೇವಸ್ಯ ಜಾಗರಂ ಕೃಷ್ಣವಲ್ಲಭಂ ॥ ೭೩ ॥

---

೬೯. ಯಾವನು ಸಂತೋಷದಿಂದ ಮುಖದಿಂದ ವಾದ್ಯದ ಧ್ವನಿಯನ್ನು ಮಾಡುತ್ತಾ, ನಾನಾಬಗೆಯಾದ ನರ್ತನಗಳನ್ನು ತೋರಿಸುತ್ತಾ, ಸಂತೋಷಕರವಾದ ವಿಷ್ಣುಸಂಬಂಧಿಯಾದ ಮಾತುಗಳನ್ನು ಆಡುತ್ತಾನೆಯೊ ಅವನು ಕೋಟಿತೀರ್ಥಗಳ ಪುಣ್ಯವನ್ನು ಹೊಂದುತ್ತಾನೆ.

೭೦. ಈ ರೀತಿಯಾದ ಅನುಕರಣಗಳಿಂದ, ಯಾವನು ಜಾಗರಣೆ ಮಾಡುತ್ತಾನೆಯೊ ಅವನಿಗೆ ಒಂದು ನಿಮಿಷಕ್ಕೆ ನೈಮಿಷಕ್ಷೇತ್ರದ ಪುಣ್ಯವು ಬರುತ್ತದೆ. ಪೂರ್ತಿಯಾಗಿ ಮಾಡಿದರೆ ಕೋಟಿತೀರ್ಥಗಳ ಫಲವು ಬರುತ್ತದೆ.

೭೧. ಯಾವನು ಸಂತೋಷದ ಮನಸ್ಸಿನಿಂದ ಜಾಗರಣೆ ಮಾಡುತ್ತಾ, ಹರಿಗೆ ಧೂಪ, ದೀಪಗಳನ್ನು ಬೆಳಗುತ್ತಾನೆಯೊ ಅವನು ಸಪ್ತ (ಏಳು) ದ್ವೀಪಗಳಿಗೂ, ಅಧಿಪತಿಯಾಗುತ್ತಾನೆ.

೭೨. ಕೃಷ್ಣನ ದ್ವಾದಶಿಯಲ್ಲಿ ಬ್ರಹ್ಮಹತ್ಯೆಗೆ ಸಮಾನವಾದ ಯಾವ ಯಾವ ಪಾಪಗಳಿವೆಯೋ ಅವೆಲ್ಲವೂ ಕೂಡ ಚೂರುಚೂರಾಗಿ ನಾಶವಾಗುತ್ತವೆ.

೭೩. ಪೂರ್ತಿಯಾದ ಸರಿಯಾದ ದಕ್ಷಿಣೆಗಳನ್ನು ಕೊಟ್ಟು ಮಾಡಿರುವ ಯಾಗಗಳೆಲ್ಲವನ್ನೂ ಒಂದುಕಡೆಯೂ, ಮತ್ತೊಂದುಕಡೆ ದೇವದೇವನಾದ ಕೃಷ್ಣನ ಜಾಗರಣೆಯನ್ನೂ ಇಟ್ಟರೆ ಎರಡೂ ಒಂದೇ ಸಮವಾಗುತ್ತವೆ.

ತತ್ರ ಕಾಶೀ ಪುಷ್ಕರಂ ಚ ಪ್ರಯಾಗಂ ನೈಮಿಷಂ ಗಯಾ ।
ಶಾಲಗ್ರಾಮಮಹಾಕ್ಷೇತ್ರಮರ್ಬುದಾರಣ್ಯಮೇವ ಚ || ೭೪ ||

ಶೌಕರಂ ಮಥುರಾ ತತ್ರ ಸರ್ವತೀರ್ಥಾನಿ ಚೈವ ಹಿ ।
ಯಜ್ಞಾ ವೇದಾಶ್ಚ ಚತ್ವಾರೋ ವ್ರಜಂತಿ ಹರಿಜಾಗರಂ || ೭೫ ||

ಗಂಗಾ ಸರಸ್ವತೀ ತಾಪೀ ಯಮುನಾ ಚ ಶತದ್ರುಕಾ ।
ಚಂದ್ರಭಾಗಾ ವಿತಸ್ತಾ ಚ ನದ್ಯಸ್ಸರಾಸ್ತು ತತ್ರ ಹಿ || ೭೬ ||

ಸರಾಂಸಿ ಚ ಹ್ರದಾಸ್ಸರ್ವೇ ಸಮುದ್ರಾಸ್ಸರ್ವ ಏವ ಹಿ ।
ಏಕಾದಶ್ಯಾಂ ದ್ವಿಜಶ್ರೇಷ್ಠ ಗಚ್ಛನ್ತಿ ಕೃಷ್ಣಜಾಗರಂ || ೭೭ ||

ಸ್ಪೃಹಣೀಯಾ ಹಿ ದೇವಾನಾಂ ಯೇ ನರಾಃ ಕೃಷ್ಣಜಾಗರೇ ।
ನೃತ್ಯಂತಿ ಗೀತಂ ಕುರ್ವಂತಿ ವೀಣಾವಾದ್ಯಪ್ರಹರ್ಷಿತಾಃ || ೭೮ ||

---

೭೪-೭೫, ಕಾಶಿ, ಪುಷ್ಕರ, ಪ್ರಯಾಗ, ನೈಮಿಷ, ಗಯಾ, ಸಾಲಿಗ್ರಾಮ ಕ್ಷೇತ್ರ, ಅರ್ಬುದಾರಣ್ಯ, ಸೌಕರ, ಮಥುರೆ, ಮುಂತಾದ ಎಲ್ಲಾ ತೀರ್ಥಗಳೂ, ಯಜ್ಞಗಳೂ, ವೇದಗಳೂ ಕೂಡ ಹರಿಯ ಜಾಗರಣೆಯನ್ನು ಮಾಡುತ್ತವೆ.

೭೬. ಗಂಗೆ, ಸರಸ್ವತಿ, ತಪತಿ, ಯಮುನೆ, ಶತದ್ರು, ಚಂದ್ರಭಾಗೆ, ವಿತಸ್ತಾ, ಮುಂತಾದ ಎಲ್ಲಾನದಿಗಳೂ, ಮಾಧವನ ಜಾಗರಣೆಗೆ ಹೋಗಿ ಸೇರುತ್ತವೆ.

೭೭. ಸರಸ್ಸುಗಳು, ಹ್ರದಗಳು, ಸಮುದ್ರಗಳು, ಇವು ಎಲ್ಲವೂ ಕೂಡ ಏಕಾದಶಿಯ ದಿವಸ ಕೃಷ್ಣನ ಜಾಗರಣೆಗೆ ಹೋಗುತ್ತವೆ.

೭೮. ಯಾರು ಶ್ರೀಕೃಷ್ಣನ ದಿನದಲ್ಲಿ ಜಾಗರಣೆ ಮಾಡುತ್ತಾ, ನೃತ್ಯಗೀತ ಗಳನ್ನು ಮಾಡುತ್ತಾ, ವೀಣಾವಾದನ ಮುಂತಾದುವನ್ನೂ ಮಾಡುತ್ತಾರೆಯೋ ಅವರು ದೇವತೆಗಳಿಗೆ ಬೇಕಾದವರಾಗುತ್ತಾರೆ.

ಏವಂ ಜಾಗರಣಂ ಕೃತ್ವಾ ಸಂಪೂಜ್ಯ ಚ ಮಹಾಹರಿಂ ।
ದ್ವಾದಶ್ಯಾಂ ಪಾರಣಂ ಕಾರ್ಯಂ ಸ್ವಶಕ್ತ್ಯಾ ವೈಷ್ಣವೈಸ್ಸಹ ॥ ೭೯ ॥

॥ ಶಿವ ಉವಾಚ ॥

ಶೃಣು ಬ್ರಹ್ಮರ್ಷೇ ಪ್ರವಕ್ಷ್ಯಾಮಿ ದ್ವಾದಶೀಮಾಹಾತ್ಮ್ಯಮುತ್ತಮಂ ।
ದ್ವಾದಶೀ ತು ಸದಾ ಜ್ಞೇಯಾ ಪವಿತ್ರಾ ಮೋಕ್ಷದಾಯಿನೀ ॥ ೮೦ ॥

ಪ್ರಾತಸ್ಸ್ನಾತ್ವಾ ಹರಿಂ ಪೂಜ್ಯ ಉಪವಾಸಂ ಸಮರ್ಪಯೇತ್ ।
ಅಜ್ಞಾನತಿಮಿರಾಂಧಸ್ಯ ವ್ರತೇನಾನೇನ ಕೇಶವ ॥ ೮೧ ॥

ಪ್ರಸೀದ ಸುಮುಖೋ ಭೂತ್ವಾ ಜ್ಞಾನದೃಷ್ಟಿಪ್ರದೋ ಭವ ।
ಪಾರಣಂ ತು ತತಃ ಕುರ್ಯಾತ್ ಯಥಾಸಂಭವಮಗ್ರತಃ ॥ ೮೨ ॥

ಅತ ಊರ್ಧ್ವಂ ಯಥೇಷ್ಟಂ ತು ಕಾರಯೇಚ್ಚ ಯಥಾವಿಧಿ ।
ಯದಾ ತು ದ್ವಾದಶೀ ಸ್ವಲ್ಪಾ ಪಾರಣೇ ನ ಭವೇದ್ದ್ವಿಜ ॥ ೮೩ ॥

---

೭೯. ಈರೀತಿಯಾಗಿ ಜಾಗರಣೆಮಾಡಿ ದ್ವಾದಶಿಯಲ್ಲಿ ಹರಿಯನ್ನು ಪೂಜೆ ಮಾಡಿ ತಮ್ಮ ಶಕ್ತಿಗನುಗುಣವಾಗಿ ವೈಷ್ಣವರೊಡನೆ ಪಾರಣೆಯನ್ನು ಮಾಡಬೇಕು.

೮೦. ಶಿವನು ಹೇಳಿದನು–ಎಲೈ ನಾರದನೆ! ಹೇಳುತ್ತೇನೆ, ಕೇಳು. ದ್ವಾದಶಿಯು ಬಹು ಮಹಿಮೆಯುಳ್ಳದು. ದ್ವಾದಶಿಯು ಉತ್ತಮವು, ಪವಿತ್ರವು, ಮೋಕ್ಷವನ್ನು ಕೊಡತಕ್ಕದು ಎಂದು ಯಾವಾಗಲೂ ತಿಳಿ.

೮೧-೮೨. ದ್ವಾದಶಿಯದಿನ ಬೆಳಗ್ಗೆ ಸ್ನಾನಮಾಡಿ ಹರಿಯನ್ನು ಪೂಜಿಸಿ ತಾನು ಮಾಡಿದ ಉಪವಾಸವನ್ನು ಆ ಹರಿಗೆ ಅರ್ಪಿಸಬೇಕು. ಎಲೈ ಕೇಶವನೆ! ಅಜ್ಞಾನವೆಂಬ ಕತ್ತಲೆಯಿಂದ ಕಣ್ಣು ಕಾಣಿಸದವನಾಗಿದ್ದೇನೆ. ನೀನು ಈ ವ್ರತದಿಂದ ಪ್ರಸನ್ನನಾಗಿ ನನಗೆ ಜ್ಞಾನದೃಷ್ಟಿಯನ್ನು ಕೊಡು ಎಂದು ಕೇಳಿಕೊಳ್ಳಬೇಕು. ಆಮೇಲೆ ಆ ಸ್ವಾಮಿಯ ಎದುರಿಗೆ ಪಾರಣೆಯನ್ನು ಮಾಡಬೇಕು.

೮೩-೮೪. ಪಾರಣೆಯಾದಮೇಲೆ ಭೃತ್ಯಾದಿಗಳಿಗೆ ಬೇಕಾದಂತೆ ಅನ್ನ ಹಾಕಬಹುದು. ಆದಿನ ದ್ವಾದಶಿಯು ಸ್ವಲ್ಪವೇ ಇದ್ದು ಪಾರಣೆಗೆ ಅದಿಲ್ಲದಿದ್ದರೆ ಆ ಸಂದರ್ಭದಲ್ಲಿ, ದ್ವಾದಶಿಯಿರುವ ರಾತ್ರಿಯಲ್ಲಿಯೇ ಪಾರಣೆಯನ್ನು

ತದಾ ರಾತ್ರೌ ತು ಕರ್ತವ್ಯಂ ಪಾರಣಂ ಮುಕ್ತಿಮಿಚ್ಛತಾ ।
ತದಾ ನ ರಾತ್ರಿ ದೋಷಸ್ಸ್ಯಾತ್ ನಿಷಿದ್ಧಂ ನ ಭವೇತ್ಕ್ವಚಿತ್ ॥ ೮೪ ॥

ಯದುಕ್ತಂ ನಿಶಿ ನ ಸ್ನಾಯಾತ್ ಮಹಾನಿಶಿ ತು ವರ್ಜಯೇತ್ ।
ತತ್ಪೂರ್ವಾಪರಯಾಮಾಭ್ಯಾಂ ದಿನವತ್ಕರ್ಮ ಕಾರಯೇತ್ ॥ ೮೫ ॥

ಯದಾ ಭವತಿ ಸ್ವಲ್ಪಾ ತು ದ್ವಾದಶೀ ಪಾರಣೇ ದಿನೇ ।
ಉಷಃ ಕಾಲೇ ದ್ವಯಂ ಕುರ್ಯಾತ್ ಪ್ರಾತರ್ಮಾಧ್ಯಾಹ್ನಿಕಂ ತದಾ ॥ ೮೬ ॥

ದ್ವಾದಶೀ ಸಾಧಿತಾ ಯೇನ ನರೇಣ ಭುವಿ ಸರ್ವದಾ ।
ತಸ್ಯ ಫಲಂ ಹಿ ವೈ ವಕ್ತುಂ ನ ಸಮರ್ಥೋಽಸ್ಮಿ ವೈ ದ್ವಿಜ ॥ ೮೭ ॥

ಸರ್ವಪುಣ್ಯಾಧಿಕಾ ದೇವೀ ಮುಕ್ತಿದಾ ಚ ಸದಾ ಭವೇತ್ ।
ಏತದ್ವ್ರತಂ ಮಹಾಪುಣ್ಯಂ ದ್ವಾದಶಾಖ್ಯಂ ವಿಶೇಷತಃ ॥ ೮೮ ॥

---

ಮಾಡಬೇಕು. ಹಾಗೆ ಮಾಡಿದರೇನೆ, ಮುಕ್ತಿ ಬರುವುದು. ಹಾಗೆ ಮಾಡಿದರೆ, ಪಾರಣೆಗೆ ರಾತ್ರಿ ದೋಷವಿರುವುದಿಲ್ಲ. ಅದು ಎಲ್ಲಿಯೂ ನಿಷಿದ್ಧವಾಗುವುದಿಲ್ಲ.

೮೫. ರಾತ್ರಿಯಲ್ಲಿ ಸ್ನಾನಮಾಡಕೂಡದೆಂಬ, ನಿಷೇಧವು ಮಧ್ಯರಾತ್ರಿಗೆ, ಸಂಬಂಧಪಟ್ಟದ್ದು. ಮಧ್ಯರಾತ್ರಿ (ಮಹಾನಿಶಿ) ಯಲ್ಲಿ, ಸ್ನಾನಮಾಡಬಾರದು. ಅದರ ಹಿಂದಿನ ಮತ್ತು ಮುಂದಿನ ಯಾಮಗಳಲ್ಲಿ, ಹಗಲಿನಂತೆ ಎಲ್ಲಾ ಕೆಲಸಗಳನ್ನೂ ಮಾಡಬಹುದು.

೮೬. ಪಾರಣೆಯ ದಿನದಲ್ಲಿ, ದ್ವಾದಶಿಯು ಸ್ವಲ್ಪವೇ ಇದ್ದರೆ, ಉಷಃಕಾಲ (ಬೆಳಗ್ಗೆ) ದಲ್ಲಿ, ಬೆಳಗಿನ ಮತ್ತು ಮಧ್ಯಾಹ್ನದ, ಕೆಲಸಗಳನ್ನು ಮಾಡಬಹುದು.

೮೭. ಯಾವನು ದ್ವಾದಶಿಪಾರಾಣೆಯನ್ನು, ಯಾವಾಗಲೂ ಸಾಧಿಸುವನೋ ಅವನಿಗೆ ಬರುವ ಫಲವನ್ನು, ಹೇಳುವುದಕ್ಕೆ ನನಗೆ ಶಕ್ತಿಯೇ ಇಲ್ಲವು.

೮೮. ಈ ದ್ವಾದಶಿದೇವಿಯು, ಎಲ್ಲಾ ಪುಣ್ಯಕ್ಕಿಂತಲೂ, ಅಧಿಕವಾದ ಪುಣ್ಯವುಳ್ಳದ್ದು. ಯಾವಾಗಲೂ ಮುಕ್ತಿಯನ್ನು ಕೊಡುತ್ತದೆ. ಈ ದ್ವಾದಶಿಯೆಂಬ ವ್ರತವು, ಮಹಾಪುಣ್ಯಕರವಾದುದು.

ಸಾಧಿತಾರ್ ಸಕಲಾರ್ ಕಾಮಾರ್ ಪ್ರಾಪ್ನುಯುಶ್ಚ ಮಹಾಜನಾಃ ।
ಅಂಬರೀಷಾದಯಸ್ಸರ್ವೇ ಯೇ ಭಕ್ತಾ ಭುವಿ ವಿಶ್ರುತಾಃ ॥ ೮೯ ॥

ದ್ವಾದಶೀಂ ಸಾಧಯಿತ್ವಾ ತು ತೇ ಗತಾ ವಿಷ್ಣುಸದ್ಮನಿ ।
ಸತ್ಯಂ ಸತ್ಯಂ ಪುನಃ ಸತ್ಯಂ ಯದುಕ್ತಂ ತು ಮಯಾ ತವ ॥ ೯೦ ॥

ನಾಸ್ತಿ ವಿಷ್ಣುಸಮೋ ದೇವೋ ನ ತಿಥಿರ್ದ್ವಾದಶೀ ಸಮಾ ।
ಅತ್ರ ದತ್ತಂ ಚ ಭುಕ್ತಂ ಚ ತಥಾ ಪೂಜಾದಿಕಂ ಚ ಯತ್ ॥ ೯೧ ॥

ತತ್ಸರ್ವಂ ಪೂರ್ಣತಾಂ ಯಾತಿ ಪೂಜಿತೇ ಮಾಧವೇ ಸತಿ ।
ಕಿಂ ಪುನರ್ಬಹುನೋಕ್ತೇನ ಭಕ್ತಾನಾಂ ವಲ್ಲಭೋ ಹರಿಃ ॥ ೯೨ ॥

ಸ ದದಾತ್ಯಖಿಲಾನ್ಕಾಮಾನ್ಯಾವದಾಭೂತಸಂಪ್ಲವಂ ।
ದ್ವಾದಶ್ಯಾಂ ಚೈವ ಯದ್ದತ್ತಂ ತತ್ಸರ್ವಂ ಸಫಲಂ ಭವೇತ್ ॥ ೯೩ ॥

---

೮೯-೯೦. ಈ ದ್ವಾದಶಿಯನ್ನು, ಸಾಧಿಸಿದರೆ, ತನಗೆ ಬೇಕಾದ ಎಲ್ಲಾ ಇಷ್ಟಾರ್ಥಗಳೂ, ಕೈಗೂಡುತ್ತವೆ. ಅಂಬರೀಷನೇ ಮುಂತಾದ ಭಕ್ತರೆಲ್ಲರೂ, ಈ ಲೋಕದಲ್ಲಿ ದ್ವಾದಶೀವ್ರತವನ್ನು ಸಾಧಿಸಿ, ವೈಕುಂಠಕ್ಕೆ ಹೋದರು. ಇದು ಸತ್ಯವು. ನಾನು ನಿನಗೆ ಹೇಳಿದುದು ಸ್ವಲ್ಪವೂ ಸುಳ್ಳಲ್ಲ. ನಿಶ್ಚಯವಾಗಿ ಸತ್ಯವು.

೯೧-೯೨. ಲೋಕದಲ್ಲಿ, ವಿಷ್ಣುವಿಗೆ ಸಮವಾದ ದೇವರಿಲ್ಲ. ದ್ವಾವಶಿಗೆ ಸಮವಾದ ತಿಥಿಯಿಲ್ಲ. ಈ ದ್ವಾದಶಿಯಲ್ಲಿ, ಮಾಡಿದ ದಾನ, ಊಟಮಾಡಿಸಿದುದು, ಅಂತೆಯೇ ಪೂಜೆ ಮುಂತಾದುವು, ಮಾಧವನನ್ನು ಪೂಜಿಸುವುದು, ಎಲ್ಲವೂ ಸಂಪೂರ್ಣ ಫಲದಾಯಕವಾಗುತ್ತವೆ. ಬಹಳ ಮಾತಿನಿಂದೇನು? ಹರಿಯು ಭಕ್ತರಿಗೆ ಪ್ರೀತಿಪಾತ್ರನು.

೯೩. ಆ ಹರಿಯು ಚರಾಚರಗಳಿರುವವರೆಗೂ, ಬೇಕಾದ ಇಷ್ಟಾರ್ಥಗಳನ್ನು ಕೊಡುತ್ತಾನೆ. ದ್ವಾದಶಿಯದಿನ ನಾವು ಮಾಡಿದ, ಪುಣ್ಯಕೆಲಸಗಳೆಲ್ಲವೂ, ಸಫಲವಾಗುತ್ತವೆ.

**ಕುರುಕ್ಷೇತ್ರೇಷು ಯದ್ದತ್ತಂ ನಿಷ್ಫಲಂ ನೈವ ಜಾಯತೇ ।**
**ತದ್ವಚ್ಚ ದ್ವಾದಶೀದತ್ತಂ ಭವೇದ್ದೇವರ್ಷಿಸತ್ತಮ　　　　|| ೯೪ ||**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಪತಿ ನಾರದ ಸಂವಾದೇ ದ್ವಾದಶ್ಯೇಕಾದಶೀಜಾಗರಣ ಮಹಿಮವರ್ಣನಂ ನಾಮ ಏಕೋನಚತ್ವಾರಿಂಶೋಽಧ್ಯಾಯಸ್ಸಮಾಪ್ತಃ**

---

೯೪. ಕುರುಕ್ಷೇತ್ರದಲ್ಲಿ, ಮಾಡಿದ ಧರ್ಮಗಳು, ಫಲವನ್ನು ಕೊಡದೆ ಇರು ವುದೇ ಇಲ್ಲ. ಅದರಂತೆ ದ್ವಾದಶಿಯದಿನ, ಮಾಡಿದ ದಾನಾದಿಗಳು. ಸಫಲವೇ ಆಗುತ್ತವೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಪತಿ ನಾರದರ ಸಂವಾದದಲ್ಲಿ ದ್ವಾದಶೀ ಏಕಾದಶಿ ಜಾಗರಣಗಳ ಮಹಿಮೆ ಎಂಬ ಹೆಸರಿನ ಮೂವತ್ತೊಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-x-

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಚತ್ವಾರಿಂಶೋಽಧ್ಯಾಯಃ ॥



॥ ಶಿವ ಉವಾಚ ॥

ಏತಸ್ಮಿನ್ ಸಮಯೇ ಪುತ್ರ ಗತೋಽಹಂ ವಿಷ್ಣುಸನ್ನಿಧೌ ।
ತತ್ರ ಪೃಷ್ಟಂ ಮಯಾ ಪೂರ್ವಂ ಮಾಹಾತ್ಮ್ಯಂ ದ್ವಾದಶೀಭವಂ
ಯಚ್ಛ್ರುತ್ವಾ ಮುನಯಸ್ಸರ್ವೇ ಭುಕ್ತ್ವಾ ಭೋಗಾನ್ದಿವಂ ಯಯುಃ॥೧॥

॥ ನಾರದ ಉವಾಚ ॥

ಕೀದೃಶೀ ಸ್ಯಾನ್ಮಹಾದೇವ ಮಹಾದ್ವಾದಶಿಕಾ ಪರಾ ।
ತಸ್ಯಾ ಕೃತೇ ಫಲಂ ಕಿಂಚಿದ್ವದ ಸರ್ವೇಶ್ವರ ಪ್ರಭೋ ॥ ೨ ॥

---

## ನಲವತ್ತನೆಯ ಅಧ್ಯಾಯವು



೧. ಶಿವನು ಹೇಳಿದನು–ಎಲೈ ನಾರದನೆ! ಒಂದುಸಾರಿ ವಿಷ್ಣುವಿನ ಬಳಿಗೆ ಹೋಗಿದ್ದೆನು. ಅಲ್ಲಿ ನಾನು ದ್ವಾದಶಿಯ ಸಂಬಂಧವಾದ ಮಹಿಮೆಯನ್ನು ಕೇಳಿದೆನು. ಅದನ್ನು ಕೇಳಿದ ಮುನಿಗಳೆಲ್ಲರೂ ಅನೇಕವಾದ ಭೋಗಗಳನ್ನು ಅನುಭವಿಸಿ ಸ್ವರ್ಗವನ್ನು ಹೊಂದಿದರು.

೨. ನಾರದನು ಹೇಳಿದನು– ಎಲೈ ಮಹಾದೇವನೆ! ಮಹಾದ್ವಾದಶಿ ಎಂಬುದು ಯಾವರೀತಿಯಾದುದು? ಅದನ್ನು ಮಾಡಿದರೆ ಯಾವ ಫಲವು ಬರುತ್ತದೆ? ಎಂಬುದನ್ನು ಸ್ವಲ್ಪ ಹೇಳು.

|| ವಿಶ್ವೇಶ್ವರ ಉವಾಚ ||

ಇಯಮೇಕಾದಶೀ ಬ್ರಹ್ಮನ್ ಮಹಾಪುಣ್ಯಫಲಪ್ರದಾ ।
ಋಕ್ಷಯೋಗೈಶ್ಚ ಸಂಯುಕ್ತಾ ಕರ್ತವ್ಯಾ ಮುನಿಸತ್ತಮೈಃ || ೩ ||

ಜಯಾ ಚ ವಿಜಯಾ ಚೈವ ಜಯಂತೀ ಪಾಪನಾಶಿನೀ ।
ಸರ್ವಪಾಪಹರಾಶ್ಚೈತಾಃ ಕರ್ತವ್ಯಾಃ ಫಲಕಾಂಕ್ಷಿಭಿಃ || ೪ ||

ಏಕಾದಶ್ಯಾಂ ಯದಾ ಋಕ್ಷಂ ಶುಕ್ಲಪಕ್ಷೇ ಪುನರ್ವಸೂ ।
ನಾಮ್ನಾ ಸಾ ಚ ಜಯಾಖ್ಯಾತಾ ತಿಥೀನಾಮುತ್ತಮಾ ತಿಥಿಃ || ೫ ||

ತಾಮುಪೋಷ್ಯ ನರಃ ಪಾಪಾನ್ಮುಚ್ಯತೇ ನಾತ್ರ ಸಂಶಯಃ ।
ಯದಾ ಚ ಶುಕ್ಲದ್ವಾದಶ್ಯಾಂ ನಕ್ಷತ್ರಂ ಶ್ರವಣೋ ಭವೇತ್ || ೬ ||

ವಿಜಯಾ ಸಾ ಸಮಾಖ್ಯಾತಾ ತೀಥೀನಾಮುತ್ತಮಾ ತಿಥಿಃ ।
ಸಹಸ್ರ ಗುಣಿತಂ ದಾನಂ ತಥಾ ವೈ ವಿಪ್ರಭೋಜನಂ || ೭ ||

---

೩. ಶಿವನು ಹೇಳಿದನು—ಎಲೈ ನಾರದನೆ! ಈ ಏಕಾದಶಿಯು ಬಹು ಫಲವನ್ನು ಕೊಡತಕ್ಕದ್ದು. ಅದರಲ್ಲಿ ನಕ್ಷತ್ರಗಳು ಸೇರಿದ ಹಾಗೆಲ್ಲಾ ಫಲವನ್ನು ಮತ್ತೆ ಮತ್ತೆ ಹೆಚ್ಚಾಗಿ ಕೊಡುತ್ತವೆ. ಅದೆಲ್ಲವನ್ನೂ ಮುನಿಗಳೂ ಕೂಡ ಮಾಡಬೇಕು.

೪. ಈ ಏಕಾದಶಿಯು ಜಯ, ವಿಜಯ, ಜಯಂತಿ, ಪಾಪನಾಶಿನಿ ಎಂದು ನಾಲ್ಕು ಬಗೆ. ಇವೆಲ್ಲವೂ ಪಾಪನಾಶಕವಾದುವು. ಆದುದರಿಂದ ಎಲ್ಲಾ ಪಾಪಗಳನ್ನೂ ನಾಶಮಾಡುವ ಇವನ್ನೂ ಫಲಾಪೇಕ್ಷಿಗಳು ಮಾಡಬೇಕು.

೫. ಶುಕ್ಲಪಕ್ಷದ ಏಕಾದಶಿಯ ದಿನ ಪುನರ್ವಸು ನಕ್ಷತ್ರವು ಬಂದಿದ್ದರೆ ಆ ಏಕಾದಶಿಗೆ "ಜಯ" ಎಂದು ಹೆಸರು. ಆ ತಿಥಿಯು ಎಲ್ಲಾ ತೀರ್ಥಗಳಿಗಿಂತಲೂ ಉತ್ತಮ.

೬–೭. ಆ ಜಯೆಯಲ್ಲಿ ಉಪವಾಸ ಮಾಡಿದರೆ, ಮನುಷ್ಯನ ಪಾಪವೆಲ್ಲವೂ ಬಿಡುಗಡೆಯಾಗುತ್ತವೆ. ಶುಕ್ಲಪಕ್ಷದ ದ್ವಾದಶಿಯ ದಿನ ಶ್ರವಣ ನಕ್ಷತ್ರವು ಬಂದರೆ ಆ ತಿಥಿಯು "ವಿಜಯ" ಎಂದೆನ್ನಿಸಿಕೊಳ್ಳುತ್ತದೆ. ಅದು ಎಲ್ಲಾ ತಿಥಿಗಳಿಗಿಂತಲೂ ಉತ್ತಮವಾದ ತಿಥಿಯು. ಅದರಲ್ಲಿ ದಾನಮಾಡಿದರೆ ಸಾವಿರ ಪಾಲಿನಷ್ಟು ಫಲವು ಹೆಚ್ಚುತ್ತದೆ. ಅದರಲ್ಲಿ ಬ್ರಾಹ್ಮಣ ಭೋಜನ ಮಾಡಿಸಿದರೂ ಸಾವಿರದಷ್ಟು ಹೆಚ್ಚು ಫಲವನ್ನು ಕೊಡುತ್ತದೆ.

ಹೋಮಸ್ತಥೋಪವಾಸಶ್ಚ ಸಹಸ್ರಾಧಿಕಫಲಪ್ರದಃ ।
ಯಥಾ ಚ ಶುಕ್ಲದ್ವಾದಶ್ಯಾಂ ಪ್ರಾಜಾಪತ್ಯಂ ಹಿ ಜಾಯತೇ ॥ ೮ ॥

ಜಯಂತೀ ನಾಮ ಸಾ ಪ್ರೋಕ್ತಾ ಸರ್ವಪಾಪಹರಾ ತಿಥಿಃ ।
ಸಪ್ತಜನ್ಮಕೃತಂ ಪಾಪಂ ಸ್ವಲ್ಪಂ ವಾ ಯದಿ ವಾ ಬಹು ॥ ೯ ॥

ಪ್ರಕ್ಷಾಳಯತಿ ಗೋವಿಂದಸ್ತಸ್ಯಾಮಭ್ಯರ್ಚಿತೋ ಧ್ರುವಂ ।
ಯದಾ ವೈ ಶುಕ್ಲದ್ವಾದಶ್ಯಾಂ ಪುಷ್ಯೋ ಭವತಿ ಕರ್ಹಿಚಿತ್ ॥ ೧೦ ॥

ತದಾ ತು ಸಾ ಮಹಾಪುಣ್ಯಾ ಕಥಿತಾ ಪಾಪನಾಶಿನೀ ।
ಯೋ ದದಾತಿ ತಿಲಪ್ರಸ್ಥಂ ನಿತ್ಯಂ ಸಂವತ್ಸರಂ ಪ್ರತಿ ॥ ೧೧ ॥

ಉಪವಾಸಂ ಚ ಯಸ್ತಸ್ಯಾಂ ಕರೋತ್ಯೇತತ್ಸಮಂ ಸ್ಮೃತಂ ।
ತಸ್ಯಾಂ ಜಗತ್ಪತಿರ್ದೇವಸ್ತುಷ್ಟಸ್ಸರ್ವೇಶ್ವರೋ ಹರಿಃ ॥ ೧೨ ॥

ಪ್ರತ್ಯಕ್ಷತಾಂ ಪ್ರಯಾತ್ಯೇವ ತತ್ರಾನಂತಫಲಂ ಸ್ಮೃತಂ ।
ಸಾಗರೇಣ ಕಕುತ್‌ಸ್ಥೇನ ನಹುಷೇಣ ಚ ಗಾಧಿನಾ ॥ ೧೩ ॥

---

೮–೧೫. ಹೋಮವೂ, ಉಪವಾಸವೂ ಕೂಡ ಸಾವಿರದಷ್ಟು ಹೆಚ್ಚು ಫಲವನ್ನು ಕೊಡುತ್ತದೆ. ಶುಕ್ಲ ದ್ವಾದಶಿಯ ದಿನ ಪೂರ್ವಾಭಾದ್ರ ನಕ್ಷತ್ರ ಬಂದರೆ ಅದಕ್ಕೆ "ಜಯಂತೀ" ಎಂದು ಹೆಸರು. ಅದು ಪಾಪಗಳನ್ನೆಲ್ಲಾ ನಾಶಮಾಡುತ್ತದೆ. ಆ ದಿನದಲ್ಲಿ ಗೋವಿಂದನನ್ನು ಪೂಜಿಸಿದರೆ ಏಳು ಜನ್ಮದ ಪಾಪಗಳನ್ನೂ ನಾಶಮಾಡುತ್ತಾನೆ. ಶುಕ್ಲ ದ್ವಾದಶಿಯದಿನ ಪುಷ್ಯ ನಕ್ಷತ್ರವು ಬಂದರೆ ಅದು "ಪಾಪನಾಶಿನಿ" ಎನಿಸಿಕೊಳ್ಳುತ್ತದೆ. ಅದು ಮಹಾ ಪುಣ್ಯವನ್ನು ಕೊಡುತ್ತದೆ. ಪಾಪಗಳನ್ನು ನಾಶಮಾಡುತ್ತದೆ. ಒಂದು ಬಳ್ಳ ಎಳ್ಳನ್ನು ಪ್ರತಿದಿನವೂ ಒಂದು ವರ್ಷದವರೆಗೆ ದಾನ ಮಾಡಿದರೆ ಎಷ್ಟು ಫಲವುಂಟೋ ಆ ಫಲವು ಆದಿನ ಉಪವಾಸ ಮಾಡಿದರೆ ಬರುತ್ತದೆ. ಅವೆರಡೂ ಸಮವಾದುವೆಂದು ಹೇಳಲ್ಪಟ್ಟಿದೆ. ಆ ದಿನದ ಉಪವಾಸದಿಂದ ಶ್ರೀ ಹರಿಯು ಸಂತೋಷಗೊಂಡು ಪ್ರತ್ಯಕ್ಷನಾಗುತ್ತಾನೆ. ಮತ್ತು ಅನಂತವಾದ ಫಲವೂ ಬರುತ್ತದೆ. ಸಾಗರ,

ತಸ್ಯಾಮಾರಾಧಿತಃ ಕೃಷ್ಣೋ ದತ್ತವಾನಖಿಲಂ ಭುವಿ ।
ವಾಚಿಕಾನ್ಮಾನಸಾಚ್ಚಾಪಿ ಕಾಯಿಕಾಚ್ಚ ವಿಶೇಷತಃ　　|| ೧೪ ||

ಸಪ್ತಜನ್ಮಕೃತಾತ್ಪಾಪಾತ್ ಮುಚ್ಯತೇ ನಾತ್ರ ಸಂಶಯಃ ।
ತಾಮೇಕಾಂ ಸಮುಪೋಷ್ಯಾಥ ಪುಷ್ಯನಕ್ಷತ್ರಸಂಯುತಾಂ　　|| ೧೫ ||

ಏಕಾದಶೀ ಸಹಸ್ರಸ್ಯ ಫಲಂ ಪ್ರಾಪ್ನೋತಿ ಮಾನವಃ ।
ಸ್ನಾನಂ ದಾನಂ ಜಪೋ ಹೋಮಃ ಸ್ವಾಧ್ಯಾಯೋ ದೇವತಾರ್ಚನಂ ||೧೬||

ಯಸ್ತಸ್ಯಾಂ ಕ್ರಿಯತೇ ಕಿಂಚಿತ್ತದಕ್ಷಯ ಫಲಂ ಸ್ಮೃತಂ
ತಸ್ಮಾದೇಷಾ ಪ್ರಕರ್ತವ್ಯಾ ಯತ್ನೇನ ಫಲಕಾಂಕ್ಷಿಭಿಃ　　|| ೧೭ ||

ಪಂಚಮೇನಾಶ್ವಮೇಧೇನ ಯದಾ ಸ್ನಾತೋ ಯುಧಿಷ್ಠಿರಃ ।
ಪರ್ಯಪೃಚ್ಛತ ಧರ್ಮಾತ್ಮಾ ಕೃಷ್ಣಂ ಯದುಕುಲೋದ್ವಹಂ　　|| ೧೮ ||

---

ಕಕುತ್‌ಸ್ಥ, ನಹುಷ, ಗಾಧಿ ಇವರು ಆದಿನ ಶ್ರೀ ಕೃಷ್ಣನನ್ನು ಪೂಜಿಸಿದುದರಿಂದ ಎಲ್ಲವನ್ನೂ ಆ ಕೃಷ್ಣನು ಅವರಿಗೆ ಕೊಟ್ಟನು. ವಾಚಿಕವಾದ, ಮಾನಸಿಕವಾದ, ಕಾಯಿಕವಾದ ಪಾಪಗಳು ಏಳು ಜನ್ಮಗಳಲ್ಲಿ ಮಾಡಿದುದೂ ಹೋಗುತ್ತವೆ. ಇದರಲ್ಲಿ ಸಂಶಯವಿಲ್ಲ. ಈ ಪುಷ್ಯ ನಕ್ಷತ್ರದಿಂದ ಕೂಡಿದ ಏಕಾದಶಿಯಲ್ಲಿ ಉಪವಾಸ ಮಾಡಿದರೆ, ಸಾವಿರ ಏಕಾದಶಿಗಳಲ್ಲಿ ಉಪವಾಸ ಮಾಡಿದ ಫಲವನ್ನು ಹೊಂದುತ್ತಾನೆ. ಆದಿನ ಮಾಡಿದ ಸ್ನಾನ, ದಾನ, ಜಪ, ಹೋಮ, ಅಧ್ಯಯನ, ದೇವತಾರ್ಚನೆ ಮತ್ತೆ ಯಾವುದಾದರೂ ಪುಣ್ಯ ಕೆಲಸಗಳು ಇವು ಅಕ್ಷಯ ಫಲವನ್ನು ಕೊಡುತ್ತವೆ. ಆದುದರಿಂದ ಈ ಪುಷ್ಯ ನಕ್ಷತ್ರದ ಏಕಾದಶಿಯನ್ನು ಫಲಕಾಂಕ್ಷಿಗಳು ಮಾಡಬೇಕು. ಯುಧಿಷ್ಠಿರನು ಐದನೆಯ ಅಶ್ವಮೇಧಯಾಗ ಮಾಡಿ ಅವಭೃತಸ್ನಾನ ಮಾಡಿದಾಗ ಯದುಶ್ರೇಷ್ಠನಾದ ಶ್ರೀ ಕೃಷ್ಣನನ್ನು ಕುರಿತು ಪ್ರಶ್ನಿಸಿದನು

|| ಯುಧಿಷ್ಠಿರ ಉವಾಚ ||

ಉಪವಾಸಸ್ಯ ನಕ್ತಸ್ಯ ತ್ವೇಕಭುಕ್ತಸ್ಯ ಮೇ ಪ್ರಭೋ ।
ಕಿಂ ಪುಣ್ಯಂ ಕಿಂ ಫಲಂ ತಸ್ಯ ಬ್ರೂಹಿ ಸರ್ವಂ ಜನಾರ್ದನ || ೧೯ ||

|| ಶ್ರೀ ಭಗವಾನುವಾಚ ||

ಹೇಮಂತೇ ಚೈವ ಸಂಪ್ರಾಪ್ತೇ ಮಾಸೇ ಮಾರ್ಗೇ ಚ ಶೋಭನೇ ।
ಕೃಷ್ಣಪಕ್ಷೇ ಚ ಯಾ ಪಾರ್ಥ ದ್ವಾದಶೀ ತಾಮುಪೋಷಯೇತ್ || ೨೦ ||

ದಶಮ್ಯಾಂ ಚೈಕಭುಕ್ತಂ ಚ ಶುದ್ಧಚಿತ್ತೋ ದೃಢವ್ರತಃ ।
ನಕ್ತಂ ಚೈವ ತಥಾ ಜ್ಞಾತ್ವಾ ದಶಮ್ಯಾಂ ನಿಯತಸ್ಸದಾ || ೨೧ ||

ದಿವಸಸ್ಯಾಷ್ಟಮೇ ಭಾಗೇ ಮಂದೀಭೂತೇ ದಿವಾಕರೇ ।
ನಕ್ತಂ ಚ ತದ್ವಿಜಾನೀಯಾನ್ನ ನಕ್ತಂ ನಿಶಿ ಭೋಜನಂ || ೨೨ ||

---

೧೯. ಯುಧಿಷ್ಠಿರನು ಹೇಳಿದನು– ಎಲೈ ಜನಾರ್ದನನೆ! ಉಪವಾಸ, ನಕ್ತ, ಏಕಭುಕ್ತಗಳನ್ನು ಮಾಡಿದರೆ ಯಾವ ಪುಣ್ಯವು ಬರುವುದು? ಏನು ಫಲ ಉಂಟು? ಎಂಬುದನ್ನು ಹೇಳು.

೨೦. ಶ್ರೀ ಭಗವಂತನು ಹೇಳಿದನು–ಎಲೈ ಧರ್ಮಜನೆ! ಹಿಮಂತಋತುವಿನ, ಮಾರ್ಗಶಿರ ಮಾಸದ, ಕೃಷ್ಣಪಕ್ಷದ, ದ್ವಾದಶಿಯಲ್ಲಿ ಪ್ರಯತ್ನದಿಂದ ಉಪವಾಸ ಮಾಡಬೇಕು.

೨೧–೨೨. ದಶಮಿಯಲ್ಲಿ ಒಪ್ಪತ್ತು ಊಟ ಮಾಡಬೇಕು. ಶುದ್ಧ ಮನಸ್ಕನಾಗಿದ್ದು, ವ್ರತದಲ್ಲಿ ದೃಢ ಮನಸ್ಸಿರಬೇಕು. ಆದಿನ ನಕ್ತ ಮಾಡಬೇಕು. ಎಂದರೆ ದಶಮಿಯ ದಿನ ನಿಯಮದಿಂದ ಇದ್ದುಕೊಂಡು ಹಗಲನ್ನು ಎಂಟುಭಾಗವಾಗಿ ವಿಂಗಡಿಸಿಕೊಂಡು ಎಂಟನೆಯ ಭಾಗದಲ್ಲಿ ಸೂರ್ಯನ ಬಿಸಿಲು ಕಡಿಮೆಯಾಗುತ್ತಲೂ ಊಟಮಾಡಬೇಕು. ಇದು ನಕ್ತವೆನಿಸಿಕೊಳ್ಳುತ್ತದೆ. ರಾತ್ರಿಯಲ್ಲಿ ಊಟ ಮಾಡಿದರೆ ಅದು ನಕ್ತವಾಗುವುದಿಲ್ಲ.

ನಕ್ಷತ್ರದರ್ಶನಾನ್ನಕ್ತಂ ಗೃಹಸ್ಥಸ್ಯ ವಿಧೀಯತೇ ।
ಯತ್ತು ದಿನಾಷ್ಟಮೋ ಭಾಗೇ ರಾತ್ರೌ ತಸ್ಯ ನಿಷೇಧನಂ ॥ ೨೩ ॥

ತತಃ ಪ್ರಭಾತಸಮಯೇ ಕೃತ್ವಾ ವೈ ನಿಯಮಂ ವ್ರತೀ ।
ಮಧ್ಯಾಹ್ನೇ ಚ ತಥಾ ಪಾರ್ಥ ಸ್ನಾನಂ ಶುಚಿ ಸಮಾಚರೇತ್ ॥ ೨೪ ॥

ಅಧಮಂ ಕೂಪಕೇ ಸ್ನಾನಂ ವಾಪ್ಯಾಂ ಸ್ನಾನಂ ಚ ಮಧ್ಯಮಂ ।
ತಟಾಗೇ ಚೋತ್ತಮಂ ಸ್ನಾನಂ ನದ್ಯಾ ಸ್ನಾನಂ ತತಃ ಪರಂ ॥ ೨೫ ॥

ಪೀಡ್ಯಂತೇ ಜಂತವೋ ಯತ್ರ ಜಲಮಧ್ಯೇ ವ್ಯವಸ್ಥಿತೇ ।
ತತ್ರ ಸ್ನಾನೇ ಕೃತೇ ಪಾರ್ಥ ಪಾಪಂ ಪುಣ್ಯಂ ಸಮಂ ಭವೇತ್ ॥ ೨೬ ॥

ಗೃಹೇ ಚೈವೋತ್ತಮಂ ಸ್ನಾನಂ ಜಲಂ ಚೈವ ವಿಶೋಧಯೇತ್ ।
ತಸ್ಮಾತ್ತು ಪಾಂಡವ ಶ್ರೇಷ್ಠ ಗೃಹೇ ಸ್ನಾನಂ ಸಮಾಚರೇತ್ ॥ ೨೭ ॥

---

೨೩. ಹಗಲಿನ ಎಂಟನೇಭಾಗದಲ್ಲಿ, ನಕ್ಷತ್ರ ದರ್ಶನವಾಗುವುದರಿಂದ, ಅದು ನಕ್ತವೆಂದೆನಿಸಿಕೊಳ್ಳುತ್ತದೆ. ಅದು ಗೃಹಸ್ಥನಿಗೆ ಹೇಳಲ್ಪಟ್ಟಿದೆ. ರಾತ್ರಿಯಲ್ಲಿ ನಕ್ತಭೋಜನವು ನಿಷೇಧಿಸಲ್ಪಟ್ಟಿದೆ.

೨೪. ಹೀಗೆ ದಶಮಿಯ ದಿನ ನಕ್ತಭೋಜನವನ್ನು ಮಾಡಿ ಮಾರನೆಯದಿನ ಬೆಳಗ್ಗೆ ಎದ್ದು ನಿಯಮವಾಗಿದ್ದುಕೊಂಡು ಮಧ್ಯಾಹ್ನದಲ್ಲಿ ಸ್ನಾನವನ್ನು ಮಾಡಿಕೊಂಡು ಶುಚಿಯಾಗಿರಬೇಕು.

೨೫. ಬಾವಿಯಲ್ಲಿ ನೀರನ್ನು ತೆಗೆದು ಸ್ನಾನಮಾಡುವುದು ಅಧಮವು. ಇಳಿದು ಸ್ನಾನಮಾಡುವ ಬಾವಿಯಲ್ಲಿ ಸ್ನಾನಮಾಡಿದರೆ ಮಧ್ಯಮವು. ಕೆರೆಯಲ್ಲಿ ಸ್ನಾನಮಾಡಿದರೆ ಉತ್ತಮವು. ನದಿಯಲ್ಲಿ ಸ್ನಾನಮಾಡಿದರೆ ಅದು ಸರ್ವೋತ್ತಮವು.

೨೬. ನೀರಿನ ಮಧ್ಯದಲ್ಲಿ ಸ್ನಾನಮಾಡಿದರೆ ಅನೇಕ ಜಂತುಗಳಿಗೆ ತೊಂದರೆಯಾಗುತ್ತಾದುದರಿಂದ ಅಲ್ಲಿ ಸ್ನಾನ ಮಾಡಿದರೆ ಪಾಪಪುಣ್ಯಗಳು ಸಮವಾಗುತ್ತವೆ.

೨೭. ಆದ್ದರಿಂದ ಮನೆಯಲ್ಲಿ ಸ್ನಾನ ಮಾಡಿದರೆ ಆ ಸ್ನಾನವೇ ಉತ್ತಮವು. ಆದರೂ ಮನೆಯಲ್ಲಿ ನೀರನ್ನು ಶೋಧಿಸಿಕೊಳ್ಳಬೇಕು. ಆದುದರಿಂದ ಮನೆಯಲ್ಲೇ ಸ್ನಾನವನ್ನು ಮಾಡಬೇಕು.

ಅಶ್ವಕ್ರಾನ್ತೇ ರಥಕ್ರಾನ್ತೇ ವಿಷ್ಣುಕ್ರಾಂತೇ ವಸುಂಧರೇ ।
ಮೃತ್ತಿಕೇ ಹರ ಮೇ ಪಾಪಂ ಯನ್ಮಯಾ ಪೂರ್ವಸಂಚಿತಂ ॥ ೨೮ ॥

ಕ್ರೋಧಲೋಭೌ ಪರಿತ್ಯಜ್ಯ ತ್ವೇಕಚಿತ್ತೋ ದೃಢವ್ರತಃ ।
ನಾಲಪೇತಾಂತ್ಯಜಂ ಚೈವ ತಥಾ ಪಾಷಂಡಿನೋ ನರಾನ್ ॥ ೨೯ ॥

ಮಿಥ್ಯಾವಾದರತಾಂಶ್ಚೈವ ತಥಾ ಬ್ರಾಹ್ಮಣನಿಂದಕಾನ್ ।
ಅನ್ಯಾಂಶ್ಚೈವ ದುರಾಚಾರಾನಗಮ್ಯಾಗಮನೇ ರತಾನ್ ॥ ೩೦ ॥

ಪರದ್ರವ್ಯಾಪಹಾರಾಂಶ್ಚ ಪರದಾರಾಭಿಗಾಮಿನಃ ।
ಕೇಶವಂ ಪೂಜಯಿತ್ವಾ ತು ನೈವೇದ್ಯಂ ತತ್ರ ಕಾರಯೇತ್ ॥ ೩೧ ॥

ದೀಪಂ ದದ್ಯಾದ್ಗೃಹೇ ತತ್ರ ಭಕ್ತಿಯುಕ್ತೇನ ಚೇತಸಾ ।
ತದ್ದಿನೇ ವರ್ಜಯೇತ್ ಪಾರ್ಥ ನಿದ್ರಾಂ ಚೈವ ತು ಮೈಥುನಂ ॥ ೩೨ ॥

---

೨೮. ಕುದುರೆಗಳಿಂದಲೂ, ರಥಗಳಿಂದಲೂ, ವಿಷ್ಣುವಿನಿಂದಲೂ ಆಕ್ರಮಿಸಲ್ಪಟ್ಟ ಎಲೈ ಭೂಮಿಯೆ! ನಾನು ಹಿಂದೆ ಮಾಡಿದ ಎಲ್ಲಾ ಪಾಪವನ್ನೂ ನಾಶ ಮಾಡು. ಎಂಬುದಾಗಿ ಪ್ರಾರ್ಥಿಸಬೇಕು. (ಅಶ್ವಕ್ರಾಂತೇ ರಥಕ್ರಾಂತೇ ಎಂಬ ಸೂಕ್ತವನ್ನು ಹೇಳಿಕೊಂಡು ಸ್ನಾನಮಾಡಬೇಕು.)

೨೯–೩೨. ಕೋಪ ಲೋಭಗಳನ್ನು ಬಿಟ್ಟು ಒಂದೇಮನಸುಳ್ಳವನಾಗಿ ದೃಢದಿಂದ ಇರಬೇಕು. ಶೂದ್ರಾದಿಗಳೊಡನೆ ಮಾತನಾಡಬಾರದು. ಪಾಷಂಡಿಗಳೊಡನೆ ಮಾತನಾಡಬಾರದು. ಸುಳ್ಳು ಹೇಳುವವರೊಡನೆಯೂ ಬ್ರಾಹ್ಮಣರನ್ನು ನಿಂದಿಸುವವರೊಡನೆಯೂ ಮಾತನಾಡಬಾರದು. ದುರಾಚಾರಿಗಳೆಂದು ತಿಳಿದಿರುವವರೊಡನೆಯೂ ಗುರುವಿನ ಹೆಂಡತಿಯೇ ಮುಂತಾದ ರತಿಮಾಡದವರೊಡನೆ ರತಿಮಾಡುವವರನ್ನೂ ಪರರಸ್ವತ್ತನ್ನು ಅಪಹರಿಸುವವರನ್ನೂ ಪರರ ಹೆಂಡಿರೊಡನೆ ರಮಿಸುವವರನ್ನೂ ಮಾತನಾಡಿಸಬಾರದು. ಕೇಶವನನ್ನು ಪೂಜಿಸಿ ಅವನಿಗೆ ನೈವೇದ್ಯವನ್ನು ಮಾಡಬೇಕು. ಭಕ್ತಿಯಿಂದ ಧೂಪ ದೀಪಗಳನ್ನು ಸಮರ್ಪಿಸಬೇಕು. ಆ ದಿನ ನಿದ್ರೆ ಮಾಡಬಾರದು. ಸ್ತ್ರೀಸಂಭೋಗಮಾಡಕೂಡದು.

ಧರ್ಮಶಾಸ್ತ್ರವಿನೋದೇನ ದಿನಂ ಸರ್ವಂ ನಿವಾರಯೇತ್ ।
ರಾತ್ರೌ ಜಾಗರಂ ಕೃತ್ವಾ ಭಕ್ತಿಯುಕ್ತೋ ನೃಪೋತ್ತಮ ॥ ೩೩ ॥

ವಿಪ್ರೇಭ್ಯೋ ದಕ್ಷಿಣಾಂ ದದ್ಯಾತ್ ಪ್ರಣಿಪತ್ಯ ಕ್ಷಮಾಪಯೇತ್ ।
ಯಥಾ ಕೃಷ್ಣಾ ತಥಾ ಶುಕ್ಲಾ ವಿಧಿನೈವಂ ಪ್ರಕಾರಯೇತ್ ॥ ೩೪ ॥

ಏಕಾದಶೀಂ ದ್ವಿಜಃ ಪಾರ್ಥ ವಿಭೇದಂ ನೈವ ಕಾರಯೇತ್ ।
ಏವಂ ಹಿ ಕುರುತೇ ಯಸ್ತು ಶೃಣು ತಸ್ಯ ಹಿ ಯತ್ಫಲಂ ॥ ೩೫ ॥

ಶಂಖೋದ್ಧಾರೆ ನರಸ್ಸ್ನಾತ್ವಾ ದೃಷ್ಟ್ವಾ ದೇವಂ ಗದಾಧರಂ ।
ಏಕಾದಶ್ಯುಪವಾಸಸ್ಯ ಕಲಾಂ ನಾರ್ಹತಿ ಷೋಡಶೀಂ ॥ ೩೬ ॥

ಸಂಕ್ರಾನ್ತೀನಾಂ ಚತುರ್ಲಕ್ಷಂ ಯೋ ದಧಾತಿ ನೃಪೋತ್ತಮ ।
ಏಕಾದಶ್ಯುಪವಾಸಸ್ಯ ಕಲಾಂ ನಾರ್ಹತಿ ಷೋಡಶೀಂ ॥ ೩೭ ॥

ಪ್ರಭಾಸಕ್ಷೇತ್ರೇ ಯತ್ಪುಣ್ಯಂ ಗ್ರಹಣೇ ಚಂದ್ರಸೂರ್ಯಯೋಃ ।
ತತ್ಫಲಂ ಜಾಯತೇ ನೂನಮೇಕಾದಶ್ಯುಪವಾಸಿನಃ ॥ ೩೮ ॥

---

೩೩–೩೬. ಆದಿನವೆಲ್ಲವೂ ಧರ್ಮಶಾಸ್ತ್ರದ ವಿಷಯವನ್ನು ಚರ್ಚಿಸುತ್ತಲಿರಬೇಕು. ಭಕ್ತಿಯಿಂದ ರಾತ್ರಿಯೆಲ್ಲವೂ ಜಾಗರಣೆಯನ್ನುಮಾಡಿ ಬ್ರಾಹ್ಮಣರಿಗೆ ದಕ್ಷಿಣೆಯನ್ನು ಕೊಟ್ಟು ಅವರಿಗೆ ನಮಸ್ಕರಿಸಿ ಕ್ಷಮಾಪಣೆಯನ್ನು ಕೇಳಿ ಕೊಳ್ಳಬೇಕು. ಶುಕ್ಲ ಏಕಾದಶಿಯನ್ನು ಹೇಗೆ ವಿಧಿವತ್ತಾಗಿ ಮಾಡುವನೋ ಕೃಷ್ಣ ಏಕಾದಶಿಯನ್ನೂ ಹಾಗೆಯೇ ಮಾಡಬೇಕು. ಎರಡರಲ್ಲಿಯೂ ವ್ಯತ್ಯಾಸಮಾಡಬಾರದು. ಹೀಗೆ ಮಾಡುವವನಿಗೆ ಬರುವ ಫಲವನ್ನು ಹೇಳುತ್ತೇನೆ. ಕೇಳು. ಶಂಖೋದ್ಧಾರದಲ್ಲಿ ಸ್ನಾನಮಾಡಿ ಗದಾಧರನ ದರ್ಶನ ಮಾಡಿದರೆ ಬರುವ ಫಲವು ಈ ಏಕಾದಶಿಯ ಉಪವಾಸದ ಹದಿನಾರನೆಯ ಒಂದಂಶವನ್ನು ಸರಿತೂಗಲಾರದು.

೩೭. ನಾಲ್ಕು ಲಕ್ಷ ಸಂಕ್ರಾಂತಿಗಳನ್ನು ಮಾಡಿದವನು ಈ ಏಕಾದಶಿಯ ಉಪವಾಸ ಮಾಡಿದವನ ಹದಿನಾರನೆಯ ಒಂದು ಭಾಗವನ್ನು ಹೋಲಲಾರನು.

೩೮. ಚಂದ್ರ ಸೂರ್ಯರ ಗ್ರಹಣದಲ್ಲಿ ಪ್ರಭಾಸಕ್ಷೇತ್ರದಲ್ಲಿ ಸ್ನಾನಮಾಡಿದರೆ ಯಾವ ಫಲವು ಬರುವುದೋ ಏಕಾದಶ್ಯುಪವಾಸ ಮಾಡಿದವನಿಗೆ ಆ ಫಲವು ಬರುತ್ತದೆ.

ಕೇದಾರೇ ಚೋದಕಂ ಪೀತ್ವಾ ಪುನರ್ಜನ್ಮ ನ ವಿದ್ಯತೇ ।
ತಥಾ ಚೈಕಾದಶೀ ಪಾರ್ಥ ಗರ್ಭವಾಸ ಕ್ಷಯಂ ಕರೀಂ ॥ ೩೯ ॥

ಅಶ್ವಮೇಧಸ್ಯ ಯಜ್ಞಸ್ಯ ಪೃಥಿವ್ಯಾಂ ಯತ್ಫಲಂ ಭವೇತ್ ।
ತಸ್ಮಾಚ್ಛತಗುಣಂ ಪುಣ್ಯಂ ಏಕಾದಶ್ಯುಪವಾಸಿನಃ ॥ ೪೦ ॥

ತಪಸ್ವಿನೋ ಗೃಹೇ ಯಸ್ಯ ಭುಂಜತೇ ಚ ದ್ವಿಜೋತ್ತಮಾಃ ।
ತತ್ಫಲಂ ಜಾಯತೇ ನೂನಮೇಕಾದಶ್ಯುಪವಾಸಿನಃ ॥ ೪೧ ॥

ಗೋಸಹಸ್ರೇಣ ಯತ್ಪುಣ್ಯಂ ದತ್ವಾ ವೇದಾಂಗಪಾರಗೇ ।
ತಸ್ಮಾಚ್ಛತಗುಣಂ ಪುಣ್ಯಂ ಏಕಾದಶ್ಯುಪವಾಸಿನಃ ॥ ೪೨ ॥

ಯೇಷಾಂ ದೇಹೇ ತ್ರಯೋ ದೇವಾ ಬ್ರಹ್ಮವಿಷ್ಣುಮಹೇಶ್ವರಾಃ ।
ವಸಂತಿ ತೇಷಾಂ ತತ್ತುಲ್ಯಾ ಏಕಾದಶ್ಯುಪವಾಸಿನಃ ॥ ೪೩ ॥

---

೩೯. ಕೇದಾರಕ್ಷೇತ್ರದಲ್ಲಿ ನೀರನ್ನು ಕುಡಿದರೆ ಪುನರ್ಜನ್ಮವು ಮನುಷ್ಯನಿಗೆ ಬರುವುದಿಲ್ಲ. ಅದೇ ರೀತಿಯಾಗಿ ಏಕಾದಶೀವ್ರತವನ್ನು ಮಾಡಿದವರಿಗೆ ಗರ್ಭವಾಸದ ಭಯವಿರುವುದಿಲ್ಲ.

೪೦. ಅಶ್ವಮೇಧಯಾಗವನ್ನು ಮಾಡಿದರೆ ಭೂಮಿಯಲ್ಲಿ ಯಾನ ಫಲವನ್ನು ಹೊಂದುತ್ತಾನೆಯೋ ಅದಕ್ಕಿಂತಲೂ ನೂರರಷ್ಟು ಪುಣ್ಯವು ಏಕಾದಶಿ ಉಪವಾಸವನ್ನು ಮಾಡಿದವನಿಗೆ ಬರುತ್ತದೆ.

೪೧. ಯಾವನ ಮನೆಯಲ್ಲಿ ತಪಸ್ವಿಗಳು ಊಟಮಾಡಿದರೆ ಅವನಿಗೆ ಅದರಿಂದ ಯಾವ ಫಲವು ಬರುತ್ತದೆಯೋ ಆ ಫಲವು ಏಕಾದಶಿಯ ಉಪವಾಸ ಮಾಡಿದವನಿಗೆ ಬರುತ್ತದೆ.

೪೨. ವೇದವೇದಾಂಗಗಳನ್ನು ಓದಿದವನಿಗೆ ಸಾವಿರ ಗೋದಾನಗಳನ್ನು ಮಾಡಿದರೆ ಬರುವ ಪುಣ್ಯಕ್ಕಿಂತಲೂ ನೂರರಷ್ಟು ಹೆಚ್ಚು ಪುಣ್ಯವು ಏಕಾದಶಿಯದಿನ ಉಪವಾಸ ಮಾಡಿದವನಿಗೆ ಬರುತ್ತದೆ.

೪೩. ಯಾವನ ದೇಹದಲ್ಲಿ ಬ್ರಹ್ಮ, ವಿಷ್ಣು, ಶಿವರು ಮೂವರೂ ವಾಸ ಮಾಡುತ್ತಾರೆಯೋ ಅವನ ಸಮಾನನಾಗಿ ಏಕಾದಶಿಯ ಉಪವಾಸಿಯು ಆಗುತ್ತಾನೆ.

ತೇ ನರಾಃ ಪುಣ್ಯಕರ್ಮಾಣೋ ಯೇ ಭಕ್ತಾ ರುಕ್ಮಿಣೀಪತೇಃ ।
ಏಕಾದಶೀ ವ್ರತಸ್ಯಾಪಿ ಪುಣ್ಯಸಂಖ್ಯಾ ನ ವಿದ್ಯತೇ ॥ ೪೪ ॥

ಏತತ್ಪುಣ್ಯಂ ಭವೇತ್ತಸ್ಯ ಯತ್ಸುರೈರಪಿ ದುರ್ಲಭಂ ।
ಏತಸ್ಮಾದರ್ಧಪುಣ್ಯಂ ತು ಪ್ರಾಪ್ಯತೇ ನಕ್ತಭೋಜನಾತ್ ॥ ೪೫ ॥

ನಕ್ತಸ್ಯಾರ್ಧಂ ಭವೇತ್ ಪುಣ್ಯಂ ಏಕಭುಕ್ತೇನ ದೇಹಿನಾಂ ।
ತಾವದ್ಗರ್ಜಂತಿ ತೀರ್ಥಾನಿ ದಾನಾನಿ ನಿಯಮಾನಿ ಚ ॥ ೪೬ ॥

ಯಾವನ್ನೋಪೋಷಯೇಜ್ಜಂತುರ್ವಾಸರಂ ವಿಷ್ಣುವಲ್ಲಭಂ ।
ತಸ್ಮಾತ್ತ್ವಂ ಪಾಂಡವಶ್ರೇಷ್ಠ ವ್ರತಮೇತತ್ಸಮಾಚರ ॥ ೪೭ ॥

ಪುಣ್ಯಸಂಖ್ಯಾಂ ನ ಜಾನಾಮಿ ಯತ್ತ್ವಂ ಪೃಚ್ಛಸಿ ಪಾಂಡವ ।
ಏತದ್ಧಿ ಕಥಿತಂ ಪಾರ್ಥ ಯದ್ಗೋಪ್ಯಂ ವ್ರತಮುತ್ತಮಂ ॥
ಏಕಾದಶೀ ಸಮಂ ನಾಸ್ತಿ ಕೃತ್ವಾ ಯಜ್ಞಸಹಸ್ರಕಂ ॥ ೪೮ ॥

---

೪೪. ಕೃಷ್ಣನಿಗೆ ಭಕ್ತರಾಗಿರುವ ಜನರೇ ಪುಣ್ಯವಂತರು. ಏಕಾದಶೀ ವ್ರತದ ಪುಣ್ಯವನ್ನು ಎಣಿಸಲು ಆಗುವುದೇ ಇಲ್ಲ.

೪೫. ಏಕಾದಶಿಯ ಉಪವಾಸದಿಂದ ದೇವತೆಗಳೂ ಹೊಂದಲಾರದ ಪುಣ್ಯವನ್ನು ಹೊಂದುತ್ತಾನೆ. ನಕ್ತ ಭೋಜನವನ್ನು ಮಾಡಿದರೆ ಇದರಲ್ಲಿ ಅರ್ಧ ಪುಣ್ಯವು ಬರುತ್ತದೆ.

೪೬–೪೭. ಒಪ್ಪತ್ತು ಊಟ ಮಾಡಿದರೆ ಈ ನಕ್ತದ ಅರ್ಧಪುಣ್ಯವು ಬರುತ್ತದೆ. ವಿಷ್ಣುವಿಗೆ ಪ್ರಿಯವಾದ ಈ ಏಕಾದಶಿಯ ಉಪವಾಸವನ್ನು ಮಾಡುವ ವರೆಗೂ, ದಾನಗಳೂ ತೀರ್ಥಗಳೂ, "ನಾವು ಪಾಪಗಳನ್ನು ನಾಶಮಾಡುತ್ತೇವೆ. ನಾವು ಪುಣ್ಯವನ್ನು ಕೊಡುತ್ತೇವೆ." ಎಂದೆನ್ನುತ್ತಿರುತ್ತವೆ ಎಲೈ ಧರ್ಮಜನೆ! ಆದುದರಿಂದ ನೀನು ಈ ಏಕಾದಶೀ ವ್ರತವನ್ನು ಮಾಡು.

೪೮. ಎಲೈ ಧರ್ಮಜನೆ! ನೀನು ಕೇಳಿದ ಈ ಏಕಾದಶಿಯ ಪುಣ್ಯದ ಸಂಖ್ಯೆಯನ್ನು ನಾನೇ ತಿಳಿಯೆನು. ಗೋಪ್ಯವಾದ ಈ ವ್ರತವನ್ನು ನಿನಗೆ ನಾನು ಹೇಳಿದ್ದೇನೆ. ಸಾವಿರ ಯಜ್ಞಗಳನ್ನು ಮಾಡಿದರೂ ಏಕಾದಶಿ ಉಪವಾಸದ ಸಮನಾದ ಪುಣ್ಯವು ಬರುವುದಿಲ್ಲ.

॥ ಯುಧಿಷ್ಠಿರ ಉವಾಚ ॥

ಉತ್ಪನ್ನಾ ಸಾ ಕಥಂ ದೇವ ಪುಣ್ಯಾ ಚೈಕಾದಶೀ ತಿಥಿಃ ।
ಕಥಂ ಪವಿತ್ರಾ ವಿಶ್ವೇಸ್ಮಿನ್ಕಥಂ ವೈ ದೇವತಾಪ್ರಿಯಾ ॥ ೪೯ ॥

॥ ಶ್ರೀ ಭಗವಾನುವಾಚ ॥

ಪುರಾ ಕೃತಯುಗೇ ಪಾರ್ಥ ಮುರನಾಮೇತಿ ದಾನವಃ ।
ಅತ್ಯದ್ಭುತೋ ಮಹಾರೌದ್ರಃ ಸರ್ವದೇವಭಯಂಕರಃ ॥ ೫೦ ॥

ಇಂದ್ರೋಽಪಿ ನಿರ್ಜಿತಸ್ತೇನ ಸರ್ವೇ ದೇವಾಸ್ತಥಾ ನೃಪ ।
ಮುರಾಸುರೇಣ ತೇನೈವ ಮೃತ್ಯುನಾ ಚ ದುರಾತ್ಮನಾ ॥ ೫೧ ॥

ಸ್ವರ್ಗಾನ್ನಿರಾಕೃತಾಸ್ತೇನ ವಿಚರಂತಿ ಮಹೀತಲೇ ।
ಸಶಂಕಾ ಭಯಭೀತಾಶ್ಚ ಸರ್ವೇ ಗತ್ವಾ ಮಹೇಶ್ವರಂ ॥
ಇಂದ್ರೇಣ ಕಥಿತಂ ಸರ್ವಂ ಈಶ್ವರಸ್ಯಾಪಿ ಚಾಗ್ರತಃ ॥ ೫೨ ॥

---

೪೯. ಯುಧಿಷ್ಠಿರನು ಹೇಳಿದನು–ಎಲೈ ಸ್ವಾಮಿಯೆ! ಈ ಪುಣ್ಯವಾದ ಏಕಾದಶಿ ತಿಥಿಯು ಹೇಗೆ ಹುಟ್ಟಿತು? ಈ ಪ್ರಪಂಚದಲ್ಲಿ ಅದು ಹೇಗೆ ಪವಿತ್ರ ವಾಯಿತು? ದೇವತೆಗಳಿಗೆ ಅದು ಹೇಗೆ ಬೇಕಾದುದಾಯಿತು?

೫೦. ಭಗವಂತನು ಹೇಳಿದನು– ಎಲೈ ಧರ್ಮಜನೆ! ಪೂರ್ವದಲ್ಲಿ ಕೃತ ಯುಗದಲ್ಲಿ ಮುರನೆಂಬ ದಾನವನಿದ್ದನು. ಅವನು ಅದ್ಭುತನಾಗಿಯೂ ಕ್ರೂರ ನಾಗಿಯೂ ಎಲ್ಲರಿಗೂ ಭಯಂಕರನಾಗಿಯೂ ಇದ್ದನು.

೫೧. ಆ ಮುರನು ಇಂದ್ರನನ್ನೂ ಮಿಕ್ಕದೇವತೆಗಳನ್ನೂ ಜಯಿಸಿದ್ದನು. ದುಷ್ಟನಾದ ಅವನು ದೇವತೆಗಳಿಗೆ ಮೃತ್ಯುಸ್ವರೂಪನಾಗಿ ಅವರೆಲ್ಲರನ್ನೂ ಸ್ವರ್ಗ ದಿಂದ ಓಡಿಸಿಬಿಟ್ಟನು. ಹೀಗೆ ಓಡಿಬಂದ ದೇವತೆಗಳು ಭೂಮಿಯಲ್ಲಿ ಅಲ್ಲಲ್ಲಿ ಅಲೆಯುತ್ತಿದ್ದರು.

೫೨. ಆ ಮುರನಿಂದ ಹೆದರಿದ ದೇವತೆಗಳು, ಅವನಿಗೆ ಕಾಣದಂತೆ ಮಹೇ ಶ್ವರನ ಬಳಿಗೆ ಹೋದರು. ಅಲ್ಲಿ ಇಂದ್ರನು ಆ ಈಶ್ವರನಿಗೆ ತನ್ನ ತೊಂದರೆಗಳೆಲ್ಲ ವನ್ನೂ ಹೇಳಿಕೊಂಡನು.

|| ಇಂದ್ರ ಉವಾಚ ||

ಸ್ವರ್ಗಲೋಕಪರಿಭ್ರಷ್ಟಾ ವಿಚರಂತಿ ಮಹೀತಳೇ ।
ಮರ್ತ್ಯೇಷು ಸಂಸ್ಥಿತಾ ದೇವಾ ನ ಶೋಭಂತೇ ಮಹೇಶ್ವರ ॥
ಉಪಾಯಂ ಬ್ರೂಹಿ ಮೇ ದೇವ ಹ್ಯಮರಾ ಯಾಂತಿ ಕಾಂ ಗತಿಂ || ೫೩ ||

|| ಮಹಾದೇವ ಉವಾಚ ||

ದೇವರಾಜ ಸುರಶ್ರೇಷ್ಠ ಯತ್ರಾಸ್ತೇ ಗರುಡಧ್ವಜಃ ।
ಶರಣ್ಯಶ್ಚ ಜಗನ್ನಾಥಃ ಪರಿತ್ರಾಣಪರಾಯಣಃ ॥
ತತ್ರ ಗಚ್ಛ ಸುರಶ್ರೇಷ್ಠ ಸ ವೋ ರಕ್ಷಾಂ ವಿಧಾಸ್ಯತಿ || ೫೪ ||

|| ಕೃಷ್ಣ ಉವಾಚ ||

ಈಶ್ವರಸ್ಯ ವಚಶ್ಶ್ರುತ್ವಾ ದೇವರಾಜೋ ಮಹಾಮತಿಃ ।
ತ್ರಿದಶೈಸ್ಸಹಿತೈಸ್ಸರ್ವೈರ್ಗತಸ್ತತ್ರ ಯುಧಿಷ್ಠಿರ || ೫೫ ||

ಜಲಮಧ್ಯೇ ಪ್ರಸುಪ್ತಂ ತಂ ದೃಷ್ಟ್ವಾ ದೇವಂ ಗದಾಧರಂ ।
ಕೃತಾಂಜಲಿಪುಟೋ ಭೂತ್ವಾ ತ್ವಿಂದ್ರಃ ಸ್ತೋತ್ರಮುದೈರಯತ || ೫೬ ||

---

೫೩. ಇಂದ್ರನು ಹೇಳಿದನು-ಎಲೈ ದೇವ ದೇವನೆ! ದೇವತೆಗಳೆಲ್ಲರೂ ಸ್ವರ್ಗದಿಂದ ಓಡಿಸಲ್ಪಟ್ಟವರಾಗಿ ಮನುಷ್ಯಲೋಕದಲ್ಲಿ ಸಂಚರಿಸುತ್ತಿದ್ದಾರೆ. ಅವರಿಗೆ ಗೆಲುವೇ ಇಲ್ಲ. ಸ್ವಾಮಿಯೆ! ಇದಕ್ಕೊಂದು ಉಪಾಯವನ್ನು ಹೇಳು. ದೇವತೆಗಳು ಯಾವಗತಿಯನ್ನು ಹೊಂದಬೇಕು? ಅವರ ಸ್ಥಿತಿಯೇನಾಗಬೇಕು?

೫೪. ಮಹಾದೇವನು ಹೇಳಿದನು-ಎಲೈ ಇಂದ್ರನೆ! ರಕ್ಷಕನೂ ಶರಣಾಗತವತ್ಸಲನೂ ದೀನರನ್ನು ಕಾಪಾಡುವುದರಲ್ಲಿ ಆಸಕ್ತನೂ ಆದ ಗರುಡಧ್ವಜನಿರುವಲ್ಲಿಗೆ ಹೋಗಿರಿ? ನಿಮ್ಮನ್ನು ಕಾಪಾಡುತ್ತಾನೆ.

೫೫-೫೬. ಕೃಷ್ಣನು ಹೇಳಿದನು–ಮಹಾಬುದ್ಧಿಯುಳ್ಳ ಇಂದ್ರನು ಈಶ್ವರನ ಮಾತನ್ನು ಕೇಳಿ ದೇವತೆಗಳೊಡನೆ ಆ ವಿಷ್ಣುವಿರುವಲ್ಲಿಗೆ ಹೋದನು. ಅಲ್ಲಿ ಆ ಗದಾಧರನು ನೀರಿನ ಮಧ್ಯದಲ್ಲಿ ಮಲಗಿರುವುದನ್ನು ನೋಡಿ ಕೈಮುಗಿದು ಕೊಂಡು ಇಂತೆಂದು ಸ್ತೋತ್ರಮಾಡಿದನು.

|| ಇಂದ್ರ ಉವಾಚ ||

ಓಂ ನಮೋ ದೇವದೇವೇಶ ದೇವದಾನವವಂದಿತ
ದೈತ್ಯಾರೇ ಪುಂಡರೀಕಾಕ್ಷ ತ್ರಾಹಿ ಮಾಂ ಮಧುಸೂದನ || ೫೭ ||

ಸುರಾಸ್ಸರ್ವೇ ಸಮಾಯಾತಾ ಭಯಭೀತಾಶ್ಚ ದಾನವಾತ್ ।
ಶರಣಂ ತ್ವಾಂ ಜಗನ್ನಾಥ ತ್ರಾಹಿ ನೋ ಭಕ್ತವತ್ಸಲ || ೫೮ ||

ತ್ರಾಹಿ ನೋ ದೇವದೇವೇಶ ತ್ರಾಹಿ ತ್ರಾಹಿ ಜನಾರ್ದನ ।
ತ್ರಾಹಿ ವೈ ಪುಂಡರೀಕಾಕ್ಷ ದಾನವಾನಾಂ ವಿನಾಶಕ || ೫೯ ||

ತ್ವತ್ಸಮೀಪಂ ಗತಾಸ್ಸರ್ವೇ ತ್ವಮೇವ ಶರಣಂ ಪ್ರಭೋ ।
ಶರಣಾಗತದೇವಾನಾಂ ಸಾಹಾಯ್ಯಂ ಕುರು ವೈ ಪ್ರಭೋ || ೬೦ ||

ತ್ವಂ ಪತಿಸ್ತ್ವಂ ಮತಿರ್ದೇವ ತ್ವಂ ಕರ್ತಾ ತ್ವಂ ಚ ಕಾರಣಂ ।
ತ್ವಂ ಮಾತಾ ಸರ್ವಲೋಕಾನಾಂ ತ್ವಮೇವ ಜಗತಃ ಪಿತಾ || ೬೧ ||

---

೫೭. ಇಂದ್ರನು ಹೇಳಿದನು-ದೇವದೇವನೆ! ದೇವದಾನವವಂದಿತನೆ! ನಿನಗೆ ನಮಸ್ಕಾರವು. ಎಲೈ ದೈತ್ಯಾರಿಯೆ! ಪುಂಡರೀಕಾಕ್ಷನೆ! ಮಧುಸೂದನನೆ! ನನ್ನನ್ನು ಕಾಪಾಡು.

೫೮. ಎಲೈ ಭಕ್ತವತ್ಸಲನೆ! ಜಗನ್ನಾಥನೆ! ದಾನವರಿಂದ, ಹೆದರಿದ ದೇವತೆಗಳೆಲ್ಲರೂ, ಬಂದು ನಿನ್ನನ್ನು ಶರಣುಹೊಂದಿದ್ದಾರೆ. ಅಂತಹ ನಮ್ಮನ್ನು ಕಾಪಾಡು.

೫೯. ದೇವ ದೇವನೆ! ನಮ್ಮನ್ನು ಕಾಪಾಡು. ಜನಾರ್ದನನೆ! ನಮ್ಮನ್ನು ಕಾಪಾಡು. ದಾನವರನ್ನು ನಾಶಮಾಡುವ ಪುಂಡರೀಕಾಕ್ಷನೇ ನಮ್ಮನ್ನುಕಾಪಾಡು.

೬೦. ಆ ದೇವತೆಗಳೆಲ್ಲರೂ ನಿನ್ನ ಬಳಿಗೆ ಬಂದಿರುವರು. ಅವರೆಲ್ಲರಿಗೂ ನೀನೇ ಶರಣನು. ಎಲೈ ಸ್ವಾಮಿಯೆ! ಶರಣಾಗತರಾದ ದೇವತೆಗಳಿಗೆ ಸಹಾಯ ಮಾಡು.

೬೧. ಎಲೈ ಸ್ವಾಮಿಯೆ! ಪ್ರಪಂಚಕ್ಕೆಲ್ಲಾ ನೀನೇ ಒಡೆಯನು. ನೀನೇ ಬುದ್ಧಿಹೇಳುವವನು. ನೀನೇ ಕರ್ತನು. ನೀನೇ ಕಾರಣನು. ನೀನೇ ತಾಯಿಯು. ನೀನೇ ತಂದೆಯು.

ಭಗವನ್ ದೇವದೇವೇಶ ಶರಣಾಗತವತ್ಸಲ ।
ಶರಣಂ ತವ ಚಾಯಾತಾ ಭಯಭೀತಾಶ್ಚ ದೇವತಾಃ ॥ ೬೨ ॥

ದೇವತಾ ನಿರ್ಜಿತಾಸ್ಸರ್ವಾಃ ಸ್ವರ್ಗಭ್ರಷ್ಟಾಃ ಕೃತಾ ವಿಭೋ ।
ಅತ್ಯುಗ್ರೇಣ ಹಿ ದೈತ್ಯೇನ ಮುರನಾಮ್ನಾ ಮಹೌಜಸಾ ॥ ೬೩ ॥

॥ ಶ್ರೀ ಕೃಷ್ಣ ಉವಾಚ ॥

ಇಂದ್ರಸ್ಯ ವಚನಂ ಶ್ರುತ್ವಾ ವಿಷ್ಣುರ್ವಚನಮಬ್ರವೀತ್ ॥ ೬೪ ॥

॥ ಶ್ರೀ ಭಗವಾನುವಾಚ ॥

ಕೀದೃಶೋ ದಾನವಶ್ಶಕ್ರ ಕಿಂ ರೂಪಂ ಕೀದೃಶಂ ಬಲಂ ।
ಕ್ವ ಸ್ಥಾನಂ ತಸ್ಯ ದುಷ್ಟಸ್ಯ ಕಿಂ ವೀರ್ಯಂ ಕಃ ಪರಾಕ್ರಮಃ ।
ಕಿಂ ವರಂ ತಸ್ಯ ದುಷ್ಟಸ್ಯ ಮಮಾಖ್ಯಾಹಿ ಮಹಾಮತೇ ॥ ೬೫ ॥

॥ ಇಂದ್ರ ಉವಾಚ ॥

ಪೂರ್ವಂ ಬಭೂವ ದೇವೇಶ ಬ್ರಹ್ಮವಂಶಸಮುದ್ಭವಃ ।
ತಾಲಜಂಘಸ್ತು ನಾಮ್ನಾ ಚ ಅತ್ಯುಗ್ರೋಽಪಿ ಮಹಾಸುರಃ ॥ ೬೬ ॥

---

೬೨. ಎಲೈ ಸ್ವಾಮಿಯೆ! ದೇವದೇವನೆ! ಶರಣಾಗತವತ್ಸಲನೆ! ಭಯದಿಂದ ಕೂಡಿದ ದೇವತೆಗಳು ನಿನ್ನನ್ನು ಮರೆಹೊಗಲು ಬಂದಿದ್ದಾರೆ.

೬೩. ಅತಿಕ್ರೂರನಾದ ಶಕ್ತಿವಂತನಾದ ಮುರನೆಂಬ ದೈತ್ಯನು ದೇವತೆಗಳನ್ನೆಲ್ಲಾ ಜಯಿಸಿ ಸ್ವರ್ಗದಿಂದ ಓಡಿಸಿರುವನು.

೬೪. ಶ್ರೀ ಕೃಷ್ಣನು ಹೇಳಿದನು—ಇಂದ್ರನ ಈ ಮಾತನ್ನು ಕೇಳಿ ವಿಷ್ಣುವು ಇಂತೆಂದನು.

೬೫. ಭಗವಂತನು ಹೇಳಿದನು—ಎಲೈ ಇಂದ್ರನೆ! ಆ ದಾನವನು ಎಂಥಹವನು? ಅವನ ರೂಪವೇನು? ಅವನ ಬಲವೇನು? ಅವನಿರುವುದೆಲ್ಲಿ? ಅವನ ವೀರ್ಯವೇನು? ಅವನ ಪರಾಕ್ರಮವು ಎಂಥಾದ್ದು? ಅವನಿಗೆ ವರವೇನಿದೆ? ಅವೆಲ್ಲವನ್ನೂ ನನಗೆ ತಿಳಿಸು.

೬೬. ಇಂದ್ರನು ಹೇಳಿದನು—ಪೂರ್ವದಲ್ಲಿ ಬ್ರಹ್ಮನ ವಂಶದಲ್ಲಿ "ತಾಳಜಂಘ" ನೆಂಬ ಒಬ್ಬ ಮಹಾಸುರನಿದ್ದನು. ಅವನು ಬಹು ಉಗ್ರನು.

ತಸ್ಯ ಪುತ್ರೋ ಹಿ ವಿಖ್ಯಾತೋ ಮುರನಾಮೇತಿ ದಾನವಃ ।
ಅತ್ಯುತ್ಕಟೋ ಮಹಾವೀರ್ಯೋ ದೇವತಾನಾಂ ಭಯಂಕರಃ ॥ ೬೭ ॥

ಪುರೀ ಚಂದ್ರಾವತೀ ನಾಮ್ನಾ ತತ್ರ ಸ್ಥಾನೇ ವಸತ್ಯಸೌ ।
ನಿರ್ಜಿತಾ ದೇವತಾಸ್ಸರ್ವಾಃ ಸ್ವರ್ಗಾತ್ತೇನ ವಿವಾಸಿತಾಃ ॥ ೬೮ ॥

ಇಂದ್ರೋಽನ್ಯೋ ರೋಪಿತಸ್ತೇನ ಚಾನ್ಯಶ್ಚೈವ ಹುತಾಶನಃ ।
ಚಂದ್ರಸೂರ್ಯೌ ಕೃತೌ ಚಾನ್ಯೌ ವಾಯುರ್ವರುಣ ಏವ ಚ ॥ ೬೯ ॥

ಸರ್ವ ಮಾತ್ಮಕೃತಂ ತೇನ ಸತ್ಯಂ ಸತ್ಯಂ ಜನಾರ್ದನ ।
ದೇವಲೋಕಃ ಕೃತಸ್ತೇನ ಸರ್ವಸ್ಥಾನವಿವರ್ಜಿತಃ ॥ ೭೦ ॥

॥ ಶ್ರೀ ಕೃಷ್ಣ ಉವಾಚ ॥

ತಸ್ಯ ತದ್ವಚನಂ ಶ್ರುತ್ವಾ ಕೋಪಮಾನೋ ಜನಾರ್ದನಃ ।
ಹನಿಷ್ಯೇ ದಾನವಂ ದುಷ್ಟಂ ದೇವತಾನಾಂ ಭಯಂಕರಂ ॥ ೭೧ ॥

---

೬೭-೬೮. ಆ ತಾಳಜಂಘನ ಮಗನು ಮುರನೆಂಬವನು. ಬಹು ಕೊಬ್ಬಿದವನು. ವೀರ್ಯವಂತನು. ದೇವತೆಗಳಿಗೆ ಭಯಂಕರನು. ಅವನ ಪಟ್ಟಣವು ಚಂದ್ರಾವತಿಯು. ಅಲ್ಲಿ ಅವನು ವಾಸವಾಗಿದ್ದಾನೆ. ಅವನು ದೇವತೆಗಳನ್ನೆಲ್ಲಾ ಜಯಿಸಿ ಸ್ವರ್ಗದಿಂದ ಓಡಿಸಿದ್ದಾನೆ.

೬೯-೭೦. ಆತನು ಸ್ವರ್ಗದಲ್ಲಿ ಬೇರೆ ಇಂದ್ರನನ್ನೇ ಇಟ್ಟುಬಿಟ್ಟನು. ಅಗ್ನಿ ಸೂರ್ಯ, ಚಂದ್ರ, ವಾಯು, ವರುಣ, ಎಲ್ಲರನ್ನೂ ಬೇರೆಬೇರೆಯುವರನ್ನು ಸೃಷ್ಟಿಸಿ ಅಲ್ಲಿಟ್ಟಿದ್ದಾನೆ. ಆ ಸ್ವರ್ಗವೆಲ್ಲವನ್ನೂ ತನ್ನ ಅಧೀನವನ್ನಾಗಿ ಮಾಡಿಕೊಂಡಿದ್ದಾನೆ. ಸತ್ಯವು. ಸತ್ಯವಾಗಿಯೂ ಹೇಳುತ್ತೇನೆ. ದೇವಲೋಕವು ಎಲ್ಲವೂ ಅವನ ಕಡೆಯುವರಿಂದಲೇ ಕೂಡಿಕೊಂಡಿರುವುದು. ನಮ್ಮ ಕಡೆಯುವರೊಬ್ಬರೂ ಯಾವಸ್ಥಾನದಲ್ಲಿಯೂ ಅಲ್ಲಿ ಇಲ್ಲ.

೭೧. ಶ್ರೀಕೃಷ್ಣನು ಹೇಳಿದನು–ಆ ಇಂದ್ರನ ಮಾತನ್ನು ಕೇಳಿ ವಿಷ್ಣುವು ಕೋಪಗೊಂಡವನಾಗಿ ದೇವತೆಗಳಿಗೆ ಭಯಂಕರನಾದ ಆ ಮುರಾಸುರನನ್ನು ಕೊಲ್ಲುತ್ತೇನೆ ಎಂದನು.

ತ್ರಿದಶೈಸ್ಸಹಿತೋ ದೇವೋ ಗತಶ್ಚಂದ್ರಾವತೀಂ ಪುರೀಂ ।
ದೃಷ್ಟ್ವೋ ದೇವೈಸ್ತು ದೈತ್ಯೇಂದ್ರೋ ಗರ್ಜಮಾನಃ ಪುನಃ ಪುನಃ ॥ ೭೨ ॥

ತೇನ ಸರ್ವೇ ಜಿತಾ ದೇವಾಃ ಗತಾಶ್ಚೈವ ದಿಶೋ ದಶ ।
ಹರಿಂ ನಿರೀಕ್ಷ್ಯ ಪ್ರೋವಾಚ ತಿಷ್ಠ ತಿಷ್ಠೇತಿ ದಾನವಃ ।
ಭಗವಾನಬ್ರವೀತ್ತಂ ಚ ಕ್ರೋಧಸಂರಕ್ತಲೋಚನಃ ॥ ೭೩ ॥

॥ ಶ್ರೀ ಭಗವಾನುವಾಚ ॥

ರೇ ದಾನವ ದುರಾಚಾರ ಮನು ಬಾಹುಂ ನಿರೀಕ್ಷಯ ।
ತತಸ್ತೇ ಸಮ್ಮುಖಾಸ್ಸರ್ವೇ ವಿಷ್ಣುನಾ ದುಷ್ಟದಾನವಾಃ ॥ ೭೪ ॥

ಹತಾ ಬಾಣೈಃ ಪುನರ್ದಿವ್ಯೈಃ ಜಾತಾಶ್ಚ ಭಯವಿಹ್ವಲಾಃ ।
ಚಕ್ರಂ ಮುಕ್ತಂ ಚ ಕೃಷ್ಣೇನ ದೈತ್ಯಸೈನ್ಯೇಷು ಪಾಂಡವ ॥ ೭೫ ॥

---

೭೨. ಹೀಗೆ ಹೇಳಿ ವಿಷ್ಣುವು ಈ ದೇವತೆಗಳೊಡನೆ ಚಂದ್ರಾವತಿಗೆ ಹೋದನು. ಅಲ್ಲಿಗೆ ಹೋದ ದೇವತೆಗಳು ತಮ್ಮನ್ನು ನೋಡಿ ಬಾರಿಬಾರಿಗೂ ಗರ್ಜಿಸುತ್ತಿರುವ ಆ ಮುರನನ್ನು ನೋಡಿದರು.

೭೩. ಹೀಗೆ ಗರ್ಜಿಸುತ್ತ ಬಂದು ಆ ದೇವತೆಗಳೆಲ್ಲರನ್ನೂ ಹೊಡೆಯಲು ಅವರೆಲ್ಲರೂ ಸಿಕ್ಕದೆ ಓಡಿಹೋದರು. ಅನಂತರ ಹರಿಯನ್ನು ನೋಡಿ ನಿಲ್ಲು! ನಿಲ್ಲು! ಎಂದು ಗರ್ಜಿಸಿದನು. ಭಗವಂತನಾದ ವಿಷ್ಣುವೂ ಕೂಡ ಕೋಪದಿಂದ ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು ಇಂತೆಂದನು.

೭೪. ಭಗವಂತನು ಹೇಳಿದನು–ಎಲೋ! ದುಷ್ಟನಾದ ದಾನವನೆ! ನನ್ನ ತೋಳುಗಳನ್ನು ನೋಡು. ಎಂದು ವಿಷ್ಣುವು ಘರ್ಜಿಸಲು ದಾನವರೆಲ್ಲರೂ ವಿಷ್ಣುವಿನ ಮೇಲೆ ಬಿದ್ದರು. ವಿಷ್ಣುವು ಉತ್ತಮವಾದ ಬಾಣಗಳಿಂದ ಆ ದಾನವರೆಲ್ಲರನ್ನೂ ಹೊಡೆಯಲು ಅವರೆಲ್ಲರೂ ಭಯಗೊಂಡರು.

೭೫. ಅನಂತರ ದೈತ್ಯರ ಸೈನ್ಯದಮೇಲೆ ವಿಷ್ಣುವು ಚಕ್ರವನ್ನು ಬಿಡಲು ಅದರಿಂದ ಕತ್ತರಿಸಲ್ಪಟ್ಟು ಅನೇಕರು ಸತ್ತರು.

ತೇನ ಚ್ಛಿನ್ನಾಸ್ತು ಶತಶೋ ಬಹವೋ ನಿಧನಂ ಗತಾಃ ।
ಏಕೋಽಪಿ ದಾನವಸ್ತತ್ರ ಯುದ್ಧ್ಯಮಾನೋ ಮುಹುರ್ಮುಹುಃ ॥ ೭೬ ॥

ನಷ್ಟಾಃ ಸರ್ವೇ ಸುರಾಸ್ತೇನ ನಿರ್ಜಿತೋ ಮಧುಸೂದನಃ ।
ನಿರ್ಜಿತಸ್ತೇನ ದೈತ್ಯೇನ ಬಾಹುಯುದ್ಧಮಯಾಚತ ॥ ೭೭ ॥

ಬಾಹುಯುದ್ಧಂ ಕೃತಂ ತೇನ ದಿವ್ಯಂ ವರ್ಷಸಹಸ್ರಕಂ ।
ವಿಷ್ಣುಶ್ಚಿನ್ತಾಪ್ರಪನ್ನಶ್ಚ ನಷ್ಟಾಸ್ಸರ್ವಾಶ್ಚ ದೇವತಾಃ ॥ ೭೮ ॥

ವಿಷ್ಣುಶ್ಚ ನಿರ್ಜಿತಸ್ತೇನ ಗತೋ ಬದರಿಕಾಶ್ರಮಂ ।
ಗುಹಾ ಸಿಂಹಾವತೀ ನಾಮ್ನಾ ತತ್ರ ಸುಪ್ತೋ ಜನಾರ್ದನಃ ॥ ೭೯ ॥

---

೭೬. ಆಗ ಆ ಮುರಾಸುರನೇ ಅವನೊಡನೆ ಅನೇಕಬಾರಿ ಯುದ್ಧಕ್ಕೆ ನಿಂತು ದೇವತೆಗಳೊಡನೆಯೂ ಯುದ್ಧಮಾಡಿದನು. ದೇವತೆಗಳು ಆತನ ಹೊಡೆತವನ್ನು ತಡೆಯಲಾರದೆ ಓಡಿಹೋದರು. ಕೊನೆಗೆ ವಿಷ್ಣುವೂ ಸೋತು ಹೋದನು.

೭೭. ಕೊನೆಗೆ ಆ ದೈತ್ಯನಿಂದ ಜಯಿಸಲ್ಪಟ್ಟ ಕೃಷ್ಣನು ಬಾಹುಯುದ್ಧ ಮಾಡೋಣವೆಂದು ಕೇಳಿದನು.

೭೮. ಬಾಹುಯುದ್ಧವೂ ಕೂಡ ದೇವತೆಗಳ ಸಾವಿರ ವರ್ಷಗಳವರೆಗೂ ನಡೆಯಿತು. ಈ ದಾನವನ ಬಲವನ್ನು ತಿಳಿದು ವಿಷ್ಣುವು ಇವನನ್ನು ಜಯಿಸು ವುದು ಹೇಗೆಂದು ಚಿನ್ತೆಗೊಳಗಾದನು. ಇದನ್ನು ನೋಡಿ ದೇವತೆಗಳು ಹೊರಟು ಹೋದರು. ದೇವತೆಗಳೆಲ್ಲರೂ ಹೊರಟುಹೋಗಿರುವರಲ್ಲಾ ! ಎಂದು ಯೋಚಿ ಸುತ್ತ ತಾನೂ ಸೋತನು.

೭೯. ಬಾಹುಯುದ್ಧದಲ್ಲಿಯೂ ಸೋತ ವಿಷ್ಣುವು ಹೆದರಿಕೊಂಡು ಬದರಿ ಕಾಶ್ರಮಕ್ಕೆ ಓಡಿದನು. ಅಲ್ಲಿ ಒಂದು " ಸಿಂಹಾವತೀ " ಎಂಬ ದೊಡ್ಡ ಗುಹೆ ಯಿರುವುದು. ಅದರೊಳಗೆ ಹೋಗಿ ಮಲಗಿಕೊಂಡನು.

ಯೋಜನದ್ವಾದಶವತೀ ಏಕದ್ವಾರಾ ಚ ಪಾಂಡವ ।
ತಸ್ಯಾಂ ವಿಷ್ಣುಃ ಪ್ರಸುಪ್ತಶ್ಚ ದಾನವೋ ಹಂತುಮುದ್ಯತಃ ॥ ೮೦ ॥

ಮಹಾಯುದ್ಧೇನ ತೇನೈವ ಶ್ರಾನ್ತೋಽಸೌ ಯೋಗಮಾಯಯಾ ।
ದಾನವಃ ಪೃಷ್ಠತೋ ಲಗ್ನಃ ಪ್ರವಿಷ್ಟಸ್ಸ ತದಾ ಗುಹಾಂ ॥ ೮೧ ॥

ಪ್ರಸುಪ್ತಂ ತತ್ರ ತಂ ದೃಷ್ಟ್ವಾ ದಾನವೋ ಹರ್ಷಮಾಗತಃ ।
ಇತ್ಥಂ ತಂ ನಿರ್ಜಿತಂ ಮತ್ವಾ ಪ್ರವಿಷ್ಟಂ ಶಂಕಯಾ ಹರಿಂ ॥ ೮೨ ॥

ನಿಸ್ಸಂದೇಹಂ ಹನಿಷ್ಯಾಮಿ ದಾನವಾನಾಂ ಭಯಂಕರಂ ।
ನಿರ್ಗತಾ ಕನ್ಯಕಾ ತತ್ರ ವಿಷ್ಣುದೇಹಾದ್ಯುಧಿಷ್ಠಿರ ॥ ೮೩ ॥

ಸುಸೌಭಾಗ್ಯಾ ರೂಪವತೀ ದಿವ್ಯಪ್ರಹರಣಾಯುಧಾ ।
ತಸ್ಯ ತೇಜೋಂಶಸಂಭೂತಾ ಮಹಾಬಲಪರಾಕ್ರಮಾ ॥ ೮೪ ॥

---

೮೦. ಆ ಗುಹೆಯು ಹನ್ನೆರಡುಯೋಜನಗಳ ಉದ್ದವಿರುತ್ತದೆ. ಅದಕ್ಕೆ ಒಂದೇ ಬಾಗಿಲು. ಈ ಮುರನು ವಿಷ್ಣುವು ಅಲ್ಲಿ ಮಲಗಿರುವುದನ್ನು ತಿಳಿದು ಅವನನ್ನು ಕೊಲ್ಲಲು ಅಲ್ಲಿಗೆ ಹಿಂಬಾಲಿಸಿ ಹೋದನು.

೮೧. ಈ ಮಹಾಯುದ್ಧದಿಂದ ಬಳಲಿದ ವಿಷ್ಣುವು ಯೋಗಮಾಯೆಯನ್ನಾಶ್ರಯಿಸಿ ಅಲ್ಲಿ ಹೋಗಿ ಮಲಗಿರಲು ಹಿಂದೆಯೇ ಈ ದಾನವನು ಆ ಗುಹೆಗೂ ಹೋದನು.

೮೨. ಅಲ್ಲಿ ಈ ವಿಷ್ಣುವು ಮಲಗಿರುವುದನ್ನು ನೋಡಿ ದಾನವನು ಸಂತೋಷಗೊಂಡನು. ವಿಷ್ಣುವು ಸೋತು ಇನ್ನುಮೇಲೆ ತನ್ನನ್ನು ಕೊಂದಾನೆಂಬ ಶಂಕೆಯಿಂದ ಇಲ್ಲಿಗೆ ಬಂದು ಮಲಗಿರುವನು. ಈತನು ದಾನವರಿಗೆ ಭಯಂಕರನು. ಈಗ ಸೋತು ಸಿಕ್ಕಿರುವನು. ಇವನನ್ನು ಕೊಂದುಹಾಕುತ್ತೇನೆ. ಸಂದೇಹವಿಲ್ಲ. ದಾನವರಿಗೆ ಭಯವನ್ನು ತಪ್ಪಿಸುತ್ತೇನೆ. ಎಂದುಕೊಂಡನು.

೮೩-೮೪. ಈ ಮುರನು ವಿಷ್ಣುವನ್ನು ಕೊಲ್ಲಲು ಹೋದಾಗ ಆ ವಿಷ್ಣುವಿನ ದೇಹದಿಂದ ಸುಂದರಿಯೂ ಲಕ್ಷಣವತಿಯೂ ಆದ ಉತ್ತಮವಾದ ಆಯುಧಗಳನ್ನು ಹಿಡಿದಿರುವ ಪರಾಕ್ರಮಶಾಲಿನಿಯಾದ ಒಬ್ಬ ಕನ್ನಿಕೆಯು ಆವನ ಅಂಶದಿಂದ ಹುಟ್ಟಿದಳು.

ದೃಷ್ಟ್ವಾ ಸಾ ದಾನವೇಂದ್ರೇಣ ಮುರನಾಮ್ನಾ ಯುಧಿಷ್ಠಿರ ।
ಯುದ್ಧಂ ಸಮಾಹಿತಂ ತೇನ ಸ್ತ್ರಿಯಾ ಚೈವ ಪ್ರಯಾಚಿತಂ ॥ ೮೫ ॥

ಕನ್ಯಕಾ ಯುಧ್ಯತೇ ತತ್ರ ಸರ್ವಯುದ್ಧವಿಶಾರದಾ ।
ಹುಂಕಾರೈರ್ಭಸ್ಮಸಾಜ್ಜಾತೋ ಮುರನಾಮಾ ಮಹಾಸುರಃ ॥ ೮೬ ॥

ನಿಹತೇ ದಾನವೇ ತಸ್ಮಿನ್ ತತ್ರ ದೇವಸ್ತ್ವಬುದ್ಧ್ಯತ ।
ಪತಿತಂ ದಾನವಂ ದೃಷ್ಟ್ವಾ ತತೋ ವಿಸ್ಮಯಮಾಗತಃ ॥ ೮೭ ॥

॥ ವಿಷ್ಣುರುವಾಚ ॥

ಕೇನಾಯಂ ಚ ಹತೋ ರೌದ್ರೋ ಹ್ಯತ್ಯುಗ್ರೋ ಮಮ ಶತ್ರುಕಃ ।
ಅತ್ಯುಗ್ರಂ ಚ ಕೃತಂ ಕರ್ಮ ಮಮ ಕಾರುಣ್ಯತಾ ಕೃತಾ ॥ ೮೮ ॥

---

೮೫. ದಾನವನು ಅವಳನ್ನು ನೋಡಿ ಕೃಷ್ಣನೊಡನೆ ಮಾಡತಕ್ಕ ಯುದ್ಧದಲ್ಲಿ ಮನಸ್ಸನ್ನು ಹಿಂದಿರುಗಿಸಲು ಆಕೆಯು ನನ್ನೊಡನೆ ಯುದ್ಧಮಾಡೆಂದು ಕೇಳಿದಳು.

೮೬. ಯುದ್ಧದಲ್ಲಿ ಗಟ್ಟಿಗಳಾದ ಪ್ರವೀಣಳಾದ ಆ ಕನ್ನಿಕೆಯು ಯುದ್ಧ ಮಾಡುತ್ತ ಕೊನೆಗೆ ಹುಂಕಾರಮಾಡಿ ಆ ಮುರನನ್ನು ಬೂದಿಮಾಡಿ ಹಾಕಿದಳು.

೮೭. ಆಕೆಯು ದಾನವನನ್ನು ಕೊಂದಮೇಲೆ ಈ ವಿಷ್ಣುವು ಎಚ್ಚರಗೊಂಡನು. ಈ ದಾನವನು ಸತ್ತುಬಿದ್ದಿರುವುದನ್ನು ನೋಡಿ ಸ್ವಾಮಿಯು ಆಶ್ಚರ್ಯಗೊಂಡನು.

೮೮, ವಿಷ್ಣುವು ಹೇಳಿದನು– ನನಗೆ ಶತ್ರುವಾದ ಬಹುಕ್ರೂರನಾದ ಈ ದಾನವನನ್ನು ಯಾರು ಕೊಂದರು? ಬಹು ಕಠಿಣವಾದ ಕೆಲಸವನ್ನೇ ಮಾಡಿರುವರು. ನನ್ನಮೇಲೆ ಅವರು ಬಹು ಕರುಣೆಯನ್ನು ಮಾಡಿರುವರು.

|| ಕನ್ಯೋವಾಚ ||

ತೇನ ದೇವಾಶ್ಚ ಗಂಧರ್ವಾಃ ಸ ಯಕ್ಷೋರಗರಾಕ್ಷಸಾಃ ।
ಇಂದ್ರಾದ್ಯಾಸ್ಸಕಲಾ ಜಿತ್ವಾ ಸ್ವರ್ಗಾಚ್ಚೈವ ನಿರಾಕೃತಾಃ || ೮೯ ||

ಹರಿಸ್ಸುಪ್ತೋ ಮಯಾ ಪೃಷ್ಟೋ ಮುರಃ ಪೃಷ್ಠೇ ಸಮಾಗತಃ ।
ಸಂಹರಿಷ್ಯಾಮಿ ತ್ರೈಲೋಕ್ಯಂ ಸುಪ್ತೇ ಚೈವ ಜನಾರ್ದನೇ || ೯೦ ||

|| ಶ್ರೀ ಕೃಷ್ಣ ಉವಾಚ ||

ತಸ್ಯಾಸ್ತದ್ವಚಸಂ ಶ್ರುತ್ವಾ ವಿಷ್ಣುರ್ವಚನಮಬ್ರವೀತ್ || ೯೧ ||

|| ವಿಷ್ಣುರುವಾಚ ||

ಅಹಂ ಚ ನಿರ್ಜಿತೋ ಯೇನ ಕಥಂ ಸೋಽಪಿ ತ್ವಯಾ ಜಿತಃ || ೯೨ ||

|| ಏಕಾದಶ್ಯುವಾಚ ||

ತ್ವತ್ಪ್ರಸಾದಾಚ್ಚ ಭೋಃ ಸ್ವಾಮಿನ್ ಮಹಾದೈತ್ಯೋ ಮಯಾ ಹತಃ||೯೩||

---

೮೯–೯೦. ಕನ್ಯೆಯು ಹೇಳಿದಳು–ಆ ಮುರನು ದೇವತೆಗಳನ್ನೂ, ಗಂಧರ್ವರನ್ನೂ, ಯಕ್ಷರನ್ನೂ, ರಾಕ್ಷಸರನ್ನೂ, ಜಯಿಸಿ ಇಂದ್ರಾದಿ ದೇವತೆಗಳನ್ನೂ ಸ್ವರ್ಗದಿಂದ ಓಡಿಸಿದ್ದನು. ಹರಿಯಾದ ನೀನು ಬಂದು ಈ ಗುಹೆಯಲ್ಲಿ ಮಲಗಿರುವುದನ್ನೂ ನಿನ್ನನ್ನು ಹುಡುಕಿಕೊಂಡು ಆ ಮುರನು ನಿನ್ನ ಹಿಂದೆ ಬಂದುದನ್ನೂ ನೋಡಿದೆನು. ಅವನು ಹರಿಯಮೇಲೆ ಬೀಳುವುದರಲ್ಲಿದ್ದನು. ಅದನ್ನು ನೋಡಿ ನಾನು ಆತನನ್ನು ಕೊಂದೆನು. ಹರಿಯು ಮಲಗಿರುವಾಗ ತೊಂದರೆ ಕೊಡುವ ಮೂರುಲೋಕವನ್ನೂ ಕೂಡ ನಾನು ನಾಶಮಾಡಬಲ್ಲೆ.

೯೧. ಕೃಷ್ಣನು ಹೇಳಿದನು– ಆಕೆಯ ಮಾತನ್ನು ಕೇಳಿ ವಿಷ್ಣುವು ಇಂತೆಂದನು.

೯೨. ವಿಷ್ಣುವು ಹೇಳಿದನು–ನನ್ನನ್ನೂ ಜಯಿಸಿರುವ ಮುರಾಸುರನನ್ನು ನೀನು ಹೇಗೆ ಕೊಂದೆ ?

೯೩. ಏಕಾದಶಿಯು ಹೇಳಿದಳು–ಎಲೈ ಸ್ವಾಮಿಯೆ! ನಿನ್ನ ಪ್ರಸಾದದಿಂದಲೇ ಆ ದೈತ್ಯನನ್ನು ನಾನು ಕೊಂದೆನು.

|| ಶ್ರೀ ಭಗವಾನುವಾಚ ||

ಅನಂತಂ ತ್ರಿಷು ಲೋಕೇಷು ಮುನಯೋ ದೇವತಾ ಗತಾಃ ।
ಬ್ರೂಹಿ ತ್ವಂ ಚ ಮಯಾ ಭದ್ರೇ ಯತ್ತೇ ಮನಸಿ ವರ್ತತೇ ।
ದದಾಮಿ ಚ ನ ಸಂದೇಹೋ ಯತ್ಸುರೈರಪಿ ದುರ್ಲಭಂ || ೯೪ ||

|| ಏಕಾದಶ್ಯುವಾಚ ||

ಯದಿ ತುಷ್ಟೋಽಸಿ ಮೇ ದೇವ ಸತ್ಯಮುಕ್ತಂ ಜನಾರ್ದನ ।
ವರಮೇಕಂ ತು ವಾಂಛಾಮಿ ಹೃದಯೇ ಚ ಜಗತ್ಪತೇ || ೯೫ ||

ಪ್ರಾರ್ಥಯಾಮಿ ಚ ದೇವೇಶ ಈಪ್ಸಿತಂ ಚ ಮಯಾ ಪ್ರಭೋ ।
ಯದಿ ಸತ್ಯಂ ಜಗನ್ನಾಥ ತಿಸ್ರೋ ವಾಚೋ ದದಾಸಿ ಮೇ || ೯೬ ||

|| ಶ್ರೀ ಭಗವಾನುವಾಚ ||

ಸತ್ಯಂ ಸತ್ಯಂ ಮಯಾ ಪ್ರೋಕ್ತಂ ಅವಶ್ಯಂ ತವ ಸುವ್ರತೇ ।
ತಿಸ್ರೋ ವಾಚೋ ಮಯಾ ದತ್ತಾ ನ ಚಾವಾಕ್ಯಂ ಭವೇದಿಹ || ೯೭ ||

---

೯೪. ಭಗವಂತನು ಹೇಳಿದನು–ಎಲೈ ಮಂಗಳಶೀಲಳೆ! ಮೂರುಲೋಕದಲ್ಲಿರುವವರೂ, ಮುನಿಗಳೂ, ದೇವತೆಗಳೂ, ಕೂಡ ನಿನ್ನಿಂದ ಅನಂತ ಉಪಕಾರವನ್ನು ಹೊಂದಿದರು. ನಿನ್ನ ಮನಸ್ಸಿನಲ್ಲಿರುವುದನ್ನು ಹೇಳು. ದೇವತೆಗಳಿಗೂ ಕೂಡ ಕೊಡಲು ಅಸಾಧ್ಯವಾದಂಥದಾದರೂ, ಆ ವರವನ್ನು ಕೊಡುತ್ತೇನೆ. ಕೇಳಿಕೋ?

೯೫-೯೬. ಏಕಾದಶಿಯು ಹೇಳಿದಳು–ಎಲೈ ದೇವದೇವನೆ! ನೀನು ಸಂತೋಷಪಟ್ಟಿದ್ದೂ ನೀನು ಹೇಳುವ ಮಾತೂ ಸತ್ಯವಾಗಿದ್ದರೆ ನನ್ನ ಮನಸ್ಸಿನಲ್ಲಿರುವ ಒಂದು ವಿಷಯವನ್ನು ಹೇಳುತ್ತೇನೆ. ಅದೇನೆಂದರೆ—ನನಗೆ ಬೇಕಾದುದನ್ನು ನಾನು ಕೇಳಿಕೊಳ್ಳುತ್ತೇನೆ ನನಗೆ ನಿಶ್ಚಯವಾಗಿ ಕೊಡುವಪಕ್ಷದಲ್ಲಿ ಮೂರುಬಾರಿ ಕೊಡುತ್ತೇನೆಂದು ಮಾತುಕೊಡು.

೯೭. ಭಗವಂತನು ಹೇಳಿದನು–ಎಲೈ ಸುವ್ರತೆಯೆ! ಸತ್ಯವು. ಸತ್ಯವು. ನಾನು ಸತ್ಯವಾಗಿಯೂ ಅವಶ್ಯಕವಾಗಿಯೂ ಕೊಡುತ್ತೇನೆ. ಮೂರುಬಾರಿ ಹೇಳಿದ್ದೇನೆ. ಈ ವಿಷಯದಲ್ಲಿ ಸುಳ್ಳಾಡುವುದಿಲ್ಲ.

|| ಏಕಾದಶ್ಯುವಾಚ ||

ತ್ರಿಭುವನೇಷು ದೇವೇಶ ಚತುರ್ಯುಗೇಷು ಸಾಂಪ್ರತಂ ।
ತ್ರಿಷು ಲೋಕೇಷು ಸರ್ವತ್ರ ತಾದೃಶಂ ಕುರು ಮೇ ಪ್ರಭೋ || ೯೮ ||

ಸರ್ವತೀರ್ಥಪ್ರಧಾನಂ ಹಿ ಸರ್ವವಿಘ್ನವಿನಾಶಿನೀ ।
ಸರ್ವಸಿದ್ಧಿಕರೀ ದೇವೀ ತ್ವತ್ಪ್ರಸಾದಾತ್ ಭವಾಮ್ಯಹಂ || ೯೯ ||

ಮಾಮುಪೋಷ್ಯಂತಿ ಯೇ ಭಕ್ತ್ಯಾ ತವ ಭಕ್ತ್ಯಾ ಜನಾರ್ದನ ।
ಸರ್ವಸಿದ್ಧಿರ್ಭವೇತ್ತೇಷಾಂ ಯದಿ ತುಷ್ಟೋಽಸಿ ಮೇ ಪ್ರಭೋ || ೧೦೦ ||

ಉಪವಾಸಂ ಚ ನಕ್ತಂ ಚ ಏಕಭುಕ್ತಂ ಕರೋತಿ ಯಃ ।
ತಸ್ಯ ವಿತ್ತಂ ಚ ಧರ್ಮಂ ಚ ಮೋಕ್ಷಂ ವೈ ದೇಹಿ ಮಾಧವ || ೧೦೧ ||

---

೯೮. ಏಕಾದಶಿಯು ಹೇಳಿದಳು—ಎಲೈ ದೇವೇಶನೆ! ಮೂರುಲೋಕಗಳಲ್ಲಿಯೂ, ಎಲ್ಲಾ ಕಾಲಗಳಲ್ಲಿಯೂ, ಕೂಡ ನನ್ನನ್ನು ನಾನು ಹೇಳಿದಂತೆ ಆಗುವ ಹಾಗೆ ಮಾಡು.

೯೯. ನಾನು, ಎಲ್ಲಾತೀರ್ಥಗಳಿಗಿಂತಲೂ, ಮುಖ್ಯಳಾಗಿರಬೇಕು. ಸರ್ವವಿಘ್ನಗಳನ್ನೂ ನಾಶಮಾಡುವವಳಾಗಬೇಕು. ಎಲ್ಲಾಸಿದ್ಧಿಯನ್ನೂ ಕೊಡುವವಳಾಗಿ ಆಗಬೇಕು. ಇದೆಲ್ಲವೂ ಆಗುವಂತೆ ನನಗೆ ಅನುಗ್ರಹಮಾಡು.

೧೦೦. ಎಲೈ ಜನಾರ್ದನನೆ! ನಿನ್ನಲ್ಲಿ ಭಕ್ತಿಯಿಟ್ಟುಕೊಂಡು ಅಂತೆಯೇ ನನ್ನಲ್ಲಿಯೂ ಭಕ್ತಿಯನ್ನಿಟ್ಟು ಯಾರು ನನ್ನ ಈದಿನದಲ್ಲಿ ಉಪವಾಸಮಾಡುತ್ತಾರೆಯೊ ಅವರಿಗೆ ಎಲ್ಲಾ ಸಿದ್ಧಿಗಳೂ ಕೈಗೂಡಬೇಕೆಂದು ವರವನ್ನು ನೀನು ಸಂತೋಷಪಟ್ಟದ್ದರೆ ಕೊಡು.

೧೦೧. ನನ್ನ ಏಕಾದಶಿದಿನದಲ್ಲಿ, ಯಾರು ಉಪವಾಸವನ್ನಾಗಲೀ ನಕ್ತವನ್ನಾಗಲೀ ಏಕಭುಕ್ತವನ್ನಾಗಲಿ ಮಾಡುವರೋ ಅವರಿಗೆ ಹಣ ಧರ್ಮ ಮೋಕ್ಷಗಳನ್ನು ಕೊಡು.

|| ವಿಷ್ಣುರುವಾಚ ||

ಯತ್ತ್ವಂ ವದಸಿ ಕಲ್ಯಾಣಿ ತತ್ಸರ್ವಂ ಚ ಭವಿಷ್ಯತಿ |
ಸರ್ವಾನ್ ಮನೋರಥಾನ್ ಭದ್ರೇ ದಾಸ್ಯಸಿ ತ್ವಂ ಚ ನಾನ್ಯಥಾ || ೧೦೨ ||

|| ಏಕಾದಶ್ಯುವಾಚ ||

ಮಮ ಭಕ್ತಾಶ್ಚ ಯೇ ಲೋಕೇ ಯೇ ಚ ಭಕ್ತಾಸ್ತು ಕಾರ್ತಿಕೇ |
ಚತುರ್ಯುಗೇಷು ವಿಖ್ಯಾತಾಃ ತ್ರಿಷು ಲೋಕೇಷು ವೈ ಪ್ರಭೋ|| ೧೦೩ ||

|| ಶ್ರೀ ಭಗವಾನುವಾಚ ||

ತ್ವಾಂ ಚ ಶಕ್ತಿಮಹಂ ಮನ್ಯೇ ಏಕಾದಶೀವ್ರತಸ್ಥಿತಾಃ |
ಮಮ ಪೂಜಾಂ ಕರಿಷ್ಯಂತಿ ಮೋಕ್ಷಗಾಸ್ತೇ ನ ಸಂಶಯಃ || ೧೦೪ ||

ತೃತೀಯಾ ಚಾಷ್ಟಮೀ ಚೈವ ನವಮೀ ಚ ಚತುರ್ದಶೀ |
ಏಕಾದಶೀ ವಿಶೇಷೇಣ ತಿಥಿರೇಷಾ ಹರಿಪ್ರಿಯಾ || ೧೦೫ ||

---

೧೦೨. ವಿಷ್ಣುವು ಹೇಳಿದನು–ಎಲೈ ಕಲ್ಯಾಣಿಯೆ! ನೀನು ಹೇಳಿದುದೆಲ್ಲವೂ ಹಾಗೆಯೇ ಆಗುವುದು. ನೀನು ಆ ವ್ರತಿಗಳಿಗೆ ಎಲ್ಲಾ ಇಷ್ಟಾರ್ಥಗಳನೂ ಕೊಡುತ್ತೀಯೆ. ಅದಕ್ಕೆ ಬದಲಿಲ್ಲ.

೧೦೩. ಏಕಾದಶಿಯು ಹೇಳಿದಳು–ಲೋಕದಲ್ಲಿ ನನ್ನ ಭಕ್ತರು, ಕಾರ್ತಿಕ ಮಾಸದಲ್ಲಿ ಭಕ್ತರಾದವರು ಇವರು ನಾಲ್ಕು ಯುಗಗಳಲ್ಲಿಯೂ ಮೂರು ಲೋಕ ಗಳಲ್ಲಿಯೂ ಪ್ರಸಿದ್ಧರಾಗಬೇಕು.

೧೦೪. ಶ್ರೀ ಭಗವಂತನು ಹೇಳಿದನು–ಎಲೈ ಏಕಾದಶಿಯೆ! ನೀನು ಶಕ್ತಿ ದೇವತೆ ಎಂಬುದನ್ನು ಬಲ್ಲೆ. ಯಾರು ಏಕಾದಶಿ ವ್ರತವನ್ನು ಮಾಡುತ್ತ ನನ್ನ ಪೂಜೆಯನ್ನು ಮಾಡುತ್ತಾರೆಯೋ ಅವರು ಮೋಕ್ಷವನ್ನು ಹೊಂದುತ್ತಾರೆ. ಸಂಶಯವಿಲ್ಲ.

೧೦೫. ತದಿಗೆ, ಅಷ್ಟಮಿ, ನವಮಿ, ಚತುರ್ದಶಿ ಏಕಾದಶಿ ತಿಥಿಗಳೆಲ್ಲವೂ ನನಗೆ ಪ್ರೀತಿಪಾತ್ರವಾದುವು. ಆದರೆ ಎಲ್ಲದಕ್ಕಿಂತಲೂ ನನಗೆ ಏಕಾದಶಿತಿಥಿಯು ಅತ್ಯಂತ ಪ್ರಿಯವಾದುದು.

**ಸರ್ವತೀರ್ಥಾಧಿಕಂ ಪುಣ್ಯಂ ಸತ್ಯಂ ಸತ್ಯಂ ನ ಸಂಶಯಃ ।**
**ಶತ್ರೂರ್ ಹಂಸ್ಯಪರಾಸ್ತಸ್ಯ ದದಾಸಿ ಪರಮಾಂ ಗತಿಂ ॥**
**ತ್ವಂ ಹಂಸಿ ಸರ್ವವಿಘ್ನಾನಿ ಸರ್ವಸಿದ್ಧಿವರಪ್ರದಾ ॥ ೧೦೬ ॥**

**॥ ಶ್ರೀ ಕೃಷ್ಣ ಉವಾಚ ॥**

**ಏವಂ ದತ್ವಾ ವರಂ ತಸ್ಯೈ ತಿಸ್ರೋ ವಾಚೋ ನ ಸಂಶಯಃ ।**
**ಹೃಷ್ಟಾ ಪುಷ್ಟಾ ಚ ಸಂಜಾತಾ ಏಕಾದಶೀ ಮಹಾವ್ರತಂ ॥ ೧೦೭ ॥**

**ಉಭಯೋಃ ಪಕ್ಷಯೋಃ ಪಾರ್ಥ ತುಲ್ಯಾ ಏಕಾದಶೀ ಶುಭಾ ।**
**ಶುಕ್ಲಾಯಾಶ್ಚೈವ ಕೃಷ್ಣಾಯಾ ವಿಭೇದಂ ನೈವ ಕಾರಯೇತ್ ॥ ೧೦೮ ॥**

**ವಿಭೇದೋ ನೈವ ಕರ್ತವ್ಯಃ ಸಮಸ್ತವ್ರತಕಾರಿಭಿಃ ।**
**ದಿವಾ ವಾ ಯದಿ ವಾ ರಾತ್ರೌ ಶೃಣೋತಿ ಭಕ್ತಿತತ್ಪರಃ ॥ ೧೦೯ ॥**

---

೧೦೬. ಆ ಏಕಾದಶಿಯ ದಿನ ಉಪವಾಸ ಮಾಡಿದರೆ ಎಲ್ಲಾ ತೀರ್ಥಗಳಲ್ಲಿ ಸ್ನಾನಮಾಡಿದುದಕ್ಕಿಂತಲೂ ಹೆಚ್ಚು ಪುಣ್ಯವು ಬರುವುದು. ಅವರ ಶತ್ರುಗಳನ್ನು ನಾಶಮಾಡುತ್ತೀಯೆ. ಅವರಿಗೆ ಉತ್ತಮಗತಿಯನ್ನು ಕೊಡುತ್ತೀಯೆ. ವರಗಳನ್ನು ಕೊಡುತ್ತೀಯೆ. ವಿಘ್ನಗಳನ್ನು ನಾಶಮಾಡುತ್ತೀಯೆ. ಇದರಲ್ಲಿ ಸಂಶಯವಿಲ್ಲ.

೧೦೭. ಶ್ರೀ ಕೃಷ್ಣನು ಹೇಳಿದನು— ಈ ರೀತಿಯಾಗಿ ಸ್ವಾಮಿಯು ಆ ಏಕಾದಶಿಗೆ ಮೂರುಬಾರಿ ಹೇಳಿ ವರವನ್ನು ಕೊಟ್ಟನು. ಇದರಿಂದ ಆ ಏಕಾದಶೀ ಮಹಾವ್ರತವು ಸಂತುಷ್ಟಳಾಗಿಯೂ ವೃದ್ಧಿಗೊಂಡವಳಾಗಿಯೂ ಆದಳು.

೧೦೮. ಎಲೈ ಧರ್ಮಜನೆ! ಶುಕ್ಲ ಕೃಷ್ಣ ಪಕ್ಷಗಳ ಏಕಾದಶಿಗಳೆರಡೂ ಒಂದೇ ಸಮವಾದುವು. ಆದುದರಿಂದ ಶುಕ್ಲ ಕೃಷ್ಣ ಏಕಾದಶಿಗಳಿಗೆ ಭೇದವನ್ನು ಕಲ್ಪಿಸಕೂಡದು.

೧೦೯. ಈ ವ್ರತವನ್ನು ಮಾಡುವವರು ಈ ಎರಡು ಏಕಾದಶಿಗಳಲ್ಲಿ ಭೇದ ವನ್ನು ಕಲ್ಪಿಸಬಾರದು. ಹಗಲಿನಲ್ಲಾಗಲೀ ರಾತ್ರಿಯಲ್ಲಾಗಲೀ ಅವಕ್ಕೆ ಭೇದವನ್ನು ಕಲ್ಪಿಸಬಾರದು. ಇದನ್ನು ಭಕ್ತಿಯಿಂದ ಕೇಳಬೇಕು.

ತಿಥಿರೇಕಾ ಭವೇತ್ಸರ್ವಾ ಪಕ್ಷಯೋರುಭಯೋರಪಿ ।
ಉದಯೈಕಾದಶೀ ಸ್ವಲ್ಪಾ ಹ್ಯಂತೇ ಚೈವ ತ್ರಯೋದಶಿ ॥ ೧೧೦ ॥

ಮಧ್ಯೇ ತು ದ್ವಾದಶೀ ಪೂರ್ಣಾ ತ್ರಿಸ್ಪೃಶಾ ಸಾ ಹರಿಪ್ರಿಯಾ ।
ಏಕಾಮುಪೋಷಯೇತ್ತಾಂ ವೈ ಸಹಸ್ರೈಕಾದಶೀ ಫಲಂ ॥ ೧೧೧ ॥

ಸಹಸ್ರಗುಣಿತಂ ಹ್ಯೇವಂ ದ್ವಾದಶ್ಯಾಂ ಪಾರಣೇ ಕೃತೇ ।
ಅಷ್ಟಮ್ಯೈಕಾದಶೀ ಷಷ್ಠೀ ತೃತೀಯಾ ಚ ಚತುರ್ದಶೀ ॥ ೧೧೨ ॥

ಪೂರ್ವವಿದ್ಧಾ ನ ಕರ್ತವ್ಯಾ ಪರವಿದ್ಧಾಮುಪೋಷಯೇತ್ ।
ಏಕಾದಶೀ ಹ್ಯಹೋರಾತ್ರಂ ಪ್ರಭಾತೇ ಘಟಿಕಾ ಭವೇತ್ ॥ ೧೧೩ ॥

---

೧೧೦–೧೧೧. ಒಂದೇ ತಿಥಿಯು ಎರಡು ಪಕ್ಷಗಳಲ್ಲಿಯೂ ಪೂರ್ಣವಾಗಿ ಸಮವಾದುದೇ ಹೌದು. ಅದು ಪೂರ್ಣವಾದ ಏಕಾದಶಿಯು. ಉದಯದಲ್ಲಿ ಸ್ವಲ್ಪ ಏಕಾದಶಿಯಿದ್ದು ಆದಿನವೆಲ್ಲವೂ ದ್ವಾದಶಿಯಿದ್ದು ಮಾರನೆದಿನ ತ್ರಯೋದಶಿಯು ಉದಯಕಾಲದಲ್ಲಿದ್ದರೆ ಆ ಏಕಾದಶಿಗೆ ತ್ರಿಸ್ಪೃಶೆಯೆಂದು ಹೆಸರು. ಅದು ಹರಿಗೆ ಪ್ರೀತಿಪಾತ್ರವಾದುದು. ಅಂತಹ ಒಂದು ಏಕಾದಶಿಯಲ್ಲಿ ಉಪವಾಸಮಾಡಿದರೆ ಸಾವಿರಏಕಾದಶಿಗಳಲ್ಲಿ ಉಪವಾಸಮಾಡಿದ ಫಲವು ಬರುತ್ತದೆ.

೧೧೨-೧೧೪. ಈಏಕಾದಶಿದಿನ ಉಪವಾಸವಿದ್ದು ದ್ವಾದಶಿಯದಿನ ಪಾರಣೆ ಮಾಡಿದರೆ ಈ ತ್ರಿಸ್ಪೃಶೈಕಾದಶಿಯಲ್ಲಿ ಸಾವಿರದಷ್ಟು ಫಲವುಂಟು. ಅಷ್ಟಮಿ ಏಕಾದಶಿ, ಷಷ್ಠಿ, ತೃತೀಯ, ಚತುರ್ದಶಿಗಳು ಅವುಗಳ ಹಿಂದಿನ ತಿಥಿಗಳಿಂದ ಕೂಡಿದ್ದರೆ ಅವುಗಳ ವ್ರತಗಳನ್ನು ಮಾಡಕೂಡದು. ಮುಂದಿನವುಗಳು ಬಂದಿದ್ದರೆ ಮಾಡಬಹುದು. ಅಷ್ಟಮಿಯು ಸಪ್ತಮಿಯಿಂದ ಕೂಡಿದ್ದರೆ ಸಪ್ತಮೀವಿದ್ಧವೆಂದು ಹೆಸರು. ಇದಕ್ಕೆ ಪೂರ್ವವಿದ್ಧವೆಂದೆನ್ನುತ್ತಾರೆ. ಅಷ್ಟಮಿಯು ಇದ್ದು ನವಮಿಯು ಅಷ್ಟಮಿಯ ಮೇಲೆ ಬಂದರೆ ಪರವಿದ್ಧವೆಂದು ಹೆಸರು. ಇವುಗಳನ್ನು ಪೂರ್ವವಿದ್ಧವಾಗಿದ್ದರೆ ಮಾಡಬಾರದು. ಪರವಿದ್ಧವಾದರೆ ಆಚರಿಸಬಹುದು. ಒಂದು ದಿನ ಏಕಾದಶಿಯು ಹಗಲು ರಾತ್ರಿಯಲ್ಲಿ ಪೂರ್ಣವಾಗಿದ್ದು ಬೆಳಗ್ಗೆ ಮಾತ್ರ ಒಂದು ಘಳಿಗೆ ದಶಮಿಯಿದ್ದರೆ ಇದು ಪೂರ್ವವಿದ್ಧವಾದುದರಿಂದ ಅದನ್ನು ಬಿಡಬೇಕು. ಮಾರನೆಯದಿನ ಪ್ರಾತಃಕಾಲದಲ್ಲಿ ಸ್ವಲ್ಪ ಏಕಾದಶಿಯಿದ್ದು ದಿನವೆಲ್ಲವೂ

**ಸಾ ತಿಥಿಃ ಪರಿಹರ್ತವ್ಯಾ ಉಪೋಷ್ಯಾ ದ್ವಾದಶೀಯುತಾ ।**
**ಏವಂವಿಧಾ ಮಯಾ ಪ್ರೋಕ್ತಾ ಪಕ್ಷಯೋರುಭಯೋರಪಿ || ೧೧೪ ||**

**ಏಕಾದಶ್ಯಾಂ ಪ್ರಕುರ್ವೀತ ಹ್ಯುಪವಾಸಂ ನರಸ್ತು ಯಃ ।**
**ಸ ಯಾತಿ ವೈಷ್ಣವಂ ಸ್ಥಾನಂ ಯತ್ರಾಸ್ತೇ ಗರುಡಧ್ವಜಃ || ೧೧೫ ||**

**ಧನ್ಯಾಸ್ತೇ ಮಾನವಾ ಲೋಕೇ ವಿಷ್ಣುಭಕ್ತಿಪರಾಯಣಾಃ ।**
**ಏಕಾದಶ್ಯಾಶ್ಚ ಮಾಹಾತ್ಮ್ಯಂ ಸರ್ವಕಾಲೇಷು ಯಃ ಪಠೇತ್ || ೧೧೬ ||**

**ಗೋಸಹಸ್ರಫಲಂ ಸೋಪಿ ಪುಣ್ಯಂ ಪ್ರಾಪ್ನೋತಿ ಮಾನವಃ ।**
**ದಿವಾ ವಾ ಯದಿ ವಾ ರಾತ್ರೌ ಯೇ ವೈ ಶೃಣ್ವಂತಿ ಭಕ್ತಿತಃ || ೧೧೭ ||**

---

ದ್ವಾದಶಿಯು ಇದ್ದರೂ ಆ ಪರವಿದ್ಧವಾದ ಏಕಾದಶಿಯಲ್ಲಿ ಉಪವಾಸ ಮಾಡ ಬೇಕು. ಈರೀತಿಯಾದ ಏಕಾದಶಿಯನ್ನೇ ನಾನು ಎರಡು ಪಕ್ಷಗಳಲ್ಲಿಯೂ ಹೇಳಿರುವುದು.

೧೧೫. ಯಾವನು ಇಂಥಹ ಏಕಾದಶಿಯದಿವಸ ಉಪವಾಸಮಾಡುವನೋ ಅವನು ಗರುಡಧ್ವಜನಾದ ವಿಷ್ಣುವು ಇರುವ ವೈಕುಂಠವನ್ನು ಹೊಂದುತ್ತಾನೆ.

೧೧೬-೧೧೮. ಯಾರು ವಿಷ್ಣುಭಕ್ತಿಯಿಂದ ಕೂಡಿರುವರೋ ಅಂತಹ ಮನುಷ್ಯರು ಲೋಕದಲ್ಲಿ ಧನ್ಯರು. ಏಕಾದಶಿಯ ಮಾಹಾತ್ಮ್ಯೆಯನ್ನು ಮೂರು ಕಾಲಗಳಲ್ಲಿಯೂ ಓದುವವನು ಸಾವಿರ ಗೋದಾನಗಳ ಫಲದ ಪುಣ್ಯವನ್ನು ಹೊಂದುತ್ತಾನೆ. ಯಾರು ಈ ಏಕಾದಶಿಯ ಚರಿತ್ರೆಯನ್ನೂ ಮಹಿಮೆಯನ್ನೂ ಹಗಲೂ ರಾತ್ರಿಯೂ ಭಕ್ತಿಯಿಂದ ಕೇಳುತ್ತಾರೆಯೋ ಅವರು ಬ್ರಹ್ಮಹತ್ಯಾದಿ ಪಾಪಗಳಿಂದ ಬಿಡುಗಡೆಯನ್ನು ಹೊಂದುತ್ತಾರೆ. ಸಂಶಯವಿಲ್ಲ. ವಿಷ್ಣುವಿನ ಧರ್ಮಕ್ಕೆ ಸಮವಾದ ಧರ್ಮವೇ ಇಲ್ಲವು. ಈ ವಿಷಯವು ಎಲ್ಲ ಕಡೆಯಲ್ಲಿಯೂ

**ವಿಷ್ಣು ಧರ್ಮ ಸಮಂ ನಾಸ್ತಿ ಗೀತಾರ್ಥಂ ಚ ನೃಪೋತ್ತಮ ।**
**ಏಕಾದಶೀ ಸಮಂ ನಾಸ್ತಿ ವ್ರತಂ ಪಾಪಪ್ರಣಾಶನಂ ॥ ೧೧೮ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಶ್ರೀಕೃಷ್ಣ ಯುಧಿಷ್ಠಿರ ಸಂವಾದೇ ಉತ್ಪನ್ನೈಕಾದಶೀ ಕೃತ ಮುರುವಧೋನಾಮ ಚತುರ್ವಿಂಶೋಽಧ್ಯಾಯಸ್ಸಮಾಪ್ತಃ**

---

ಹೇಳಲ್ಪಟ್ಟಿದೆ. ಅದರಂತೆ ಏಕಾದಶೀ ವ್ರತಕ್ಕೆ ಸಮವಾದ ಪಾಪನಾಶಕವಾದ ಮತ್ತೊಂದು ವ್ರತವೂ ಇಲ್ಲವು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಶ್ರೀಕೃಷ್ಣ ಯುಧಿಷ್ಠಿರ ಸಂವಾದದಲ್ಲಿ ಏಕಾದಶಿಯು ಹುಟ್ಟಿ ಅವಳಿಂದ ಮುರನ ವಧೆಯಾದುದು ಎಂಬ ಹೆಸರಿನ ನಾಲ್ವತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಏಕಚತ್ವಾರಿಂಶೋऽಧ್ಯಾಯಃ ॥



॥ ಯುಧಿಷ್ಠಿರ ಉವಾಚ ॥

ವಂದೇ ವಿಷ್ಣುಂ ವಿಭುಂ ಸಾಕ್ಷಾಲ್ಲೋಕತ್ರಯಸುಖಾವಹಂ ।
ವಿಶ್ವೇಶಂ ವಿಶ್ವಕರ್ತಾರಂ ಪುರಾಣಂ ಪುರುಷೋತ್ತಮಂ ॥ ೧ ॥

ಪೃಚ್ಛಾಮಿ ದೇವದೇವೇಶ ಸಂಶಯೋಽಸ್ತಿ ಮಹಾನ್ಮಮ ।
ಲೋಕಾನಾಂ ಚ ಹಿತಾರ್ಥಾಯ ಪಾಪಾನಾಂ ಕ್ಷಯಹೇತವೇ ॥ ೨ ॥

ಮಾರ್ಗಶೀರ್ಷೇ ಸಿತೇ ಪಕ್ಷೇ ಭವೇದೇಕಾದಶೀ ತಥಾ ।
ಕಿನ್ನಾಮಕೋ ವಿಧಿಸ್ತಸ್ಯಾಃ ಕೋ ದೇವಸ್ತತ್ರ ಪೂಜ್ಯತೇ
ಏತದಾಚಕ್ಷ್ವ ಮೇ ಸ್ವಾಮಿನ್ ವಿಸ್ತರೇಣ ಯಥಾತಥಂ । ॥ ೩ ॥

---

## ನಲವತ್ತೊಂದನೆಯ ಅಧ್ಯಾಯವು



೧. ಯುಧಿಷ್ಠಿರನು ಹೇಳಿದನು-ಮೂರು ಲೋಕಗಳಿಗೂ ಸುಖವನ್ನುಂಟು ಮಾಡುತ್ತಿರುವ ಪ್ರಪಂಚಕ್ಕೆ ಒಡೆಯನಾದ, ಪ್ರಪಂಚವನ್ನು ಸೃಷ್ಟಿಮಾಡುವ, ಪುರುಷೋತ್ತಮನಾದ ವಿಷ್ಣುವನ್ನು ನಮಸ್ಕರಿಸುತ್ತೇನೆ.

೨. ಎಲೈ ದೇವದೇವನೆ! ನನಗೆ ಒಂದು ದೊಡ್ಡ ಸಂಶಯವಿದೆ. ಲೋಕ ಹಿತಕ್ಕೂ ಪಾಪನಾಶವಾಗುವುದಕ್ಕೂ ಅದನ್ನು ಕೇಳುತ್ತೇನೆ.

೩. ಮಾರ್ಗಶೀರ್ಷ ಮಾಸದ ಶುಕ್ಲಪಕ್ಷದಲ್ಲಿ ಏಕಾದಶಿಯು ಬರುತ್ತದೆ ಯಷ್ಟೆ. ಅದರ ಹೆಸರೇನು? ಅದರ ವಿಧಾನವೇನು? ಅದರಲ್ಲಿ ಯಾವ ದೇವರನ್ನು ಪೂಜಿಸಬೇಕು? ಎಲೈ ಸ್ವಾಮಿಯೆ! ಇದನ್ನು ನನಗೆ ವಿಸ್ತಾರವಾಗಿ ಹೇಳು.

## ॥ ಶ್ರೀಕೃಷ್ಣ ಉವಾಚ ॥

ಸಾಧು ಪೃಷ್ಟಂ ತ್ವಯಾ ರಾಜನ್ ಸಾಧು ತೇ ವಿಮಲಂ ಯಶಃ ।
ಕಥಯಿಷ್ಯಾಮಿ ರಾಜೇಂದ್ರ ಹರಿವಾಸರಮುತ್ತಮಂ ॥ ೪ ॥

ಉತ್ಪನ್ನಾ ಚಾಸಿತೇ ಪಕ್ಷೇ ದ್ವಾದಶೀ ಮಮ ವಲ್ಲಭಾ ।
ಮಾರ್ಗಶೀರ್ಷೋತ್ಪತ್ತಿರಿತಿ ಮಮ ದೇಹಸಮುದ್ಭವಾ ॥ ೫ ॥

ಸುರಾಸುರವಧಾರ್ಥಾಯ ಹ್ಯುತ್ಪನ್ನಾ ಭರತರ್ಷಭ ।
ಕಥಿತಾ ಚ ಮಯಾ ಸಾ ವೈ ತವಾಗ್ರೇ ರಾಜಸತ್ತಮ ॥ ೬ ॥

ಪೂರ್ವಾ ಚೈಕಾದಶೀ ರಾಜನ್ ತ್ರೈಲೋಕ್ಯೇ ಸಚರಾಚರೇ ।
ಮಾರ್ಗಶೀರ್ಷೇಽಸಿತೇ ಪಕ್ಷೇ ಉತ್ಪತ್ತಿರಿತಿನಾಮತಃ ॥ ೭ ॥

ಅತಃ ಪರಂ ಪ್ರವಕ್ಷ್ಯಾಮಿ ಮಾರ್ಗಶೀರ್ಷೇ ಸಿತಾ ತು ಯಾ ।
ಯಸ್ಯಾಶ್ಶ್ರವಣಮಾತ್ರೇಣ ವಾಜಪೇಯಫಲಂ ಲಭೇತ್ ॥ ೮ ॥

---

೪. ಶ್ರೀ ಕೃಷ್ಣನು ಹೇಳಿದನು– ಎಲೈ ಧರ್ಮರಾಜನೆ! ನೀನು ಚೆನ್ನಾಗಿ ಕೇಳಿದೆ. ನಿನ್ನ ಯಶಸ್ಸು ಇದರಿಂದಲೇ ನಿರ್ಮಲವಾಗಿರುವುದು. ಈ ಹರಿ ವಾಸರದ ವಿಷಯವನ್ನು ವಿಸ್ತಾರವಾಗಿ ಹೇಳುತ್ತೇನೆ

೫. ಮಾರ್ಗಶಿರ ಮಾಸದ ಕೃಷ್ಣಪಕ್ಷದಲ್ಲಿ ನನಗೆ ಪ್ರೀತಿಪಾತ್ರವಾದ ದ್ವಾದಶಿಯು ಹುಟ್ಟಿದೆ. ಅದು ನನ್ನ ದೇಹದಿಂದಲೇ ಹುಟ್ಟಿದುದು. ಅದರ ಹಸರು ಉತ್ಪತ್ತಿ ಎಂದು ಪ್ರಖ್ಯಾತವಾಗಿದೆ.

೬–೭. ಸುರಾಸುರರನ್ನು ನಾಶ ಮಾಡುವ ಏಕಾದಶಿಯು ಹುಟ್ಟಿತೆಂದು ನಿನ್ನೆದುರಿಗೆ ಮೊದಲೇ ಹೇಳಿದ್ದೇನೆ. ಆ ಏಕಾದಶಿಯು ಈ ಚರಾಚರವಾದ ಮೂರು ಲೋಕದಲ್ಲಿಯೂ ಪ್ರಸಿದ್ಧವಾಗಿದೆ. ಮಾರ್ಗಶೀರ್ಷ ಬಹುಳದಲ್ಲಿ "ಉತ್ಪತ್ತಿ" ಎಂಬ ಹೆಸರುಳ್ಳ ಒಂದು ಏಕಾದಶಿಯು ಹುಟ್ಟಿರುವುದು.

೮. ಇನ್ನು ಮುಂದೆ ಮಾರ್ಗಶೀರ್ಷ ಮಾಸದ ಶುದ್ಧದ ಏಕಾದಶಿಯನ್ನು ಹೇಳುತ್ತೇನೆ. ಅದರ ವಿಷಯವನ್ನು ಕೇಳಿದುದರಿಂದಲೇ ವಾಜಪೇಯ ಫಲವು ಬರುತ್ತದೆ.

ಮೋಕ್ಷಾ ನಾಮೇತಿ ಸಾ ಪ್ರೋಕ್ತಾ ಸರ್ವಪಾಪಹರಾ ಪರಾ ।
ದೇವಂ ದಾಮೋದರಂ ರಾಜನ್ ಪೂಜಯೇಚ್ಚ ಪ್ರಯತ್ನತಃ ॥ ೯ ॥

ತುಲಸ್ಯಾ ಮಂಜರೀಭಿಶ್ಚ ಧೂಪೈರ್ದೀಪೈಃ ಪ್ರಯತ್ನತಃ ।
ಪೂರ್ವೇಣ ವಿಧಿನಾ ಚೈವ ದಶಮ್ಯೇಕಾದಶೀ ತಥಾ ॥ ೧೦ ॥

ಮೋಕ್ಷಾ ಚೈಕಾದಶೀ ನಾಮ್ನಾ ಮಹಾಪಾತಕನಾಶಿನೀ ।
ರಾತ್ರೌ ಜಾಗರಣಂ ಕಾರ್ಯಂ ನೃತ್ಯಗೀತಸ್ತವೈರ್ನೃಪ ॥ ೧೧ ॥

ಶೃಣು ರಾಜನ್ ಪ್ರವಕ್ಷ್ಯಾಮಿ ದಿವ್ಯಾಂ ಪೌರಾಣಿಕೀಂ ಕಥಾಂ ।
ಯಸ್ಯಾಃ ಶ್ರವಣಮಾತ್ರೇಣ ಸರ್ವಪಾಪಕ್ಷಯೋ ಭವೇತ್ ॥ ೧೨ ॥

ಅಧೋಯೋನಿಗತಾಶ್ಚೈವ ಪಿತರೋ ಯಸ್ಯ ಪಾಪತಃ ।
ಅಸ್ಯಾಶ್ಚ ಪುಣ್ಯದಾನೇನ ಮೋಕ್ಷಂ ಯಾಂತಿ ನ ಸಂಶಯಃ ॥ ೧೩ ॥

---

೯. ಆ ಏಕಾದಶಿಗೆ ಮೋಕ್ಷಾ ಎಂದು ಹೆಸರು. ಅದು ಸರ್ವಪಾಪಗಳನ್ನು ನಾಶಮಾಡುತ್ತದೆ. ಆದಿನ ದಾಮೋದರದೇವರನ್ನು ಪ್ರಯತ್ನಪಟ್ಟು ಪೂಜಿಸ ಬೇಕು.

೧೦. ತುಲಸಿಯ ಗೊಂಚಲುಗಳಿಂದಲೂ ಧೂಪ ದೀಪಗಳಿಂದಲೂ ಆ ದೇವರನ್ನು ಪೂಜಿಸಬೇಕು. ದಶಮಿ ಮತ್ತು ಏಕಾದಶಿಯ ದಿನಗಳಲ್ಲಿ ಮಾಡಬೇಕಾದ ಕೆಲಸಗಳನ್ನು ಹಿಂದಿನ ದಶಮೀ ಏಕಾದಶಿ ತಿಥಿಗಳಂತೆಯೇ ಮಾಡಬೇಕು.

೧೧. ಆ ಏಕಾದಶಿಗೆ "ಮೋಕ್ಷೈಕಾದಶಿ" ಎಂದು ಹೆಸರು. ಮಹಾ ಪಾಪಗಳನ್ನು ನಾಶಮಾಡುತ್ತದೆ. ರಾತ್ರಿಯಲ್ಲಿ ನೃತ್ಯದಿಂದಲೂ ವಿಷ್ಣುವಿನ ಸ್ತೋತ್ರಗಳಿಂದಲೂ ಜಾಗರಣೆಯನ್ನು ಮಾಡಬೇಕು.

೧೨. ಎಲೈ ಧರ್ಮಜನೆ! ಒಂದು ಹಿಂದಿನ ಕಥೆಯನ್ನು ಹೇಳುತ್ತೇನೆ. ಕೇಳು. ಅದನ್ನು ಕೇಳುವುದರಿಂದ ಪಾಪವೆಲ್ಲವೂ ಹೋಗುತ್ತದೆ.

೧೩. ಪಾಪದಿಂದ ಕೀಳುಜನ್ಮದಲ್ಲಿ ಹುಟ್ಟಿರುವ ಪಿತೃಗಳೂ ಕೂಡ ಈ ಏಕಾದಶಿಯ ಪುಣ್ಯದಾನದಿಂದ ಮೋಕ್ಷವನ್ನು ಹೊಂದುತ್ತಾರೆ. ಸಂಶಯವಿಲ್ಲ.

ಚಂಪಕೇ ನಗರೇ ರಮ್ಯೇ ವೈಷ್ಣವೈಶ್ಚ ವಿಭೂಷಿತೇ ।
ವೈಖಾನಸೋ ನಾಮ ನೃಪಃ ಪುತ್ರವತ್ಪಾಲಯೇತ್ಪ್ರಜಾಃ ॥ ೧೪ ॥

ವಸಂತಿ ಬಹವೋ ವಿಪ್ರಾ ವೇದವೇದಾಂಗಪಾರಗಾಃ ।
ಋದ್ಧಿಮತ್ಯಃ ಪ್ರಜಾಸ್ತಸ್ಯ ರಾಜ್ಞೋ ವೈಖಾನಸಸ್ಯ ಹಿ ॥ ೧೫ ॥

ಏವಂ ರಾಜ್ಯಂ ಪ್ರಕುರ್ವಾಣೋ ರಾತ್ರೌ ಸ್ವಪ್ನಸ್ಯ ಮಧ್ಯತಃ ।
ಸ್ವಕೀಯಾನ್ಪಿತರೋ ದೃಷ್ಟ್ವಾ ಅಧೋಯೋ ನಿಗತಾನ್ನೃಪ ॥ ೧೬ ॥

ಏವಂ ದೃಷ್ಟ್ವಾ ಚ ತಾನ್ಸರ್ವಾನ್ವಿಸ್ಮಯಾವಿಷ್ಟ ಮಾನಸಃ ।
ಕಥಯಾಮಾಸ ವೃತ್ತಾಂತಂ ಸ್ವಪ್ನಜಾತಂ ದ್ವಿಜಾನ್ಪ್ರತಿ ॥ ೧೭ ॥

॥ ರಾಜೋವಾಚ ॥

ಮಯಾ ಸ್ವಪಿತರೋ ದೃಷ್ಟಾ ನರಕೇಽಪಿ ಗತಾ ದ್ವಿಜಾಃ ।
ತಾರಯೇತಿ ತನೂಜ ತ್ವಮಸ್ಮಾನ್ನಿರಯಸಾಗರಾತ್ ॥ ೧೮ ॥

---

೧೪. ಚಂಪಕವೆಂಬ ಒಂದು ನಗರವಿರುವುದು. ಅಲ್ಲಿ ಅನೇಕಜನ ವೈಷ್ಣವರು ವಾಸವಾಗಿದ್ದರು. ಅಲ್ಲಿ ವೈಖಾನಸನೆಂಬ ರಾಜನು ಪ್ರಜೆಗಳನ್ನು ಮಕ್ಕಳಂತೆ ಕಾಪಾಡುತ್ತಿದ್ದನು.

೧೫. ಅವನ ಊರಿನಲ್ಲಿ ವೇದ ವೇದಾಂಗಗಳಲ್ಲಿ ನಿಷ್ಣಾತರಾದ ವಿಪ್ರರು ವಾಸವಾಗಿದ್ದರು. ಆ ವೈಖಾನಸರಾಜನ ಪ್ರಜೆಗಳು ಬಹುವಾಗಿ ಉತ್ತಮಸ್ಥಿತಿಯಲ್ಲಿಯೇ ಇದ್ದರು.

೧೬. ಈರೀತಿಯಾಗಿ ರಾಜ್ಯಭಾರಮಾಡುತ್ತಿರಲು ಒಂದುದಿನ ರಾತ್ರಿಯಲ್ಲಿ ಆತನು ಸ್ವಪ್ನದಲ್ಲಿ ತನ್ನಪಿತೃಗಳು ನೀಚಯೋನಿಯಲ್ಲಿ ಹುಟ್ಟಿರುವುದನ್ನು ಕಂಡನು.

೧೭. ಈ ರೀತಿಯಾಗಿ ಕನಸ್ಸಿನಲ್ಲಿ ಪಿತೃಗಳನ್ನು ನೋಡಿ ಆಶ್ಚರ್ಯಪಟ್ಟು ಈ ವೃತ್ತಾಂತವನ್ನು ಬ್ರಾಹ್ಮಣರಿಗೆ ಹೇಳಿದನು.

೧೮. ರಾಜನು ಹೇಳಿದನು—ಎಲೈ ಬ್ರಾಹ್ಮಣರಿರಾ ! ನರಕದಲ್ಲಿ ಬಿದ್ದಿರುವ ಹಾಗೆ ನಮ್ಮ ಪಿತೃಗಳನ್ನು ಸ್ವಪ್ನದಲ್ಲಿ ಕಂಡೆನು. ಅವರು—ಎಲೈ ಮಗನೆ! ನಮ್ಮನ್ನು ಈ ನರಕಸಾಗರದಿಂದ ಮೇಲಕ್ಕೆತ್ತು. ಎಂದು ಹೇಳಿದರು.

ಏವಂ ಬ್ರುವಾಣಾಸ್ತೇ ನೂನಂ ರೋದಮಾನಾ ಮುಹುರ್ಮುಹುಃ ।
ಮಯಾ ದೃಷ್ಟಾ ದ್ವಿಜಶ್ರೇಷ್ಠಾ ಏತಸ್ಮಾಚ್ಚ ನ ಮೇ ಸುಖಂ ॥ ೧೯ ॥

ಏತದ್ರಾಜ್ಯಂ ಮಮ ಮಹತ್ ಸುಖದಾಯಿ ನ ವಿದ್ಯತೇ ।
ಅಶ್ವಾ ಗಜಾಸ್ತಥಾ ಸರ್ವೇ ರೋಚಂತೇ ಮೇ ನ ಭೋ ದ್ವಿಜಾಃ ॥ ೨೦ ॥

ನ ದಾರಾ ನ ಸುತಾ ಮಹ್ಯಂ ರೋಚಂತೇ ದ್ವಿಜಸತ್ತಮಾಃ ।
ಕಿಂ ಕರೋಮಿ ಕ್ವ ಗಚ್ಛಾಮಿ ಹೃದಯಂ ಮೇಽವರುಧ್ಯತೇ ॥ ೨೧ ॥

ತದ್ವ್ರತಂ ತತ್ತಪೋ ಯೋಗೋ ಯೇನೈವ ಮಮ ಪೂರ್ವಜಾಃ ।
ಮೋಕ್ಷಂ ಪ್ರಯಾಂತಿ ಸದ್ಯೋ ವೈ ಕಥ್ಯತಾಂ ಚ ದ್ವಿಜೋತ್ತಮಾಃ ॥೨೨॥

ಪುತ್ರೇ ತು ಜೀವತಿ ಮಯಿ ಬಲೀಯಸಿ ಮಹಾತ್ಮನಿ ।
ಪಿತರೌ ನರಕೇ ಘೋರೇ ತಸ್ಯ ಪುತ್ರಸ್ಯ ಕಿಂ ಫಲಂ ॥ ೨೩ ॥

---

೧೯. ಅವರು ಹೀಗೆ ನನಗೆ ಹೇಳುತ್ತಾ ಅಳುತ್ತಿದ್ದರು. ಈ ರೀತಿಯಾಗಿ ಕಂಡೆನು. ಇದರಿಂದ ನನಗೆ ಮನಸ್ಸಿಗೆ ಶಾಂತಿಯಿಲ್ಲ.

೨೦. ಈ ರಾಜ್ಯವು ಬಹು ವಿಸ್ತಾರವಾಗಿದ್ದರೂ ನನಗೆ ಸಂತೋಷವಿಲ್ಲ. ಆನೆ ಕುದುರೆ ಇವಾವುವೂ ನನಗೆ ಬೇಕಿಲ್ಲ.

೨೧. ಹೆಂಡತಿ ಮಕ್ಕಳು ಇದೊಂದೂ ನನಗೆ ರುಚಿಸುವುದಿಲ್ಲವು. ಎಲೈ ಬ್ರಾಹ್ಮಣರಿರಾ ! ಏನುಮಾಡಲಿ ? ಎಲ್ಲಿಹೋಗಲಿ ? ನನ್ನ ಮನಸ್ಸು ತಲ್ಲಣಿಸುತ್ತಿದೆ.

೨೨. ಯಾವುದನ್ನು ಮಾಡಿದರೆ ನನ್ನ ಪೂರ್ವಿಕರಾದ ಪಿತೃಗಳು ಒಡನೆಯೇ ಮೋಕ್ಷ ಹೊಂದುವರೋ ಅಂತಹ ವ್ರತವನ್ನಾಗಲೀ ತಪಸ್ಸನ್ನಾಗಲೀ ಯೋಗವನ್ನಾಗಲೀ ನನಗೆ ಹೇಳಿರಿ ?

೨೩. ಬಲಿಷ್ಠನೂ ಮಹಾತ್ಮನೂ ಆದ ನಾನು ಮಗನಾಗಿ ಬದುಕಿರುವಾಗ ನನ್ನ ಪಿತೃಗಳು ಘೋರ ನರಕದಲ್ಲಿರಲು ನಾನು ಮಗನಾಗಿ ಇದ್ದು ಫಲವೇನು ?

|| ಬ್ರಾಹ್ಮಣಾ ಊಚುಃ ||

ಪರ್ವತಸ್ಯ ಮುನೇ ರಾಜನ್ನಿಕಟೇ ಚಾಶ್ರಮೋ ಮಹಾ್ ।
ಗಮ್ಯತಾಂ ರಾಜಶಾರ್ದೂಲ ಭೂತಂ ಭವ್ಯಂ ವಿಜಾನತಃ || ೨೪ ||

|| ಶ್ರೀಕೃಷ್ಣ ಉವಾಚ ||

ತೇಷಾಂ ಶ್ರುತ್ವಾ ತತೋ ವಾಕ್ಯಂ ರಾಜಾ ವೈಖಾನಸೋ ಮಹಾ್ ।
ಜಗಾಮ ಚಾಶು ತತ್ರೈವ ಚಾಶ್ರಮಂ ಪರ್ವತಸ್ಯ ಚ || ೨೫ ||

ಬ್ರಾಹ್ಮಣೈರ್ವೇಷ್ಟಿತೋ ರಾಜಾ ಪ್ರಜಾಭಿಶ್ಚ ಸಮನ್ವಿತಃ ।
ಆಶ್ರಮಂ ವಿಪುಲಂ ತಸ್ಯ ಸಂಪ್ರಾಪ್ತೋ ರಾಜಸತ್ತಮಃ || ೨೬ ||

ಋಗ್ವೇದಶ್ಚ ಯಜುರ್ವೇದ ಸಾಮಾಥ್ಯಯನಕೋವಿದೈಃ ।
ವೇಷ್ಟಿತಂ ಮುನಿಭಿಶ್ಚೈವ ದ್ವಿತೀಯಂ ಬ್ರಹ್ಮಣೋ ಯಥಾ || ೨೭ ||

ದೃಷ್ಟ್ವಾ ತಂ ಮುನಿಶಾರ್ದೂಲಂ ರಾಜಾ ವೈಖಾನಸಸ್ತಥಾ ।
ದಂಡವತ್ಪ್ರಣತಿಂ ಕೃತ್ವಾ ಪಸ್ಪರ್ಶ ಚರಣೌ ಮುನೇಃ || ೨೮ ||

---

೨೪. ಬ್ರಾಹ್ಮಣರು ಹೇಳಿದರು–ಎಲೈ ದೊರೆಯೆ! ಈ ಪಟ್ಟಣದ ಆಚೆ ಋಷಿಯ ಒಂದು ದೊಡ್ಡ ಆಶ್ರಮವಿರುವುದು. ಅಲ್ಲಿ ಒಬ್ಬ ಪರ್ವತನೆಂಬ ಋಷಿಯಿರುವನು. ಅವನ ಬಳಿಗೆ ಹೋದರೆ ಹಿಂದಿನದೂ ತಿಳಿಯುವುದು. ಮುಂದಿನದೂ ತಿಳಿಯುವುದು. ಅಲ್ಲಿಗೆ ಹೋಗು.

೨೫-೨೬. ಕೃಷ್ಣನು ಹೇಳಿದನು–ರಾಜನಾದ ವೈಖಾನಸನು ಆ ಬ್ರಾಹ್ಮಣರ ಮಾತನ್ನು ಕೇಳಿ ಅವರಿಂದ ಕೂಡಿಕೊಂಡವನಾಗಿ ಆ ಪರ್ವತನ ಆಶ್ರಮಕ್ಕೆ ಹೋದನು. ಜೊತೆಯಲ್ಲಿ ಪ್ರಜೆಗಳೂ ಬಂದರು. ಈ ರೀತಿಯಾಗಿ ದೊಡ್ಡದಾದ ಆಶ್ರಮಕ್ಕೆ ಎಲ್ಲರೊಡನೆಯೂ ಹೋದನು.

೨೭. ಋಗ್ವೇದ ಯಜುರ್ವೇದ ಸಾಮವೇದ ಮುಂತಾದುವುಗಳಲ್ಲಿ ಪಂಡಿತರಾಗಿರುವ ಮುನಿಗಳಿಂದ ಕೂಡಿರುವ ಎರಡನೆಯ ಬ್ರಹ್ಮನಂತಿರುವ ಆ ಪರ್ವತ ಋಷಿಯನ್ನು ನೋಡಿದನು.

೨೮. ರಾಜನಾದ ವೈಖಾನಸನು ಆ ಮುನಿಯನ್ನು ನೋಡಿ ಧೀರ್ಘದಂಡ ನಮಸ್ಕಾರಮಾಡಿ ಅವನ ಪಾದಗಳನ್ನು ಮುಟ್ಟಿದನು

ಪರಸ್ಪರೇಣ ಸಂಲಗ್ನೌ ಗಾತ್ರಯೋರುಭಯೋರಪಿ ।
ನ ನಿದ್ರಾ ನ ರತಿಸ್ತತ್ರ ನ ತೌ ಸೌಖ್ಯಮವಿಂದತಾಂ || ೩೮ ||

ಏವಂ ತೌ ರಾಜಶಾರ್ದೂಲ ಶಾಪೇನೇಂದ್ರಸ್ಯ ಪೀಡಿತೌ ।
ಇತ್ಥಂ ತಯೋರ್ದುಃಖಿತಯೋರ್ನಿರ್ಜಗಾಮ ನಿಶೀಥಿನೀ || ೩೯ ||

ಮಾರ್ತಾಂಡ ಉದಯಂ ಪ್ರಾಪ್ತೇ ದ್ವಾದಶೀದಿವಸಾಗಮೇ ।
ಮಯಾ ತು ರಾಜಶಾರ್ದೂಲ ತಯೋರ್ಭಕ್ತಿರ್ಧೃತಾ ಹೃದಿ || ೪೦ ||

ಜಯಾಯಾಸ್ತುವ್ರತಂ ಚೀರ್ಣಂ ರಾತ್ರೌ ಜಾಗರಣಂ ಕೃತಂ ।
ತಸ್ಮಾದ್ವ್ರತಪ್ರಭಾವಾಚ್ಚ ಯಥಾ ಜಾತಂ ತಥಾ ಶೃಣು || ೪೧ ||

ದ್ವಾದಶೀದಿವಸೇ ಪ್ರಾಪ್ತೇ ತಥಾ ಚೀರ್ಣೇ ಜಯಾ ವ್ರತೇ ।
ವಿಷ್ಣೋಃ ಪ್ರಭಾವಾನ್ನೃಪತೇ ಪಿಶಾಚತ್ವಂ ತಯೋರ್ಗತಂ || ೪೨ ||

---

೩೮. ಒಂದಕ್ಕೊಂದು ಛಳಿಯನ್ನು ತಡೆಯಲಾರದೆ ತಬ್ಬಿಕೊಂಡು ಮಲಗಿಕೊಂಡುವು. ಆ ಛಳಿಯಿಂದ ನಿದ್ದೆಯನ್ನಾಗಲಿ ಸುಖವನ್ನಾಗಲಿ ಅವು ಹೊಂದಲಿಲ್ಲ.

೩೯. ಎಲೈ ಧರ್ಮಜನೇ! ಈರೀತಿ ಇಂದ್ರಶಾಪದಿಂದ ಪೀಡಿತವಾದ ಅವು ದುಃಖಪಡುತ್ತ ಆ ದಿನದ ರಾತ್ರಿಯನ್ನು ಕಳೆದುವು.

೪೦. ಸೂರ್ಯನು ಹುಟ್ಟಿದನು. ದ್ವಾದಶಿಯು ಬಂದಿತು. ಆಗ ನಾನು ಅವುಗಳ ಮನಸ್ಸಿನಲ್ಲಿ ಭಕ್ತಿಯು ಬರುವಂತೆ ಮಾಡಿದೆನು.

೪೧. ಜಯಾ ಏಕಾದಶಿಯ ದಿನ ಉಪವಾಸ ವ್ರತವನ್ನು ಮಾಡಿದವು. ರಾತ್ರಿಯಲ್ಲಿ ಜಾಗರಣವೂ ಆಯಿತು. ಆ ವ್ರತದ ಪ್ರಭಾವದಿಂದ ಉಂಟಾದುದನ್ನು ಕೇಳು.

೪೨. ಜಯಾ ವ್ರತವನ್ನು ಮಾಡಿ ಜಾಗರಣೆಯನ್ನು ಮುಗಿಸಿ ದ್ವಾದಶಿಯು ಪ್ರಾಪ್ತವಾಗಲು ಆ ದಿನ ವಿಷ್ಣುವಿನ ಮಹಿಮೆಯಿಂದ ಅವಕ್ಕೆ ಪಿಶಾಚತನವು ಹೊರಟು ಹೋಯಿತು.

ಪುಷ್ಪವಂತೀಮಾಲ್ಯವಂತೌ ಪೂರ್ವರೂಪೌ ಬಭೂವತುಃ ।
ಪುರಾತನಸ್ನೇಹಿಯುತೌ ಪೂರ್ವಾಲಂಕಾರಧಾರಿಣೌ　　|| ೪೩ ||

ವಿಮಾನಮಧಿರೂಢೌ ತೌ ಗತೌ ನಾಕಂ ಮನೋರಮೌ ।
ದೇವೇಂದ್ರಸ್ಯಾಗ್ರತೋ ಗತ್ವಾ ಪ್ರಣಾಮಂ ಚಕ್ರತುರ್ಮುದಾ ||
ತಥಾವಿಧೌ ತು ತೌ ದೃಷ್ಟ್ವಾ ಮಘವಾ ವಿಸ್ಮಿತೋಽಬ್ರವೀತ್　　|| ೪೪ ||

|| ಇಂದ್ರ ಉವಾಚ ||

ವದತಂ ಕೇನ ಪುಣ್ಯೇನ ಪಿಶಾಚತ್ವಂ ಹಿ ವಾಂ ಗತಂ ।
ಮಮ ಶಾಪಂ ಚ ಸಂಪ್ರಾಪ್ತೌ ಕೇನ ದೇವೇನ ಮೋಚಿತೌ　　|| ೪೫ ||

|| ಮಾಲ್ಯವಾನುವಾಚ ||

ವಾಸುದೇವಪ್ರಸಾದೇನ ಜಯಾಯಾಸ್ತು ವ್ರತೇನ ಚ ।
ಪಿಶಾಚತ್ವಂ ಗತಂ ಸ್ವಾಮಿಂಸ್ತವ ಭಕ್ತಿಪ್ರಭಾವತಃ　　|| ೪೬ ||

---

೪೩-೪೪. ಆ ಪಿಶಾಚಿತನವನ್ನು ಕಳೆದುಕೊಂಡು ಪೂರ್ವದಂತೆ ಪುಷ್ಪವಂತೀ ಮಾಲ್ಯವಂತರಾದರು. ಹಿಂದಿನಂತೆಯೇ ಸ್ನೇಹವು ಬೆಳೆಯಿತು. ಹಿಂದಿನಂತೆಯೇ ಅಲಂಕಾರಗಳೆಲ್ಲವೂ ಬಂದುವು. ಒಳ್ಳೆಯ ವಿಮಾನದಲ್ಲಿ ಕುಳಿತು ಸ್ವರ್ಗಕ್ಕೆ ಹೋದರು. ದೇವೇಂದ್ರನ ಎದುರಿಗೆ ಹೋಗಿ ಸಂತೋಷದಿಂದ ನಮಸ್ಕರಿಸಿದರು. ಆ ರೀತಿಯಾಗಿ ಸ್ವರೂಪವನ್ನು ತಾಳಿ ಅವರು ಬಂದುದನ್ನು ನೋಡಿ ಇಂದ್ರನು ಆಶ್ಚರ್ಯಗೊಂಡು ಇಂತೆಂದನು.

೪೫. ಇಂದ್ರನು ಹೇಳಿದನು– ನಿಮ್ಮ ಪಿಶಾಚತನವು ಯಾವ ಪುಣ್ಯದಿಂದ ನಾಶಮಾಡಲ್ಪಟ್ಟಿತು ? ಹೇಳಿರಿ. ನಾನು ಶಾಪಕೊಟ್ಟಿರುವಲ್ಲಿ ಅದನ್ನು ಯಾರು ಹೋಗಲಾಡಿಸಿದವರು ?

೪೬. ಮಾಲ್ಯವಂತನು ಹೇಳಿದನು– ವಾಸುದೇವನ ಅನುಗ್ರಹದಿಂದಲೂ ಜಯಾ ಏಕಾದಶಿಯ ವ್ರತದಿಂದಲೂ ನಿನ್ನಲ್ಲಿಟ್ಟಿರುವ ಭಕ್ತಿಯಿಂದಲೂ ನಮ್ಮ ಪಿಶಾಚತನವು ಹೋಯಿತು.

॥ ಶ್ರೀಕೃಷ್ಣ ಉವಾಚ ॥

ಇತಿ ಶ್ರುತ್ವಾ ತು ಮಘವಾ ಪ್ರತ್ಯುವಾಚ ಪುನಸ್ತಥಾ ॥ ೪೭ ॥

॥ ಇಂದ್ರ ಉವಾಚ ॥

ಪಿಬತಂ ತು ಯುವಾಂ ಚೈವ ಅಸ್ಮಾಕಂ ವಚನಾತ್ಸುಧಾಂ ।
ಹರಿವಾಸರಲೀನಾ ಯೇ ಯೇ ಚ ಕೃಷ್ಣಪರಾಯಣಾಃ ॥ ೪೮ ॥

ಅಸ್ಮಾಕಂ ಚೈವ ಮರ್ತ್ಯಾಸ್ತೇ ಪೂಜ್ಯಾಶ್ಚೈವ ನ ಸಂಶಯಃ ।
ರಮಸ್ವ ಪುಷ್ಪವಂತ್ಯಾ ತ್ವಂ ಯಥಾಸೌಖ್ಯಂ ಸುರಾಲಯೇ ॥ ೪೯ ॥

॥ ಶ್ರೀಕೃಷ್ಣ ಉವಾಚ ॥

ಏತಸ್ಮಾತ್ಕಾರಣಾದ್ರಾಜನ್ ಕರ್ತವ್ಯಂ ಹರಿವಾಸರಂ ।
ಜಯಾ ತು ರಾಜಶಾರ್ದೂಲ ಬ್ರಹ್ಮಹತ್ಯಾಪಹಾರಿಣೀ ॥ ೫೦ ॥

ಸರ್ವದಾನಾನಿ ತೇನೈವ ಸರ್ವಯಜ್ಞಾನ್ಯಶೇಷತಃ ।
ದತ್ತಾನಿ ಕಾರಿತಾನ್ಯೇವ ಜಯಾಯಾಸ್ತು ವ್ರತಂ ಕೃತಂ ॥ ೫೧ ॥

---

೪೭. ಶ್ರೀ ಕೃಷ್ಣನು ಹೇಳಿದನು– ಇಂದ್ರನು ಇದನ್ನು ಕೇಳಿ ಅವರನ್ನು ಕುರಿತು ಮತ್ತೆ ಇಂತೆಂದನು.

೪೮–೪೯. ನೀವಿಬ್ಬರೂ ನನ್ನ ಅಪ್ಪಣೆಯಂತೆ ಅಮೃತವನ್ನು ಕುಡಿಯಿರಿ. ಹರಿಯ ದಿವಸಗಳಲ್ಲಿ ಆಸಕ್ತರೂ ಕೃಷ್ಣನಲ್ಲಿ ಭಕ್ತಿಯುಳ್ಳವರೂ ಆದರೆ ಅವರು ಮನುಷ್ಯರಾದರೂ ನಮಗೆ ಪೂಜ್ಯರೇ. ಸಂಶಯವಿಲ್ಲ. ನೀನು ನಿನಗೆ ಇಷ್ಟ ಬಂದಂತೆ ಈ ದೇವಲೋಕದಲ್ಲಿ ಪುಷ್ಪವಂತಿಯೊಡನೆ ಸುಖಿಸು.

೫೦. ಶ್ರೀ ಕೃಷ್ಣನು ಹೇಳಿದನು–ಈ ಕಾರಣದಿಂದಲೇ ಹರಿವಾಸರವನ್ನು ಆಚರಿಸಬೇಕು. ಜಯಾ ಏಕಾದಶಿಯು ಬ್ರಹ್ಮಹತ್ಯೆಯನ್ನೂ ಹಾಳುಮಾಡುತ್ತದೆ.

೫೧. ಈ ಜಯಾ ಏಕಾದಶಿಯಲ್ಲಿ ಉಪವಾಸ ಮಾಡಿ ಜಾಗರಣೆ ಮಾಡಿದರೆ ಎಲ್ಲಾ ದಾನಗಳನ್ನೂ ಮಾಡಿದಂತಾಗುತ್ತದೆ. ಎಲ್ಲಾ ಯಜ್ಞಗಳನ್ನೂ ಆಚರಿಸಿದಂತಾಗುತ್ತದೆ.

**ಕಲ್ಪಕೋಟಿಂ ವಸೇತ್ತಾವದ್ವೈಕುಂಠೇ ಮೋದತೇ ಧ್ರುವಂ ।**
**ಪಠನಾಚ್ಛ್ರವಣಾದ್ರಾಜನ್ನಗ್ನಿಷ್ಟೋಮಫಲಂ ಲಭೇತ್　　　　॥ ೫೨ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಪತಿ ನಾರದ ಸಂವಾದಾನ್ತರ್ಗತ ಕೃಷ್ಣ ಯುಧಿಷ್ಠಿರ ಸಂವಾದೇ ಮಾಘ ಶುಕ್ಲ ಜಯೈಕಾದಶೀ ಮಾಹಾತ್ಮ್ಯಂ ನಾಮ ಪಂಚಚತ್ವಾರಿಂಶೋಽಧ್ಯಾಯಸ್ಸಮಾಪ್ತಃ**

---

೫೨. ಒಂದುಕೋಟಿಕಲ್ಪಗಳವರೆಗೂ ಆ ವ್ರತಮಾಡಿದವನು ವೈಕುಂಠದಲ್ಲಿ ಸುಖಿಸುತ್ತಾನೆ. ಇದನ್ನು ಕೇಳುವುದರಿಂದಲೂ ಹೇಳುವುದರಿಂದಲೂ ಅಗ್ನಿಷ್ಟೋಮ ಯಾಗದ ಫಲವು ಬರುತ್ತದೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಪತಿ ನಾರದರ ಸಂವಾದಾಂತರ್ಗತವಾದ ಕೃಷ್ಣ ಯುಧಿಷ್ಠಿರರ ಸಂವಾದದಲ್ಲಿ ಮಾಘ ಶುದ್ಧದ ಜಯೈಕಾದಶೀ ಮಹಿಮೆ ಎಂಬ ನಾಲ್ವತ್ತೈದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-x-

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಷಟ್‌ಚತ್ವಾರಿಂಶೋಽಧ್ಯಾಯಃ ॥



॥ ಯುಧಿಷ್ಠಿರ ಉವಾಚ ॥

ಫಾಲ್ಗುನಸ್ಯಾಸಿತೇ ಪಕ್ಷೇ ಕಿನ್ನಾಮ್ನ್ಯೇಕಾದಶೀ ಭವೇತ್ ।
ಕಥಯಸ್ವ ಪ್ರಸಾದೇನ ವಾಸುದೇವ ಮಮಾಗ್ರತಃ ॥ ೧ ॥

॥ ಕೃಷ್ಣ ಉವಾಚ ॥

ನಾರದಃ ಪರಿಪಪ್ರಚ್ಛ ಬ್ರಹ್ಮಾಣಂ ಕಮಲಾಸನಂ ।
ಫಾಲ್ಗುನಸ್ಯಾಸಿತೇ ಪಕ್ಷೇ ವಿಜಯಾ ನಾಮ ನಾಮತಃ ॥
ತಸ್ಯಾಃ ಪುಣ್ಯಂ ಸುರಶ್ರೇಷ್ಠ ಕಥಯಸ್ವ ಪ್ರಸಾದತಃ ॥ ೨ ॥

---

## ನಲವತ್ತಾರನೆಯ ಅಧ್ಯಾಯವು



೧. ಯುಧಿಷ್ಠಿರನು ಹೇಳಿದನು– ಎಲೈ ವಾಸುದೇವನೇ ! ಫಾಲ್ಗುಣ ಮಾಸದ ಕೃಷ್ಣಪಕ್ಷದಲ್ಲಿ ಬರುವ ಏಕಾದಶಿಯು ಯಾವ ಹೆಸರುಳ್ಳದ್ದು ? ದಯವಿಟ್ಟು ನನಗೆ ಹೇಳು.

೨. ಕೃಷ್ಣನು ಹೇಳಿದನು– ನಾರದನು ಕಮಲಾಸನನಾದ ಬ್ರಹ್ಮನನ್ನು ಹೀಗೆಂದು ಕೇಳಿದನು. ಫಾಲ್ಗುಣಮಾಸದ ಕೃಷ್ಣಪಕ್ಷದಲ್ಲಿ ವಿಜಯಾ ಎಂಬ ಏಕಾದಶಿಯು ಬರುತ್ತದಷ್ಟೆ. ಅದರಲ್ಲಿ ಬರುವ ಪುಣ್ಯವನ್ನು ಕೃಪೆಮಾಡಿ ಹೇಳು.

|| ಬ್ರಹ್ಮೋವಾಚ ||

ಶೃಣು ನಾರದ ವಕ್ಷ್ಯಾಮಿ ಕಥಂ ಪಾಪಹರಾಂ ಪರಾಂ ।
ಯನ್ನ ಕಸ್ಯಚಿದಾಖ್ಯಾತಂ ಮಯ್ಯೈತದ್ವಿಜಯಾವ್ರತಂ || ೩ ||

ಪುರಾತನಂ ವ್ರತಂ ಹ್ಯೇತತ್ಪವಿತ್ರಂ ಪಾಪನಾಶನಂ ।
ಜಯಂ ದದಾತಿ ವಿಜಯಾ ನೃಪಾಣಾಂ ವೈ ನ ಸಂಶಯಃ || ೪ ||

ಪುರಾ ರಾಮೋ ವನಂ ಯಾತೋ ವರ್ಷಾಣ್ಯೇವ ಚತುರ್ದಶ ।
ನ್ಯವಸತ್ಪಂಚವಟ್ಯಾಂ ತು ಸಸೀತಸ್ಸಹಲಕ್ಷ್ಮಣಃ || ೫ ||

ತತ್ರೈವ ವಸತಸ್ತಸ್ಯ ರಾಮಸ್ಯ ವಿಜಯಾತ್ಮನಃ ।
ರಾವಣೇನ ಹೃತಾ ಲೌಲ್ಯಾತ್ ಭಾರ್ಯಾ ಸೀತಾ ತಪಸ್ವಿನೀ || ೬ ||

ತೇನ ದುಃಖೇನ ರಾಮೋಽಪಿ ಮೋಹಮಭ್ಯಾಗತಸ್ತದಾ ।
ಭ್ರಮನ್ ಜಟಾಯುಷಮಥೋ ದದರ್ಶ ವಿಗತಾಯುಷಂ || ೭ ||

---

೩. ಬ್ರಹ್ಮನು ಹೇಳಿದನು- ಎಲೈ ನಾರದನೇ ! ಪಾಪಹಾರಕವಾದ ಒಂದು ಕಥೆಯನ್ನು ಹೇಳುತ್ತೇನೆ, ಕೇಳು. ಈ ವಿಜಯಾವ್ರತದ ಕಥೆಯನ್ನು ಯಾರಿಗೂ ಹೇಳಿಲ್ಲ.

೪. ಈ ವಿಜಯಾ ವ್ರತವು ಬಹು ಪುರಾತನವಾದುದು. ಪವಿತ್ರವೂ, ಪಾಪನಾಶಕವೂ ಆಗಿದೆ. ಇದು ರಾಜರಿಗೂ ಕೂಡ ಜಯವನ್ನು ಕೊಡುತ್ತದೆ. ಸಂಶಯವಿಲ್ಲ.

೫. ಹಿಂದೆ ರಾಮನು ಸೀತಾಲಕ್ಷ್ಮಣರೊಡನೆ ಹದಿನಾಲ್ಕು ವರ್ಷಗಳು ವನವಾಸಮಾಡಿದನಷ್ಟೆ. ಆಗ ಪಂಚವಟಿಯಲ್ಲಿದ್ದನು.

೬. ಮಂಗಳಸ್ವರೂಪನಾದ ರಾಮನು ಆ ಪಂಚವಟಿಯಲ್ಲಿಯೇ ವಾಸ ವಾಗಿರಲು ಅವನ ಹೆಂಡತಿಯಾದ ಸೀತೆಯನ್ನು ರಾವಣನು ಚಪಲತೆಯಿಂದ ಕದ್ದು ಕೊಂಡುಹೋದನು.

೭. ಹಾಗೆ ಹೆಂಡತಿಯು ಅಪಹೃತಳಾದ ಕಾರಣದಿಂದ ರಾಮನು ಮೋಹ ಗೊಂಡು ಹುಡುಕಿಕೊಂಡು ಸುತ್ತುತ್ತಿರಲು ಪ್ರಾಣಬಿಡುವ ಸ್ಥಿತಿಯಲ್ಲಿರುವ ಜಟಾಯುವನ್ನು ಕಂಡನು.

ಕಬಂಧೋ ನಿಹತಃ ಪಶ್ಚಾದ್ಭ್ರಮತಾರಣ್ಯಮಧ್ಯತಃ ।
ಸುಗ್ರೀವೇಣ ಸಮಂ ತಸ್ಯ ಸಖಿತ್ವಂ ಸಮಪದ್ಯತ ॥ ೮ ॥

ವಾನರಾಣಾಮನೀಕಾನಿ ರಾಮಾರ್ಥಂ ಸಂಗತಾನಿ ಚ ।
ತತೋ ಹನೂಮತಾ ದೃಷ್ಟಾ ಲಂಕೋದ್ಯಾನೇ ತು ಜಾನಕೀ ॥ ೯ ॥

ರಾಮಸಂಜ್ಞಾಪನಂ ತಸ್ಯೈ ದತ್ತಂ ಕರ್ಮ ಮಹತ್ಕೃತಂ ।
ಸಮೇತ್ಯ ರಾಮಂ ಸ ಪುನಃ ಸರ್ವಂ ತತ್ರ ನ್ಯವೇದಯತ್ ॥ ೧೦ ॥

ಅಥ ಶ್ರುತ್ವಾ ರಾಮಚಂದ್ರೋ ವಾಕ್ಯಂ ಚೈವ ಹನೂಮತಃ ।
ಸುಗ್ರೀವಾನುಮತೇನೈವ ಪ್ರಸ್ಥಾನಂ ಸಮರೋಚಯತ್ ॥ ೧೧ ॥

॥ ಶ್ರೀರಾಮ ಉವಾಚ ॥

ಸೌಮಿತ್ರೇ ಕೇನ ಪುಣ್ಯೇನ ತೀರ್ಯತೇ ವರುಣಾಲಯಃ ।
ಅಗಾಧೋ ನಿತರಾಮೇಷ ಯಾದೋಭಿಶ್ಚ ಸಮಾಕುಲಃ ॥ ೧೨ ॥

ಉಪಾಯಂ ನೈವ ಪಶ್ಯಾಮಿ ಯೇನೈವ ಸುತರೋ ಭವೇತ್ ॥ ೧೩ ॥

---

೮. ಅರಣ್ಯದಲ್ಲಿ ಸುತ್ತುತ್ತಿರುವಾಗ ಕಬಂಧನನ್ನು ಕೊಂದನು. ಅನಂತರ ಸುಗ್ರೀವನೊಡನೆ ಸ್ನೇಹವಾಯಿತು.

೯. ರಾಮನ ಸಹಾಯಕ್ಕೋಸ್ಕರ ಕಪಿಗಳ ಸೇನೆಯು ಸೇರಿ ಸಿದ್ಧವಾಯಿತು. ಅನಂತರ ಹನುಮಂತನು ಲಂಕೆಯ ಉದ್ಯಾನದಲ್ಲಿ ಸೀತೆಯನ್ನು ಕಂಡನು.

೧೦. ರಾಮನ ಗುರುತನ್ನು ಆ ಸೀತೆಗೆ ಕೊಟ್ಟು ಅಗಾಧವಾದ ಕೆಲಸವನ್ನು ಮಾಡಿದನು. ಅನಂತರ ಮತ್ತೆ ರಾಮನ ಬಳಿಗೆ ಬಂದು ಎಲ್ಲವನ್ನೂ ಹೇಳಿದನು.

೧೧. ರಾಮನು ಆ ಹನುಮಂತನ ಮಾತೆಲ್ಲವನ್ನೂ ಕೇಳಿ ಸುಗ್ರೀವನ ಒಪ್ಪಿಗೆಯಿಂದ ಸೇನೆಯನ್ನು ಹೊರಡಿಸಲು ಅಪೇಕ್ಷಿಸಿದನು.

೧೨-೧೩. ಶ್ರೀ ರಾಮನು ಹೇಳಿದನು-ಎಲೈ ಸೌಮಿತ್ರಿಯೆ! ಯಾವಪುಣ್ಯ ದಿಂದ ಈ ಸಮುದ್ರವನ್ನು ದಾಟಬಹುದು? ಇದಾದರೋ ಬಹು ಆಳವಾಗಿದೆ. ಅನೇಕವಾದ ಜಲಜಂತುಗಳಿಂದ ಕೂಡಿದೆ. ಇದನ್ನು ಸುಲಭವಾಗಿ ದಾಟಲು ಯಾವ ಉಪಾಯವೂ ಕಾಣುವುದಿಲ್ಲವಲ್ಲ!

|| ಲಕ್ಷ್ಮಣ ಉವಾಚ ||

ಆದಿದೇವಸ್ತ್ವಮೇವಾಸಿ ಪುರಾಣಃ ಪುರುಷೋತ್ತಮಃ ।
ಬಕದಾಲ್ಭ್ಯೋ ಮುನಿಶ್ಚಾತ್ರ ವರ್ತತೇ ದ್ವೀಪಮಧ್ಯತಃ || ೧೪ ||

ಅಸ್ಮಾತ್ ಸ್ಥಾನಾದ್ಯೋಜನಾರ್ಧಮಾಶ್ರಮಸ್ತಸ್ಯ ರಾಘವ ।
ಅನ್ಯೇ ಚ ಬ್ರಾಹ್ಮಣಾಸ್ತತ್ರ ಬಹವೋ ರಘುನಂದನ ||
ತಂ ಪೃಚ್ಛ ಗತ್ವಾ ರಾಜೇಂದ್ರ ಪುರಾಣಮೃಷಿಪುಂಗವಂ || ೧೫ ||

|| ಬ್ರಹ್ಮೋವಾಚ ||

ಇತಿ ವಾಕ್ಯಂ ತತಶ್ಶ್ರುತ್ವಾ ಲಕ್ಷ್ಮಣಸ್ಯಾತಿಶೋಭನಂ ।
ಜಗಾಮ ರಾಘವೋ ದ್ರಷ್ಟುಂ ಬಕದಾಲ್ಭ್ಯಂ ಮಹಾಮುನಿಂ || ೧೬ ||

ಪ್ರಣನಾಮ ಮುನಿಂ ಮೂರ್ಧ್ನಾ ರಾಮೋ ವಿಷ್ಣುಮಿವಾಮರಃ ।
ಜ್ಞಾತ್ವಾ ಮುನಿಸ್ತತೋ ರಾಮಂ ಪುರಾಣಂ ಪುರುಷೋತ್ತಮಂ || ೧೭ ||

ಕೇನಾಪಿ ಕಾರಣೇನೈವ ಪ್ರವಿಷ್ಟಂ ಮಾನುಷೀಂ ತನುಂ ।
ಉವಾಚ ಸ ಋಷಿಸ್ತುಷ್ಟಃ ಕುತೋ ರಾಮ ತವಾಗಮಃ || ೧೮ ||

---

೧೪. ಲಕ್ಷ್ಮಣನು ಹೇಳಿದನು–ಎಲೈ ರಾಮನೆ! ನೀನೇ ಆದಿದೇವನು. ಪುರಾಣಪುರುಷನೂ ಆಗಿದ್ದೀಯೆ. ಇಲ್ಲಿಯೇ ಹತ್ತಿರದಲ್ಲಿರುವ ದ್ವೀಪದಲ್ಲಿ ಬಕದಾಲ್ಭ್ಯರೆಂಬ ಋಷಿಗಳು ವಾಸವಾಗಿದ್ದಾರೆ.

೧೫. ಇಲ್ಲಿಗೆ ಅವರ ಆಶ್ರಮವು ಅರ್ಧಯೋಜನ ದೂರವಿದೆ. ಅಲ್ಲಿ ಇನ್ನೂ ಅನೇಕರು ಬ್ರಾಹ್ಮಣರು ವಾಸವಾಗಿದ್ದಾರೆ. ಅಲ್ಲಿಗೆ ಹೋಗಿ ಆ ಹಳಬರಾದ ಋಷಿಗಳನ್ನು ಕೇಳೋಣ.

೧೬. ಬ್ರಹ್ಮನು ಹೇಳಿದನು– ಲಕ್ಷ್ಮಣನ ಈ ಉಚಿತವಾದ ಮಾತನ್ನು ಕೇಳಿ ರಾಮನು ಬಕದಾಲ್ಭ್ಯರನ್ನು ನೋಡಲು ಹೋದನು.

೧೭–೧೮. ರಾಮನು ಅಲ್ಲಿಗೆ ಹೋಗಿ ಆ ಬಕದಾಲ್ಭ್ಯರನ್ನು ಇಂದ್ರನು ವಿಷ್ಣುವನ್ನು ನಮಸ್ಕರಿಸುವಂತೆ ನಮಸ್ಕರಿಸಿದನು. ಆಗ ಋಷಿಯು ಕಾರಣಾಂತರ ದಿಂದ ಮನುಷ್ಯ ಶರೀರವನ್ನು ಹೊಂದಿರುವ ಪುರಾಣಪುರುಷನಾದ ಆ ರಾಮ ನನ್ನು ನೋಡಿದನು. ಅನಂತರ ಸಂತೋಷಗೊಂಡ ಆ ಋಷಿಯು ರಾಮಾ! ನೀನ್ನುಏನು ಬಂದಿದ್ದೀಯೆ? ಎಂದನು.

|| ರಾಮ ಉವಾಚ ||

ತ್ವತ್ಪ್ರಸಾದಾದಹಂ ವಿಪ್ರ ತೀರಂ ನದನದೀಪತೇಃ ।
ಆಗತೋಽಸ್ಮಿ ಸಸೈನ್ಯೋಽತ್ರ ಲಂಕಾಂ ಜೇತುಂ ಸರಾಕ್ಷಸಾಂ || ೧೯ ||

ಭವತಶ್ಚಾನುಕೂಲತ್ವಾತ್ತೀರ್ಯತೇಽಬ್ಧಿರ್ಯಥಾ ಮಯಾ ।
ತಮುಪಾಯಂ ವದ ಮುನೇ ಪ್ರಸಾದಂ ಕುರು ಸಾಂಪ್ರತಂ ||
ಏತಸ್ಮಾತ್ಕಾರಣಾದೇವ ಪ್ರಷ್ಟುಂ ತ್ವಾಮಿಹ ಚಾಗತಃ || ೨೦ ||

|| ಬ್ರಹ್ಮೋವಾಚ ||

ರಾಮಸ್ಯ ವಚನಂ ಶ್ರುತ್ವಾ ಬಕದಾಲ್ಭ್ಯೋ ಮಹಾಮುನಿಃ ।
ಉವಾಚ ಸುಪ್ರಸನ್ನಾತ್ಮಾ ರಾಮಂ ರಾಜೀವಲೋಚನಂ || ೨೧ ||

|| ಬಕದಾಲ್ಭ್ಯ ಉವಾಚ ||

ಕರ್ತವ್ಯಮದ್ಯ ತೇ ರಾಮ ವ್ರತಾನಾಂ ವ್ರತಮುತ್ತಮಂ ।
ಕೃತೇನ ಯೇನ ಸಹಸಾ ವಿಜಯಸ್ತೇ ಭವಿಷ್ಯತಿ || ೨೨ ||

---

೧೯. ರಾಮನು ಹೇಳಿದನು–ಎಲೈ ಋಷಿಯೆ! ನಾನು ಸೈನ್ಯದೊಡನೆ ಸಮುದ್ರತೀರಕ್ಕೆ ಬಂದಿರುವೆನು. ನಿನ್ನ ಅನುಗ್ರಹದಿಂದ ರಾಕ್ಷಸರಿಂದ ಕೂಡಿದ ಲಂಕೆಯನ್ನು ಜಯಿಸಬೇಕು.

೨೦. ನಿನ್ನ ಅನುಗ್ರಹದಿಂದ ನಾನು ಆ ಸಮುದ್ರವನ್ನು ದಾಟಬೇಕು. ಆ ಉಪಾಯವನ್ನು ಹೇಳಿ ನನಗೆ ಅನುಗ್ರಹವನ್ನು ಮಾಡು. ನಿನ್ನನ್ನು ನೋಡಲು ನಾನು ಅದಕ್ಕೆ ಇಲ್ಲಿಗೆ ಬಂದಿದ್ದೇನೆ.

೨೧. ಬ್ರಹ್ಮನು ಹೇಳಿದನು–ರಾಮನ ಈ ಮಾತನ್ನು ಕೇಳಿ ಬಕದಾಲ್ಭ್ಯ ಋಷಿಯು ಸಂತೋಷಪಟ್ಟು ಅವನನ್ನು ಕುರಿತು ಇಂತೆಂದನು.

೨೨. ಬಕದಾಲ್ಭ್ಯನು ಹೇಳಿದನು–ಎಲೈ ರಾಮನೆ! ಈಗೊಂದು ಉತ್ತಮವಾದ ವ್ರತವನ್ನು ನೀನು ಮಾಡಬೇಕು. ಅದನ್ನು ಮಾಡಿದರೆ ನಿನಗೆ ವಿಜಯವು ಲಭಿಸುತ್ತದೆ.

ಲಂಕಾಂ ಜಿತ್ವಾ ರಾಕ್ಷಸಾಂಶ್ಚ ಸ್ವಚ್ಛಾಂ ಕೀರ್ತಿಮವಾಪ್ಸ್ಯಸಿ ।
ಏಕಾಗ್ರ ಮಾನಸೋ ಭೂತ್ವಾ ವ್ರತಮೇತತ್ಸಮಾಚರ || ೨೩ ||

ಫಾಲ್ಗುನಸ್ಯಾಸಿತೆಪಕ್ಷೇ ವಿಜಯೈಕಾದಶೀ ಭವೇತ್ ।
ತಸ್ಯಾ ವ್ರತೇನ ಹೇ ರಾಮ ವಿಜಯಸ್ತೇ ಭವಿಷ್ಯತಿ || ೨೪ ||

ನಿಸ್ಸಂಶಯಂ ಸಮುದ್ರಂ ತ್ವಂ ತರಿಷ್ಯಸಿ ಸವಾನರಃ
ವಿಧಿಸ್ತು ಶ್ರೂಯತಾಂ ರಾಜನ್ ವ್ರತಸ್ಯಾಸ್ಯ ಫಲಪ್ರದಃ || ೨೫ ||

ದಶಮ್ಯಾಂ ದಿವಸೇ ಪ್ರಾಪ್ತೇ ಕುಂಭಮೇಕಂ ತು ಕಾರಯೇತ್ ।
ಹೈಮಂ ವಾ ರಾಜತಂ ವಾಪಿ ತಾಮ್ರಂ ವಾಪ್ಯಥ ಮೃಣ್ಮಯಂ || ೨೬ ||

ಸ್ಥಾಪಯೇಚ್ಛೋಭಿತಂ ಕುಂಭಂ ಜಲಪೂರ್ಣಂ ಸಪಲ್ಲವಂ ।
ತಸ್ಯೋಪರಿ ನ್ಯಸೇದ್ದೇವಂ ಹೈಮಂ ನಾರಾಯಣಂ ಪ್ರಭುಂ || ೨೭ ||

---

೨೩. ಹಾಗೆ ಮಾಡಿದರೆ ಲಂಕೆಯನ್ನೂ ರಾಕ್ಷಸರನ್ನೂ ಜಯಿಸಿ ಒಳ್ಳೆಯ ಕೀರ್ತಿಯನ್ನು ಹೊಂದುತ್ತೀಯೆ. ಒಂದೇ ಮನಸ್ಸಿನಿಂದ ಈ ವ್ರತವನ್ನು ಮಾಡು.

೨೪. ಫಾಲ್ಗುಣದ ಬಹುಳ ಏಕಾದಶಿಯು ವಿಜಯೈಕಾದಶಿಯು. ಆ ವ್ರತವನ್ನು ನೀನು ಮಾಡಿದರೆ ನಿನಗೆ ಜಯವು ಲಭಿಸುತ್ತದೆ.

೨೫. ಬ್ರಹ್ಮನು ಹೇಳಿದನು–ಹಾಗೆ ಮಾಡಿದರೆ ನೀನು ಕಪಿಗಳೊಡನೆ ಸಮುದ್ರವನ್ನು ದಾಟುತ್ತೀಯೆ. ಸಂಶಯವಿಲ್ಲ. ಈ ವ್ರತದ ವಿಧಿಯನ್ನು ಹೇಳುತ್ತೇನೆ. ಕೇಳು.

೨೬. ದಶಮಿಯ ದಿನ ಚಿನ್ನ ಬೆಳ್ಳಿ ತಾಮ್ರ ಮಣ್ಣು ಇವುಗಳಲ್ಲಿ ಶಕ್ತಿಯಿದ್ದ ಯಾವುದಾದರೂ ಒಂದು ಕುಂಭವನ್ನು ಮಾಡಿಸಬೇಕು.

೨೭. ಆ ಕುಂಭಕ್ಕೆ ಅಲಂಕರಿಸಿ ನೀರನ್ನು ತುಂಬಿ ಮೇಲೆ ಪಂಚಪಲ್ಲವಗಳನ್ನಿಟ್ಟು ಅದರಮೇಲೆ ಚಿನ್ನದ ನಾರಾಯಣ ಪ್ರತಿಮೆಯನ್ನು ಇಡಬೇಕು.

ಏಕಾದಶೀ ದಿನೇ ಪ್ರಾಪ್ತೇ ಪ್ರಾತಸ್ಸ್ನಾನಂ ಸಮಾಚರೇತ್ ।
ನಿಶ್ಚಲಂ ಸ್ಥಾಪಯೇತ್ಕುಂಭಂ ಕಂಠಮಾಲ್ಯಾನುಲೇಪನೈಃ ॥ ೨೮ ॥

ಪೂಗೀಫಲೈರ್ನಾರಿಕೇರೈಃ ಪೂಜಯೇಚ್ಚ ವಿಶೇಷತಃ ।
ಸಪ್ತಧಾನ್ಯಾನಿ ಸರ್ವಾಣಿ ಯವಾನ್ಯುಪರಿವಿನ್ಯಸೇತ್ ॥ ೨೯ ॥

ಗಂಧೈರ್ಧೂಪೈಶ್ಚ ದೀಪೈಶ್ಚ ನೈವೇದ್ಯೈರ್ವಿವಿಧೈರಪಿ ।
ಕುಂಭಾಗ್ರೇ ತದ್ದಿನಂ ರಾಮ ನೀಯತಾಂ ಸತ್ಕಥಾದಿಭಿಃ ॥ ೩೦ ॥

ರಾತ್ರೌ ಜಾಗರಣಂ ಚೈವ ತಸ್ಯಾಗ್ರೇ ಕಾರಯೇದ್ಬುಧಃ ।
ಪ್ರಕಾಶಯೇದ್ಘೃತಂ ದೀಪಮಖಂಡವ್ರತಹೇತವೇ ॥ ೩೧ ॥

ದ್ವಾದಶೀ ದಿವಸೇ ಪ್ರಾಪ್ತೇ ಮಾರ್ತಾಂಡಸ್ಯೋದಯೇ ಸತಿ ।
ನೀತ್ವಾ ಕುಂಭಂ ಜಲೋದ್ದೇಶೇ ನದ್ಯಾಂ ಪ್ರಸ್ರವಣೇ ತಥಾ ॥ ೩೨ ॥

---

೨೮. ಏಕಾದಶಿಯದಿವಸ ಸ್ನಾನಮಾಡಿ ಆ ಕುಂಭವನ್ನು ಅಲ್ಲಾಡದಂತೆ ಇಡಬೇಕು. ಅದರ ಕತ್ತಿಗೆ ಹೂವಿನ ಮಾಲೆಯನ್ನು ಹಾಕಬೇಕು. ಗಂಧವನ್ನು ತೊಡೆಯಬೇಕು.

೨೯. ಅಡಕೆ ತೆಂಗುಗಳಿಂದ ಪೂಜಿಸಬೇಕು. ಏಳು ಧಾನ್ಯಗಳನ್ನೂ ಅಕ್ಷತೆಯನ್ನೂ ಮೇಲೆ ಹಾಕಿ ಪೂಜೆಮಾಡಬೇಕು.

೩೦. ಗಂಧ ಧೂಪ ದೀಪಗಳಿಂದಲೂ ನೈವೇದ್ಯಗಳಿಂದಲೂ ಪೂಜಿಸಬೇಕು. ಆ ದಿನವೆಲ್ಲವೂ ಆ ಕಲಶದ ಎದುರಿನಲ್ಲಿ ಪುಣ್ಯಕಥೆಗಳನ್ನು ಹೇಳುತ್ತಾ ಕಾಲವನ್ನು ಕಳೆಯಬೇಕು.

೩೧. ರಾತ್ರಿಯಲ್ಲಿ ಜಾಗರಣವನ್ನು ಅದರ ಎದುರಿನಲ್ಲಿಯೇ ಮಾಡಬೇಕು. ವ್ರತಸಂಪೂರ್ತಿಗೋಸ್ಕರ ತುಪ್ಪದ ದೀಪವನ್ನು ಆದಿನ ಹಗಲೂ ರಾತ್ರಿಯೂ ಇರುವಂತೆ ಇಡಬೇಕು.

೩೨-೩೩. ದ್ವಾದಶಿಯ ದಿವಸ ಸೂರ್ಯನು ಹುಟ್ಟಿದಮೇಲೆ ಆ ಕಲಶವನ್ನು ನೀರಿರುವ ನದಿ ಕೊಳ ಕೆರೆ ಇವುಗಳಲ್ಲಿ ಯಾವುದಾದರೂ ಒಂದರ ಬಳಿಗೆ ತೆಗೆದು

ತಟಾಕೇ ಸ್ಥಾಪಯಿತ್ವಾ ತಂ ಪೂಜಯಿತ್ವಾ ಯಥಾವಿಧಿ ।
ದದ್ಯಾತ್ಸದೈವತಂ ಕುಂಭಂ ಬ್ರಾಹ್ಮಣೇ ವೇದಪಾರಗೇ　　　　|| ೩೩ ||

ಕುಂಭೇನ ಸಹ ರಾಜೇಂದ್ರ ಮಹಾದಾನಾನಿ ದಾಪಯೇತ್ ।
ಅನೇನ ವಿಧಿನಾ ರಾಮ ಯೂಥಪೈಸ್ಸಹ ಸಂಗತಃ ।
ಕುರು ವ್ರತಂ ಪ್ರಯತ್ನೇನ ವಿಜಯಸ್ತೇ ಭವಿಷ್ಯತಿ　　　　|| ೩೪ ||

|| ಬ್ರಹ್ಮೋವಾಚ ||

ಇತಿ ಶ್ರುತ್ವಾ ತತೋ ರಾಮೋ ಯಥೋಕ್ತಮಕರೋತ್ತದಾ ।
ಕೃತೇ ವ್ರತೇ ಸ ವಿಜಯೀ ಬಭೂವ ರಘುನಂದನಃ　　　　|| ೩೫ ||

ಪ್ರಾಪ್ತಾ ಸೀತಾ ಜಿತಾ ಲಂಕಾ ಪೌಲಸ್ತ್ಯೋ ನಿಹತೋ ರಣೇ ।
ಅನೇನ ವಿಧಿನಾ ಪುತ್ರ ಯೇ ಕುರ್ವಂತಿ ನರಾ ವ್ರತಂ ||
ಇಹ ಲೋಕೇ ಜಯಪ್ರಾಪ್ತಿಃ ಪರಲೋಕಸ್ತಥಾಕ್ಷಯಃ　　　　|| ೩೬ ||

---

ಕೊಂಡು ಹೋಗಿ ಅಲ್ಲಿ ಅದನ್ನಿಟ್ಟು ಪೂಜಿಸಿ ಆ ದೇವತಾ ಪ್ರತಿಮೆಸಹಿತವಾಗಿ ಆ ಕಲಶವನ್ನು ವೇದವನ್ನು ಓದಿದ ಬ್ರಾಹ್ಮಣನಿಗೆ ಕೊಡಬೇಕು.

೩೪. ಆ ಕಲಶದಾನದ ಜೊತೆಯಲ್ಲಿ ಮಹಾದಾನಗಳನ್ನೂ ಮಾಡಬೇಕು. ಈ ವಿಧಿಯಪ್ರಕಾರವಾಗಿ ನೀನು ಸೈನ್ಯಸಮೇತವಾಗಿ ವ್ರತವನ್ನು ಮಾಡು. ನಿನಗೆ ವಿಜಯವು ಲಭಿಸುತ್ತದೆ.

೩೫. ಬ್ರಹ್ಮನು ಹೇಳಿದನು–ರಾಮನು ಇದನ್ನು ಕೇಳಿ ಅವನು ಹೇಳಿದಂತೆ ಮಾಡಿದನು. ಈ ವ್ರತವನ್ನು ಮಾಡುತ್ತಲೂ ಜಯವನ್ನು ಹೊಂದಿದನು.

೩೬. ಹೀಗೆ ಮಾಡಲು ರಾಮನು ಸೀತೆಯನ್ನು ಹೊಂದಿದನು. ಲಂಕೆಯನ್ನು ಜಯಿಸಿದನು. ರಾವಣನನ್ನು ಕೊಂದನು. ಈ ವ್ರತವನ್ನು ವಿಧಿವತ್ತಾಗಿ ಮಾಡುವವರು ಇಹದಲ್ಲಿ ಜಯವನ್ನೂ ಹೊಂದಿ ಪರದಲ್ಲಿ ಅಕ್ಷಯವಾದ ಮೋಕ್ಷವನ್ನೂ ಹೊಂದುವರು.

॥ ಶ್ರೀ ಕೃಷ್ಣ ಉವಾಚ ॥

ಏತಸ್ಮಾತ್ಕಾರಣಾತ್ಪಾರ್ಥ ಕರ್ತವ್ಯಂ ವಿಜಯಾವ್ರತಂ ।
ಪಠನಾಚ್ಛ್ರವಣಾಚ್ಚೈವ ವಾಜಪೇಯಫಲಂ ಲಭೇತ್ ॥ ೩೭ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಪತಿ
ನಾರದ ಸಂವಾದಾನ್ತರ್ಗತ ಕೃಷ್ಣ ಯುಧಿಷ್ಠಿರ ಸಂವಾದೇ
ಫಾಲ್ಗುಣ ಕೃಷ್ಣ ವಿಜಯೈಕಾದಶೀ ಮಾಹಾತ್ಮ್ಯಂ ನಾಮ
ಷಟ್‌ಚತ್ವಾಂಶೋಽಧ್ಯಾಯಸ್ಸಮಾಪ್ತಃ

---

೩೭. ಕೃಷ್ಣನು ಹೇಳಿನದು–ಈ ಕಾರಣದಿಂದ ಎಲೈ ಯಧಿಷ್ಠಿರನೇ ಈ ವಿಜಯಾವ್ರತವನ್ನು ಮಾಡಬೇಕು. ಇದನ್ನು ಹೇಳಿದರೂ ಕೇಳಿದರೂ ವಾಜಪೇಯ ಫಲವನ್ನು ಹೊಂದುವನು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಪತಿ
ನಾರದರ ಸಂವಾದಾಂತರ್ಗತವಾದ ಕೃಷ್ಣ ಯುಧಿಷ್ಠಿರರ ಸಂವಾದದಲ್ಲಿ
ಫಾಲ್ಗುಣ ಕೃಷ್ಣ ವಿಜಯೈಕಾದಶೀ ಮಹಿಮೆ ಎಂಬ
ನಾಲ್ವತ್ತಾರನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

-X-

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ಸಪ್ತಚತ್ವಾರಿಂಶೋಽಧ್ಯಾಯಃ ||



|| ಯುಧಿಷ್ಠಿರ ಉವಾಚ ||

ಮಾಹಾತ್ಮ್ಯಂ ವಿಜಯಾಯಾಶ್ಚ ಶ್ರುತಂ ಕೃಷ್ಣ ಮಹತ್ಫಲಂ ।
ಫಾಲ್ಗುನಸ್ಯಾರ್ಜುನೇ ಪಕ್ಷೇ ಯನ್ನಾಮ್ನೀ ತಾಂ ವದಾಧುನಾ || ೧ ||

|| ಶ್ರೀ ಕೃಷ್ಣ ಉವಾಚ ||

ಧರ್ಮಪುತ್ರ ಮಹಾಭಾಗ ಶೃಣು ವಕ್ಷ್ಯಾಮಿ ತೇ ಽಧುನಾ ।
ಯೋಕ್ತಾ ಪೃಷ್ಟೇನ ಮಾಂಧಾತ್ರಾ ವಸಿಷ್ಠೇನ ಮಹಾತ್ಮನಾ || ೨ ||

ಫಾಲ್ಗುನಸ್ಯ ವಿಶೇಷೇಣ ವಿಶೇಷಃ ಕಥಿತೋ ನೃಪ ।
ಆಮಲಕ್ಯಾ ವ್ರತಂ ಪುಣ್ಯಂ ವಿಷ್ಣುಲೋಕಫಲಪ್ರದಂ || ೩ ||

---

## ನಲವತ್ತೇಳನೆಯ ಅಧ್ಯಾಯವು



೧. ಯುದಿಷ್ಠಿರನು ಹೇಳಿದನು–ಎಲೈ ಕೃಷ್ಣನೆ! ಮಹಾಫಲವುಳ್ಳ ವಿಜಯೈಕಾದಶಿಯ ಮಹಿಮೆಯನ್ನು ಕೇಳಿದೆನು. ಅದೇ ಫಾಲ್ಗುಣ ಶುಕ್ಲಪಕ್ಷದಲ್ಲಿ ಬರುವ ಏಕಾದಶಿಗೆ ಹೆಸರೇನು? ಹೇಳು.

೨. ಕೃಷ್ಣನು ಹೇಳಿದನು–ಎಲೈ ಧರ್ಮಜನೆ! ಮಾಂಧಾತನು ವಸಿಷ್ಠನನ್ನು ಕೇಳಲಾಗಿ ಆತನು ಹೇಳಿದುದನ್ನು ಹೇಳುತ್ತೇನೆ. ಕೇಳು.

೩. ಫಾಲ್ಗುಣಮಾಸದಲ್ಲಿ ಅತಿಶಯವಾಗಿ ಒಂದು ವಿಶೇಷವ್ರತವನ್ನು ಹೇಳಿದ್ದಾರೆ. ಆ ವ್ರತಕ್ಕೆ ಆಮಲಕೀವ್ರತವೆಂದು ಹೆಸರು. ಅದು ವಿಷ್ಣುಲೋಕದ ಫಲವನ್ನು ಕೊಡುತ್ತದೆ.

ಆಮಲಕ್ಯಾ ಅಧೋ ಗತ್ವಾ ಜಾಗರಂ ತತ್ರ ಕಾರಯೇತ್ ।
ಕೃತ್ವಾ ಜಾಗರಣಂ ರಾತ್ರೌ ಗೋಸಹಸ್ರಫಲಂ ಲಭೇತ್ ॥ ೪ ॥

॥ ಮಾಂಧಾತೋವಾಚ ॥

ಆಮಲಕೀ ಕದಾ ಹ್ಯೇಷಾ ಉತ್ಪನ್ನಾ ದ್ವಿಜಸತ್ತಮ ।
ಏತತ್ಸರ್ವಂ ಮಮಾಚಕ್ಷ್ವ ಪರಂ ಕೌತೂಹಲಂ ಹಿ ಮೇ ॥ ೫ ॥

ಕಸ್ಮಾದಿಯಂ ಪವಿತ್ರಂ ಚ ಕಸ್ಮಾತ್ಪಾಪಪ್ರಣಾಶಿನೀ ।
ಕಸ್ಮಾಜ್ಜಾಗರಣಂ ಕೃತ್ವಾ ಗೋಸಹಸ್ರಫಲಂ ಲಭೇತ್ ॥ ೬ ॥

॥ ವಸಿಷ್ಠ ಉವಾಚ ॥

ಕಥಯಾಮಿ ಮಹಾಭಾಗ ಯಥೇಯಮುಭವತ್ಕ್ಷಿತೌ ।
ಆಮಲಕೀ ಮಹಾವೃಕ್ಷಃ ಸರ್ವಪಾಪಪ್ರಣಾಶನಃ ॥ ೭ ॥

---

೪. ನೆಲ್ಲಿಯ ಮರದಕೆಳಗೆ ಹೋಗಿ ಜಾಗರಣೆಯನ್ನು ಮಾಡಬೇಕು. ಆ ರೀತಿಯಾಗಿ ರಾತ್ರಿಯೆಲ್ಲಾ ಜಾಗರಣೆಮಾಡಿದರೆ ಸಾವಿರಗೋಗಳನ್ನು ದಾನ ಮಾಡಿದ ಫಲವು ಬರುತ್ತದೆ

೫. ಮಾಂಧಾತನು ಹೇಳಿದನು-ಎಲೈ ಋಷಿಶ್ರೇಷ್ಠನೆ! ಈ ಆಮಲಕೀ ವ್ರತವು ಯಾವಾಗ ಉತ್ಪನ್ನವಾಯಿತು? ನನಗೆ ಬಹು ಆಸೆಯಿದೆ ಇದೆಲ್ಲವನ್ನೂ ಹೇಳು.

೬. ಆಮಲಕಿವ್ರತವು ಹೇಗೆ ಪವಿತ್ರವಾಯಿತು? ಪಾಪವನ್ನು ಹೇಗೆ ಹಾಳುಮಾಡುತ್ತದೆ? ಜಾಗರಣೆಯನ್ನು ಮಾಡಿದರೆ ಸಾವಿರ ಗೋದಾನದ ಫಲವನ್ನು ಹೊಂದುವುದು ಹೇಗೆ?

೭. ವಸಿಷ್ಠನು ಹೇಳಿದನು–ಆ ನೆಲ್ಲಿಯ ಮರವು ಪಾಪವನ್ನು ನಾಶಪಾಡುವ ಬಗೆಯನ್ನೂ ಆಮಲಕೀವ್ರತವು ಭೂಮಿಯಲ್ಲಿ ಹರಡಿದ ಬಗೆಯನ್ನೂ ಹೇಳುತ್ತೇನೆ, ಕೇಳು.

ಏಕಾರ್ಣವೇ ಪುರಾ ಜಾತೇ ನಷ್ಟೇ ಸ್ಥಾವರಜಂಗಮೇ |
ನಷ್ಟೇ ದೇವಾಸುರಗಣೇ ನಷ್ಟೇ ಚೋರಗರಾಕ್ಷಸೇ || ೮ ||

ತತ್ರ ದೇವಾವಿಧಿದೇವೇಶಃ ಪರಮಾತ್ಮಾ ಸನಾತನಃ |
ಜಗಾಮ ಬ್ರಹ್ಮ ಪರಮಾತ್ಮನಃ ಪದಮವ್ಯಯಂ || ೯ ||

ತತೋಽಸ್ಯ ಜಗತೋ ಬ್ರಹ್ಮಮುಖಾಚ್ಛಶಿಸಮಪ್ರಭಃ |
ಷ್ಠೀವನಾದ್ಬಿಂದುರುತ್ಪನ್ನಃ ಸ ಭೂಮೌ ನಿಪಪಾತ ಹ || ೧೦ ||

ತಸ್ಮಾದ್ಬಿಂದೋಃ ಸಮುತ್ಪನ್ನಃ ಸ್ವಯಂ ಧಾತ್ರೀನಗೋ ಮಹಾ್ |
ಶಾಖಾಪ್ರಶಾಖಾಬಹುಳಃ ಫಲಭಾರೇಣ ನಾಮಿತಃ || ೧೧ ||

ಸರ್ವೇಷಾಂ ಚೈವ ವೃಕ್ಷಾಣಾಮಾದಿರೋಹಃ ಪ್ರಕೀರ್ತಿತಃ |
ಏತಸ್ಮಿನ್ನೇವ ಕಾಲೇ ತು ಸಿಸೃಕ್ಷುರಖಿಲಾಃ ಪ್ರಜಾಃ || ೧೨ ||

---

೮. ಪ್ರಪಂಚಬಲ್ಲವೂ ನೀರಿನಿಂದ ಆವರಿಸಲ್ಪಟ್ಟು ಒಂದೇ ಸಮುದ್ರವಾಯಿತು. ಅಗ ದೇವತೆಗಳೂ ದೈತ್ಯರೂ ಸರ್ಪಗಳೂ ರಾಕ್ಷಸರೂ ಎಲ್ಲರೂ ನಾಶವಾದರು.

೯. ಆಗ ದೇವಾದಿದೇವನೂ ಸನಾತನನೂ ಪರಮಾತ್ಮನೂ ಆದ ಸ್ವಾಮಿಯು ತನ್ನ ಪರಮಪದವನ್ನು ಹೊಂದಿದ್ದನು.

೧೦. ಆಗ ಆ ಪರಬ್ರಹ್ಮನು ಉಗಿಯಲು ಚಂದ್ರನಂತೆ ಪ್ರಕಾಶವಾದ ಒಂದು ಬಿಂದುವು ಹುಟ್ಟಿ ಭೂಮಿಯಲ್ಲಿ ಬಿದ್ದಿತು.

೧೧. ಆ ಬಿಂದುವಿನ ದೆಸೆಯಿಂದ ಒಂದು ನೆಲ್ಲಿಯ ಮರವು ದೊಡ್ಡದಾಗಿ ಹುಟ್ಟಿತು. ಅದು ಕೊಂಬೆ ಮರುಗೊಂಬೆಗಳಿಂದ ಕೂಡಿ ಹಣ್ಣಿನಿಂದ ತುಂಬಿ ಬಗ್ಗಿತು.

೧೨. ಆ ಮರವೇ ಮರಗಳಿಗೆಲ್ಲಾ ಮೊದಲನೆಯದಾಯಿತು. ಇದೇ ಕಾಲದಲ್ಲಿಯೇ ಎಲ್ಲಾ ಪ್ರಜೆಗಳನ್ನೂ ಸೃಷ್ಟಿಸಲು ಆ ಪರಬ್ರಹ್ಮನಿಗೆ ಇಚ್ಛೆಯು ಬಂದಿತು.

ಬ್ರಹ್ಮಾಣಮಸೃಜತ್ತಸ್ಮಾತ್ಸಂಸೃಷ್ಟಾಶ್ಚ ಇಮಾಃ ಪ್ರಜಾಃ ।
ದೇವದಾನವಗಂಧರ್ವಯಕ್ಷರಾಕ್ಷಸಪನ್ನಗಾನ್ ॥ ೧೩ ॥

ಅಸೃಜದ್ಭಗವಾನ್ ದೇವೋ ಮಹರ್ಷೀಂಶ್ಚ ತಥಾಽಮಲಾನ್ ।
ಆಜಗ್ಮುಸ್ತತ್ರ ದೇವಾಸ್ತೇ ಯತ್ರ ಧಾತ್ರೀ ಹರಿಪ್ರಿಯಾ ॥ ೧೪ ॥

ತಾಂ ದೃಷ್ಟ್ವಾ ತೇ ಮಹಾಭಾಗ ಪರಂ ವಿಸ್ಮಯಮಾಗತಾಃ ।
ಪರಸ್ಪರಮವೇಕ್ಷಂತೋ ವೃಕ್ಷದರ್ಶನಲಾಲಸಾಃ ॥ ೧೫ ॥

ಪ್ಲಕ್ಷಾದಯೋ ಯಥಾಪೂರ್ವಂ ವಿತಿತಾಸ್ಸರ್ವ ಏವ ಚ ।
ನ ಜಾನೀಮ ಇಮಂ ವೃಕ್ಷಂ ಚಿಂತಯಂತೋಽಭಿಸಂಸ್ಥಿತಾಃ ॥ ೧೬ ॥

ಏವಂ ಚಿಂತಯತಾಂ ತೇಷಾಂ ವಾಗುವಾಚಾಶರೀರಿಣೀ ॥ ೧೭ ॥

---

೧೩. ಆಗ ಆ ಸ್ವಾಮಿಯು ಬ್ರಹ್ಮನನ್ನು ಸೃಷ್ಟಿಸಿದನು. ಅನಂತರ ಆ ಬ್ರಹ್ಮನು ಈ ಪ್ರಜೆಗಳೆಲ್ಲರನ್ನೂ, ದೇವ, ದಾನವ, ಗಂಧರ್ವ, ಯಕ್ಷ, ರಾಕ್ಷಸ, ಪನ್ನಗರನ್ನೂ ಸೃಷ್ಟಿಸಿದನು. ಅನಂತರ ಅತ್ಯುತ್ತಮರಾದ ಋಷಿಗಳನ್ನೂ ಸೃಷ್ಟಿಸಿದನು.

೧೪-೧೫. ಆಗ ದೇವತೆಗಳು ಹರಿಪ್ರಿಯವಾದ ನೆಲ್ಲಿಯ ಮರವಿವ್ವಲ್ಲಿಗೆ ಬಂದರು. ಆ ಮರವನ್ನು ಅವರು ನೋಡಿ ಆಶ್ಚರ್ಯಪಡುತ್ತಾ ಒಬ್ಬರಿಗೊಬ್ಬರು ನೋಡಿಕೊಳ್ಳುತ್ತ ಮಾತಾಡಿಕೊಳ್ಳುತ್ತಿದ್ದರು.

೧೬-೧೭. ಇದೇನು ! ಬಸರಿ ಮುಂತಾದ ಮರಗಳನ್ನೂ ಎಲ್ಲವನ್ನೂ ನೋಡಿದ್ದೇವೆ. ಅವೆಲ್ಲವೂ ನಮಗೆ ಗೊತ್ತಿವೆ. ಈ ಮರವು ನಮಗೆ ಯಾವುದೆಂದು ತಿಳಿಯದಾಗಿದೆ. ಎಂದು ಅದರ ಸುತ್ತಲೂ ನಿಂತಿದ್ದರು. ಹೀಗೆ ಇವರು ಯೋಚಿಸುತ್ತ ನಿಂತರಲು ಆಗ ಒಂದು ಅಶರೀರವಾಣಿಯು ನುಡಿಯಿತು.

|| ಆಕಾಶವಾಣ್ಯುವಾಚ ||

ಆಮಲಕೀನಗೋ ಹ್ಯೇಷಃ ಪ್ರವರೋ ವೈಷ್ಣವೋ ಮತಃ ।
ಅಸ್ಯ ಸಂಸ್ಮರಣಾದೇವ ಲಭೇದ್ಗೋದಾನಜಂ ಫಲಂ || ೧೮ ||

ಸ್ಪರ್ಶನಾದ್ದ್ವಿಗುಣಂ ಪುಣ್ಯಂ ತ್ರಿಗುಣಂ ಭಕ್ಷಣಾತ್ತಥಾ ।
ತಸ್ಮಾತ್ಸರ್ವಪ್ರಯತ್ನೇನ ಸೇವ್ಯಾ ಆಮಲಕೀ ಸದಾ || ೧೯ ||

ಸರ್ವಪಾಪಹರಾ ಪ್ರೋಕ್ತಾ ವೈಷ್ಣವೀ ಪಾಪನಾಶಿನೀ ।
ತಸ್ಯಾ ಮೂಲೇ ಸ್ಥಿತೋ ವಿಷ್ಣುಸ್ತದೂರ್ಧ್ವಂ ಚ ಪಿತಾಮಹಃ || ೨೦ ||

ಸ್ಕಂಧೇ ಚ ಭಗವಾನ್ರುದ್ರಃ ಸಂಸ್ಥಿತಃ ಪರಮೇಶ್ವರಃ ।
ಶಖಾಸು ಮುನಯಸ್ಸರ್ವೇ ಪ್ರಶಾಖಾಸು ಚ ದೇವತಾಃ || ೨೧ ||

ಪರ್ಣೇಷು ವಸವೋ ದೇವಾಃ ಪುಷ್ಪೇಷು ಮರುತಸ್ತಥಾ ।
ಪ್ರಜಾನಾಂ ಪತಯಸ್ಸರ್ವೇ ಫಲೇಷ್ವೇವ ವ್ಯವಸ್ಥಿತಾಃ || ೨೨ ||

---

೧೮. ಆಕಾಶವಾಣಿಯು ಹೇಳಿತು–ಇದು ನೆಲ್ಲಿಯ ಮರವು. ಇದು ವೈಷ್ಣವರಿಗೆ ಉತ್ತಮವಾದುದು. ಇದನ್ನು ಸ್ಮರಿಸಿದರೇನೆ ಗೋದಾನಮಾಡಿದ ಫಲವುಬರುತ್ತದೆ.

೧೯. ಅದನ್ನು ಮುಟ್ಟಿದರೆ ನೋಡಿದುದಕ್ಕಿಂತ ಎರಡರಷ್ಟು ಪುಣ್ಯವೂ ಆದರ ಕಾಯನ್ನು ತಿಂದರೆ ಮುಟ್ಟಿದುದಕ್ಕಿಂತಲೂ ಮೂರರಷ್ಟು ಪುಣ್ಯವೂ ಬರುತ್ತತೆ. ಆದುದರಿಂದ ಪ್ರಯತ್ನಪಟ್ಟು ನೆಲ್ಲಿಯಕಾಯನ್ನು ತಿನ್ನಬೇಕು.

೨೦-೨೨. ಈ ನೆಲ್ಲಿಯು ಎಲ್ಲಾ ಪಾಪಗಳನ್ನೂ ನಾಶಮಾಡುತ್ತದೆ. ವಿಷ್ಣುವಿನ ಸಂಬಂಧವಾದುದು. ಪಾಪನಾಶಕವು. ಆ ಮರದ ಬುಡದಲ್ಲಿ ವಿಷ್ಣುವೂ ಮೇಲುಗಡೆಯಲ್ಲಿ ಬ್ರಹ್ಮನೂ ಮಧ್ಯದಲ್ಲಿ ರುದ್ರನೂ ದಪ್ಪವಾದ ಕೊಂಬೆಗಳಲ್ಲಿ ಮುನಿಗಳೂ ಸಣ್ಣ ಕೊಂಬೆಗಳಲ್ಲಿ ದೇವತೆಗಳೂ ಎಲೆಗಳಲ್ಲಿ ವಸುಗಳೂ ಹೂಗಳಲ್ಲಿ ಮರುತ್ತುಗಳೂ ಫಲಗಳಲ್ಲಿ ಪ್ರಜಾಪತಿಗಳೂ ವಾಸವಾಗಿದ್ದಾರೆ. ಈ ರೀತಿಯಾಗಿ ಈ ನೆಲ್ಲಿಯು

ಸರ್ವದೇವಮಯೀ ಹ್ಯೇಷಾ ಧಾತ್ರೀ ಚ ಕಥಿತಾ ಮಯಾ ।
ತಸ್ಮಾತ್ಪೂಜ್ಯತಮಾ ಹ್ಯೇಷಾ ವಿಷ್ಣುಭಕ್ತಿಪರಾಯಣೈಃ ॥ ೨೩ ॥

॥ ಋಷಯ ಊಚುಃ ॥

ಕಂ ಭವಂತಂ ಹಿ ಜಾನೀಮಃ ಕಸ್ಮಾತ್ಕಾರಣತಸ್ಸದಾ ।
ದೇವೋ ವಾ ಯದಿ ವಾ ಚಾನ್ಯಃ ಕಥಯಸ್ವ ಯಥಾತಥಂ ॥ ೨೪ ॥

॥ ವಾಗುವಾಚ ॥

ಯಃ ಕರ್ತಾ ಸರ್ವಭೂತಾನಾಂ ಭುವನಾನಾಂ ಚ ಸರ್ವಶಃ ।
ವಿಸ್ಮಿತಾನ್ವಿದುಷಃ ಪ್ರೇಕ್ಷ್ಯಃ ಸೋಽಹಂ ವಿಷ್ಣುಸ್ಸನಾತನಃ ॥ ೨೫ ॥

॥ ವಸಿಷ್ಠ ಉವಾಚ ॥

ತತಶ್ಶ್ರುತ್ವಾ ದೇವದೇವಭಾಷಿತಂ ಬ್ರಹ್ಮಣಸ್ಸುತಾಃ ।
ವಿಸ್ಮಯೋತ್ಫುಲ್ಲನಯನಾಃ ಪರಂ ವಿಸ್ಮಯಮಾಗತಃ ॥
ಅನಾದಿನಿಧನಂ ದೇವಂ ಸ್ತೋತುಂ ತತ್ರ ಪ್ರಚಕ್ರಮುಃ ॥ ೨೬ ॥

---

ಮರವು ಸರ್ವದೇವತೆಗಳ ಸ್ವರೂಪವಾದುದು. ಆದುದರಿಂದ ವಿಷ್ಣುಭಕ್ತರು ಈ ನೆಲ್ಲಿಯ ಮರವನ್ನು ಪೂಜಿಸಲೇ ಬೇಕು.

೨೪. ಋಷಿಗಳು ಹೇಳಿದರು—ನೀನು ಯಾರೆಂದು ತಿಳಿಯೋಣ? ನೀನು ಹೀಗೆ ಹೇಳಲು ಕಾರಣವೇನು? ನೀನು ದೇವರೆ? ಅಥವಾ ಮತ್ತೆ ಯಾವ ನಾದರೂ ಆಗಿದ್ದೀಯಾ? ನಿಶ್ಚಯವನ್ನು ಹೇಳು.

೨೫. ವಾಣಿಯು ಹೇಳಿತು—ಎಲ್ಲಾ ಭೂತಗಳನ್ನೂ ಪ್ರಪಂಚಗಳನ್ನೂ ಸೃಷ್ಟಿಸಿದ ಜ್ಞಾನಿಗಳಿಗೂ ನೋಡಲಾಗದ ಆ ಸನಾತನನಾದ ವಿಷ್ಣುವೇ ನಾನು.

೨೬. ವಸಿಷ್ಠನು ಹೇಳಿದನು—ಆ ಬ್ರಹ್ಮನ ಮಕ್ಕಳು ಆ ಸ್ವಾಮಿಯ ಮಾತನ್ನು ಕೇಳಿ ಆಶ್ಚರ್ಯದಿಂದ ಅರಳಿದ ಕಣ್ಣುಗಳುಳ್ಳವರಾದರು. ಆಮೇಲೆ ಸಾವುನೋವುಗಳೂ ಆದಿ ಅಂತ್ಯಗಳೂ ಇಲ್ಲದ ಆ ಸ್ವಾಮಿಯನ್ನು ಸ್ತೋತ್ರ ಮಾಡಿದರು.

|| ಋಷಯ ಊಚುಃ ||

ನಮೋ ಭೂತಾತ್ಮಭೂತಾಯ ಆತ್ಮನೇ ಪರಮಾತ್ಮನೇ ।
ಅಚ್ಯುತಾಯ ನಮೋ ನಿತ್ಯಮನಂತಾಯ ನಮೋ ನಮಃ　　　|| ೨೭ ||

ದಾಮೋದರಾಯ ಕವಯೇ ಯಜ್ಞೇಶಾಯ ನಮೋ ನಮಃ ।
ನಮೋ ಮಾಯಾವತೇ ತುಭ್ಯಂ ವಿಶ್ವೇಶಾಯ ನಮೋಽಸ್ತು ತೇ　|| ೨೮ ||

|| ವಸಿಷ್ಠ ಉವಾಚ ||

ಏವಂ ಸ್ತುತಸ್ತು ಋಷಿಭಿಃ ತುತೋಷ ಭಗವಾನ್ ಹರಿಃ ।
ಪ್ರತ್ಯುವಾಚ ಮಹರ್ಷೀಂಸ್ತಾನಭೀಷ್ಟಂ ಕಿಂ ದದಾಮಿ ವಃ　　|| ೨೯ ||

|| ಋಷಯ ಊಚುಃ ||

ಯದಿ ತುಷ್ಟೋಽಸಿ ಭಗವನ್ನಸ್ಮಾಕಂ ಹಿತಕಾಮ್ಯಯಾ ।
ವ್ರತಂ ಕಿಂಚಿತ್ಸಮಾಖ್ಯಾಹಿ ಸ್ವರ್ಗಮೋಕ್ಷಫಲಪ್ರದಂ　　|| ೩೦ ||

---

೨೭. ಋಷಿಗಳು ಹೇಳಿದರು—ಪ್ರಾಣಿಗಳೆಲ್ಲಕ್ಕೂ ಜೀವಸ್ವರೂಪನಾದ ಆತ್ಮನೂ ಪರಮಾತ್ಮನೂ ಆದ ಸ್ವಾಮಿಗೆ ನಮಸ್ಕಾರವು. ಅಚ್ಯುತ (ನಾಶರಹಿತ)ನಿಗೆ ನಮಸ್ಕಾರವು. ಅನಂತನಿಗೆ (ನಾಶವಿಲ್ಲದವನಿಗೆ) ನಮಸ್ಕಾರವು.

೨೮. ದಾಮೋದರನೂ ಕವಿಯೂ ಆದ ನಿನಗೆ ನಮಸ್ಕಾರವು. ಯಜ್ಞಕ್ಕೆ ಒಡೆಯನಾದ ನಿನಗೆ ನಮಸ್ಕಾರವು.

೨೯. ವಸಿಷ್ಠನು ಹೇಳಿದನು—ಋಷಿಗಳು ಹೀಗೆ ಸ್ತೋತ್ರಮಾಡಲು ಭಗವಂತನಾದ ಹರಿಯು ಆ ಮಹರ್ಷಿಗಳನ್ನು ಕುರಿತು ನಿಮಗೆ ಇಷ್ಟವಾದುದನ್ನು ಏನನ್ನು ಕೊಡಲಿ ? ಎಂದು ಕೇಳಿದನು.

೩೦. ಋಷಿಗಳು ಹೇಳಿದರು—ಎಲೈ ಸ್ವಾಮಿಯೇ! ನೀನು ಪ್ರಸನ್ನನಾಗಿದ್ದರೆ ನಮ್ಮಗಳ ಹಿತಕ್ಕೋಸ್ಕರ ಸ್ವರ್ಗಮೋಕ್ಷಫಲವನ್ನು ಕೊಡುವ ಯಾವುದಾದರೂ ಒಂದು ವ್ರತವನ್ನು ಉಪದೇಶಿಸು.

ಧನಧಾನ್ಯಪ್ರದಂ ಪುಣ್ಯಮಾತ್ಮನಸ್ತುಷ್ಟಿಕಾರಣಂ ।
ಅಲ್ಪಾಯಾಸಂ ಬಹುಫಲಂ ವ್ರತಾನಾಂ ವ್ರತಮುತ್ತಮಂ ॥ ೩೧ ॥

ಕೃತೇನ ಯೇನ ದೇವೇಶ ವಿಷ್ಣುಲೋಕೇ ಮಹೀಯತೇ ॥ ೩೨ ॥

॥ ವಿಷ್ಣುರುವಾಚ ॥

ಫಾಲ್ಗುನೇ ಶುಕ್ಲಪಕ್ಷೇ ತು ಪುಷ್ಯೇಣ ದ್ವಾದಶೀ ಯದಿ ।
ಭವೇತ್ಸಾ ಚ ಮಹಾಪುಣ್ಯಾ ಮಹಾಪಾತಕನಾಶಿನೀ ॥ ೩೩ ॥

ವಿಶೇಷಸ್ತತ್ರ ಕರ್ತವ್ಯಃ ಶೃಣುಧ್ವಂ ದ್ವಿಜಸತ್ತಮಾಃ ।
ಆಮಲಕೀಂ ಚ ಸಂಪ್ರಾಪ್ಯ ಜಾಗರಂ ತತ್ರ ಕಾರಯೇತ್ ॥ ೩೪ ॥

ಸರ್ವಪಾಪವಿನಿರ್ಮುಕ್ತೋ ಗೋಸಹಸ್ರಫಲಂ ಲಭೇತ್ ।
ಏತದ್ವಃ ಕಥಿತಂ ವಿಪ್ರಾ ವ್ರತಾನಾಂ ವ್ರತಮುತ್ತಮಂ ॥ ೩೫ ॥

ಅರ್ಚಯಿತ್ವಾಚ್ಯುತಂ ತಸ್ಯಾಂ ವಿಷ್ಣುಲೋಕಾನ್ನ ಮುಚ್ಯತೇ । ॥ ೩೬ ॥

---

೩೧-೩೨. ಧನ ಧಾನ್ಯಗಳನ್ನು ಕೊಡುವ ಪರಮಾತ್ಮನಿಗೆ ಸಂತೋಷವನ್ನುಂಟುಮಾಡುವ ಸ್ವಲ್ಪ ಕಷ್ಟದಿಂದಲೇ ಬಹುಫಲವನ್ನು ಕೊಡುವ ಉತ್ತಮವಾದ ವ್ರತವನ್ನು ಉಪದೇಶಿಸು. ಅದನ್ನು ಮಾಡಿದರೆ ವಿಷ್ಣುಲೋಕದಲ್ಲಿ ಸುಖಿಸುತ್ತಾನೆ.

೩೩. ವಿಷ್ಣುವು ಹೇಳಿದನು–ಫಾಲ್ಗುಣ ಶುಕ್ಲಪಕ್ಷದಲ್ಲಿ ದ್ವಾದಶಿಯ ದಿವಸ ಪುಷ್ಯನಕ್ಷತ್ರವು ಕೂಡಿದರೆ ಆ ದಿನವು ಮಹಾಪುಣ್ಯವುಳ್ಳದ್ದು. ಪಾಪನಾಶಕವಾದುದು.

೩೪. ಆದಿನ ಹೆಚ್ಚಾಗಿ ಒಂದು ಕೆಲಸವನ್ನು ಮಾಡಬೇಕು. ಎಲೈ ಬ್ರಾಹ್ಮಣರಿರಾ! ಕೇಳಿರಿ. ಆದಿವಸ ನೆಲ್ಲಿಯಮರದ ಸಮೀಪದಲ್ಲಿ ಜಾಗರಣೆಯನ್ನು ಮಾಡಬೇಕು.

೩೫-೩೬. ಹಾಗೆ ಮಾಡಿದರೆ ಪಾಪಗಳೆಲ್ಲವನ್ನೂ ಕಳೆದುಕೊಂಡು ಸಾವಿರ ಗೋದಾನದ ಫಲವನ್ನು ಹೊಂದುತ್ತಾನೆ. ಈ ಉತ್ತಮವಾದ ವ್ರತವನ್ನು ನಿಮಗೆ ಹೇಳಿದ್ದೇನೆ. ಆದಿನ ಆ ನೆಲ್ಲಿಯ ಮರದಲ್ಲಿ ವಿಷ್ಣುವನ್ನು ಪೂಜಿಸಿದರೆ ವಿಷ್ಣುಲೋಕದಿಂದ ಅವನಿಗೆ ಬಿಡುಗಡೆಯೇ ಇರುವುದಿಲ್ಲ.

|| ಋಷಯ ಊಚುಃ ||

ವ್ರತಸ್ಯಾಸ್ಯ ವಿಧಿಂ ಬ್ರೂಹಿ ಪರಿಪೂರ್ಣಂ ಕಥಂ ಭವೇತ್ |
ಕೇ ಮಂತ್ರಾಃ ಕೇ ನಮಸ್ಕಾರಾ ದೇವತಾಃ ಕಾಃ ಪ್ರಕೀರ್ತಿತಾಃ || ೩೭ ||

ಕಥಂ ದಾನಂ ಕಥಂ ಸ್ನಾನಂ ಕಶ್ಚ ಪೂಜಾವಿಧಿಸ್ಮೃತಃ |
ಅರ್ಚನಸ್ಯ ಚ ಮಂತ್ರಂ ತು ಕಥಯಸ್ವ ಯಥಾತಥಂ || ೩೮ ||

|| ವಿಷ್ಣುರುವಾಚ ||

ಶ್ರೂಯತಾಂ ಯೋ ವಿಧಿಸ್ಸಮ್ಯಗ್ವ್ರತಸ್ಯಾಸ್ಯ ದ್ವಿಜರ್ಷಭಾಃ |
ಏಕಾದಶ್ಯಾಂ ನಿರಾಹಾರಃ ಸ್ಥಿತ್ವಾ ಚೈವ ಪರೇಽಹನಿ || ೩೯ ||

ಭೋಕ್ಷ್ಯೇಽಹಂ ಪುಂಡರೀಕಾಕ್ಷ ಶರಣಂ ಮೇ ಭವಾಚ್ಯುತ |
ಇತಿ ಕೃತ್ವಾ ತು ನಿಯಮಂ ದಂತಧಾವನಪೂರ್ವಕಂ || ೪೦ ||

ನಾಲಪೇತ್ಪತಿತಾಂಶ್ಚೌರಾಂಸ್ತಥಾಪಾಷಂಡಿನೋ ನರಾನ್ |
ದುರ್ವೃತ್ತಾನ್ಭಿನ್ನಮರ್ಯಾದಾನ್ ಗುರುದಾರಪ್ರಧರ್ಷಕಾನ್ || ೪೧ ||

---

೩೭-೩೮. ಋಷಿಗಳು ಹೇಳಿದರು– ಈ ವ್ರತದ ವಿಧಿಯನ್ನು ಹೇಳು. ಪೂರ್ತಿಯಾಗುವುದು ಹೇಗೆ? ಮಂತ್ರಗಳಾವುವು? ನಮಸ್ಕಾರವು ಹೇಗೆ? ದೇವತೆಗಳಾವುವು? ದಾನವೇನು? ಸ್ನಾನದ ವಿಧಿಯೇನು? ಪೂಜಾವಿಧಿಯು ಹೇಗೆ? ಅರ್ಚನೆಯ ಮಂತ್ರವಾವುದು? ಇದೆಲ್ಲವನ್ನೂ ಸರಿಯಾಗಿ ಹೇಳು?

೩೯. ವಿಷ್ಣುವು ಹೇಳಿದನು– ಎಲೈ ಬ್ರಾಹ್ಮಣರಿರಾ! ವಿಧಿಯನ್ನು ಹೇಳುತ್ತೇನೆ. ಸರಿಯಾಗಿ ಕೇಳಿರಿ. ಏಕಾದಶಿಯದಿನ ಉಪವಾಸ ಮಾಡಿ ಮರುದಿವಸ ಊಟ ಮಾಡುತ್ತೇನೆ. ಎಲೈ ಪುಂಡರೀಕಾಕ್ಷನೆ! ನನ್ನನ್ನು ರಕ್ಷಿಸು ಎಂದು ಹೇಳಬೇಕು.

೪೦–೪೧. ಈ ರೀತಿಯಾಗಿ ನಿಯಮವನ್ನು ಮಾಡಿಕೊಂಡು ಶಾಸ್ತ್ರದಲ್ಲಿ ಹೇಳಿರುವಂತೆ ಹಲ್ಲುಗಳನ್ನುಜ್ಜಿಕೊಂಡು ಸ್ನಾನಾದಿಗಳನ್ನು ಮಾಡಿಕೊಳ್ಳಬೇಕು. ಪತಿತರು ಚೋರರು ಪಾಷಂಡಿಗಳು ಅಯೋಗ್ಯರು ಲೋಕರೀತಿಯಂತೆ ನಡೆಯುವ ಮರ್ಯಾದೆಗೆಟ್ಟವರು ಗುರುಗಳ ಹೆಂಡರಲ್ಲಿ ರಮಿಸುವವರು ಇವರೊಡನೆ ಮಾತನಾಡಬಾರದು.

ಅಪರಾಹ್ಣೇ ತತಸ್ಸ್ನಾನಂ ವಿಧಿವತ್ಕಾರಯೇದ್ಬುಧಃ ।
ನದ್ಯಾಂ ತಟಾಕೇ ಕೂಪೇ ವಾ ಗೃಹೇ ವಾ ನಿಯತಾತ್ಮವಾನ್ ॥ ೪೨ ॥

ಮೃತ್ತಿಕಾಲಂಭನಂ ಪೂರ್ವಂ ತತಸ್ಸ್ನಾನಂ ಚ ಕಾರಯೇತ್ ।
ಅಶ್ವಕ್ರಾಂತೇ ರಥಕ್ರಾಂತೇ ವಿಷ್ಣುಕ್ರಾಂತೇ ವಸುಂಧರೇ ॥
ಮೃತ್ತಿಕೇ ಹರ ಮೇ ಪಾಪಂ ಜನ್ಮಕೋಟ್ಯಾಂ ಸಮಾರ್ಜಿತಂ ॥ ೪೩ ॥

॥ ಇತಿ ಮೃತ್ತಿಕಾಮಂತ್ರಃ ॥

ತ್ವಂ ಮಾತಸ್ಸರ್ವಭೂತಾನಾಂ ಜೀವನಂ ತತ್ತು ರಕ್ಷಕಂ ।
ಸ್ವೇದಜೋದ್ಭಿಜಜಾತೀನಾಂ ರಸಾನಾಂ ಪತಯೇ ನಮಃ ॥ ೪೪ ॥

ಸ್ನಾತೋಽಹಂ ಸರ್ವತೀರ್ಥೇಷು ಹ್ರದಪ್ರಸ್ರವಣೇಷು ಚ ।
ನದೀಷು ದೇವಖಾತೇಷು ಇದಂ ಸ್ನಾನಂ ತು ಮೇ ಭವೇತ್ ॥ ೪೫ ॥

---

೪೨. ಅಪರಾಹ್ಣ ಬರುತ್ತಲೂ ನದಿಯಲ್ಲಾಗಲಿ ಕೆರೆಯಲ್ಲಾಗಲಿ ಬಾವಿಯಲ್ಲಾಗಲಿ ಮನೆಯಲ್ಲಾಗಲಿ ಶಾಸ್ತ್ರ ನಿಯಮದಂತೆ ಸ್ನಾನಮಾಡಬೇಕು.

೪೩. ಮಣ್ಣನ್ನು ಮೈಗೆ ಬಳಿದುಕೊಂಡು ಆಮೇಲೆ ಸ್ನಾನಮಾಡಬೇಕು. ಅಶ್ವಕ್ರಾಂತೆ ಎಂಬ ಮಂತ್ರವನ್ನು ಹೇಳಬೇಕು. ಕುದುರೆಗಳಿಂದಲೂ ರಥಗಳಿಂದಲೂ ವಿಷ್ಣುವಿನಿಂದಲೂ ಆಕ್ರಮಿಸಲ್ಪಟ್ಟ ಎಲೈ ಭೂಮಿಯೆ! ನಾನು ಕೋಟ್ಯಂತರ ಜನ್ಮಗಳಲ್ಲಿ ಮಾಡಿದ ಪಾಪಗಳನ್ನು ನಾಶಮಾಡು! ಇದು ಮೃತ್ತಿಕೆಯನ್ನು ಬಳಿದುಕೊಳ್ಳುವ ಮಂತ್ರವು.

೪೪. ಎಲೈ ನೀರೇ! ನೀನೇ ಎಲ್ಲಾ ಪ್ರಾಣಿಗಳಿಗೂ ತಾಯಿಯು. ಜೀವನವು. ರಕ್ಷಿಸುವವಳು. ಹುಳು ಮೊಳಕೆ ಪೈರು ಮೊದಲಾದುವುಗಳಿಗೆಲ್ಲಾ ರಕ್ಷಕಳು. ರಸಗಳಿಗೆ ಒಡೆಯಳು. ಇಂತಹ ನಿನಗೆ ನಮಸ್ಕಾರವು.

೪೫. ನಾನು ಸರ್ವತೀರ್ಥಗಳಲ್ಲಿಯೂ ಸ್ನಾನಮಾಡಿದೆನು. ಮಡು, ತೊರೆ, ಹೊಳೆ, ಕೆರೆಗಳೆಲ್ಲದರಲ್ಲಿಯೂ ಸ್ನಾನಮಾಡಿದ ಫಲವು ನನಗೆ ಬರಲಿ. ಇದು ಸ್ನಾನದ ಮಂತ್ರವು.

ಜಾಮದಗ್ನ್ಯಂ ಮುನಿಂ ಚೈವ ಕಾರಯಿತ್ವಾ ಹಿರಣ್ಮಯಂ ||
ವಿತ್ತಾನುಸಾರತಶ್ಶಕ್ತ್ಯಾ ಕಾರಯೇತ್ಪ್ರತಿಮಾಂ ಬುಧಃ || ೪೬ ||

ಮಾಷಕಸ್ಯ ಸುವರ್ಣಸ್ಯ ತದರ್ಧಾರ್ಧೇನ ವಾ ಪುನಃ |
ಗೃಹಮಾಗತ್ಯ ಸಂಪೂಜ್ಯ ಪೂಜಾಹೋಮಂ ತು ಕಾರಯೇತ್ || ೪೭ ||

ತತಶ್ಚಾಮಲಕೀಂ ಗಚ್ಛೇತ್ ಸರ್ವೋಪಸ್ಕರಸಂಯುತಃ |
ಆಮಲಕೀಂ ತತೋ ಗತ್ವಾ ಪರಿಶೋಧ್ಯ ಸಮಂತತಃ || ೪೮ ||

ಸ್ಥಾಪಯೇತ್ಸತತಂ ಕುಂಭಮವ್ರಣಂ ಮಂತ್ರಪೂರ್ವಕಂ |
ಪಂಚರತ್ನಸಮೋಪೇತಂ ದಿವ್ಯಗಂಧಾಧಿವಾಸಿತಂ || ೪೯ ||

ಛತ್ರೋಪಾನದ್ವಸ್ತ್ರಯುತಂ ಸಿತಚಂದನಚರ್ಚಿತಂ |
ಸ್ರಜ್ಮಾಲಲಂಬಿತಗ್ರೀವಂ ಸರ್ವಧೂಪವಿಧೂಪಿತಂ || ೫೦ ||

---

೪೬. ಚಿನ್ನದಲ್ಲಿ ತನ್ನ ಹಣಕ್ಕೂ ಶಕ್ತಿಗೂ ಅನುಗುಣವಾಗಿ ಪರಶುರಾಮನ ಪ್ರತಿಮೆಯನ್ನು ಮಾಡಿಸಬೇಕು.

೪೭. ಮಾಷತೂಕದ ಚಿನ್ನದಲ್ಲಿ ಅಥವಾ ಅದರ ಅರ್ಧ ಅಥವಾ ಅರ್ಧದ ಅರ್ಧದಲ್ಲಿಯಾಗಲಿ ಪ್ರತಿಮೆಯನ್ನು ಮಾಡಿಸಬೇಕು. ಮನೆಗೆ ಬಂದು ಅದನ್ನು ಪೂಜಿಸಿ ಹೋಮಾದಿಗಳನ್ನು ಮಾಡಿಸಬೇಕು.

೪೮–೪೯. ಅನಂತರ ನೆಲ್ಲಿಯ ಮರದ ಹತ್ತಿರಕ್ಕೆ ಹೋಗಬೇಕು. ಎಲ್ಲಾ ಪದಾರ್ಥಗಳನ್ನೂ ತೆಗೆದುಕೊಂಡು ಹೋಗಬೇಕು. ಆ ನೆಲ್ಲಿಯ ಮರದ ಬುಡಕ್ಕೆ ಹೋಗಿ ಅದರ ಸುತ್ತಲೂ ಅಸಹ್ಯವಿಲ್ಲದಂತೆ ಶೋಧಿಸಬೇಕು. ಅಲ್ಲಿ ಒಡಕು, ತಗ್ಗುಗಳಿಲ್ಲದ ಕುಂಭವನ್ನು ತಂದು ಮಂತ್ರಪೂರ್ವಕವಾಗಿ ಕಲಶವನ್ನು ಸ್ಥಾಪಿಸಬೇಕು.

೫೦. ಆ ಕಲಶಕ್ಕೆ ಪಂಚರತ್ನಗಳನ್ನು ಹಾಕಬೇಕು. ಒಳ್ಳೆಯ ಗಂಧವನ್ನು ಪೂಸಬೇಕು. ಛತ್ರಿ ಕೆರ ಬಟ್ಟೆ ಶ್ರೀಗಂಧಗಳಿಂದ ಅಲಂಕರಿಸಬೇಕು. ಕತ್ತಿಗೆ ಹೂಮಾಲೆಯನ್ನು ಹಾಕಬೇಕು. ಧೂಪದಿಂದ ವಾಸನೆ ಬರುವಂತೆ ಮಾಡಬೇಕು. ಎಲ್ಲಾ ಕಡೆಗಳಲ್ಲಿಯೂ ದೀಪದ ಸಾಲುಗಳನ್ನು ಬೆಳಗಬೇಕು.

ದೀಪಮಾಲಾಕುಲಂ ಕುರ್ಯಾತ್ ಸರ್ವತಸ್ಸುಮನೋಹರಂ ।
ತಸ್ಯೋಪರಿ ನ್ಯಸೇತ್ಪಾತ್ರಂ ದಿವ್ಯಲಾಜೈಃ ಪ್ರಪೂರಿತಂ ॥ ೫೧ ॥

ಪಾತ್ರೋಪರಿ ನ್ಯಸೇದ್ದೇವಂ ಜಾಮದಗ್ನ್ಯಂ ಮಹಾಶುಭಂ ।
ವಿಶೋಕಾಯ ನಮಃ ಪಾದೌ ಜಾನುನೀ ವಿಶ್ವರೂಪಿಣೇ ॥ ೫೨ ॥

ಉಗ್ರಾಯ ಚ ತತೋಪ್ಯೂರೂ ಕಟಿಂ ದಾಮೋದರಾಯ ಚ ।
ಉದರಂ ಪದ್ಮನಾಭಾಯ ಉರಶ್ಶ್ರೀವತ್ಸಧಾರಿಣೇ ॥ ೫೩ ॥

ಚಕ್ರಿಣೇ ವಾಮಬಾಹುಂ ಚ ದಕ್ಷಿಣಂ ಗದಿನೇ ನಮಃ ।
ವೈಕುಂಠಾಯ ನಮಃ ಕಂಠಮಾಸ್ಯಂ ಯಜ್ಞಮುಖಾಯ ವೈ ॥ ೫೪ ॥

ನಾಸಾಂ ವಿಶೋಕನಿಧಯೇ ವಾಸುದೇವಾಯ ಚಾಕ್ಷಿಣೀ ।
ಲಲಾಟಂ ವಾಮನಾಯೇತಿ ಸರ್ವಮಂಗಂ ಪ್ರಪೂಜಯೇತ್ ।
ನಮಸ್ಸರ್ವಾತ್ಮನೇ ಶೀರ್ಷಮಿತಿ ಸಂಪ್ರೋಚ್ಯ ಪೂಜಯೇತ್ ॥ ೫೫ ॥

॥ ಇತಿ ಪೂಜಾಮಂತ್ರಃ ॥

ತತೋ ದೇವಾಧಿದೇವಾಯ ಅರ್ಘ್ಯಂ ಚೈವ ಪ್ರದಾಪಯೇತ್ ।
ಫಲೇನ ಚೈವ ಶುಭ್ರೇಣ ಭಕ್ತಿಯುಕ್ತೇನ ಚೇತಸಾ ॥ ೫೬ ॥

---

೫೧-೫೫. ಆ ಕಲಶದಮೇಲೆ ಒಂದು ಪಾತ್ರೆಯನ್ನಿಡಬೇಕು. ಅದರ ತುಂಬ ಭತ್ತದ ಅರಳನ್ನು ತುಂಬಬೇಕು. ಆ ಪಾತ್ರೆಯಲ್ಲಿ ಜಾಮದಗ್ನ್ಯಮೂರ್ತಿಯನ್ನಿಡಬೇಕು. "ವಿಶೋಕಾಯ ನಮಃ" ಎಂದು ಪಾದಗಳನ್ನೂ "ವಿಶ್ವರೂಪಿಣೆ ನಮಃ" ಎಂದು ಮೊಣಕಾಲುಗಳನ್ನೂ "ಉಗ್ರಾಯ ನಮಃ" ಎಂದು ತೊಡೆಗಳನ್ನೂ "ದಾಮೋದರಾಯ ನಮಃ" ಎಂದು ಸೊಂಟವನ್ನೂ "ಪದ್ಮನಾಭಾಯ ನಮಃ" ಎಂದು ಹೊಟ್ಟೆಯನ್ನೂ "ವೈಕುಂಠಾಯ ನಮಃ" ಎಂದು ಕಂಠವನ್ನೂ "ಯಜ್ಞಮುಖಾಯ ನಮಃ" ಎಂದು ಮುಖವನ್ನೂ "ವಿಶೋಕನಿಧಯೇ ನಮಃ" ಎಂದು ಮೂಗನ್ನೂ "ವಾಸುದೇವಾಯ ನಮಃ" ಎಂದು ಕಣ್ಣುಗಳನ್ನೂ "ವಾಮನಾಯ ನಮಃ" ಎಂದು ಹಣೆಯನ್ನೂ "ಸರ್ವಾತ್ಮನೇ ನಮಃ" ಎಂದು ತಲೆಯನ್ನೂ ಪೂಜಿಸಬೇಕು. ಇದು ಪೂಜಾ ಮಂತ್ರವು.

೫೬. ಅನಂತರ ಕೈಯಲ್ಲಿ ಒಳ್ಳೆಯ ಫಲವನ್ನು ಇಟ್ಟುಕೊಂಡು ಭಕ್ತಿಯಿಂದ ದೇವಾಧಿದೇವನಿಗೆ ನಮಸ್ಕಾರವು. ಎಂದು ಅರ್ಘ್ಯವನ್ನು ಕೊಡಬೇಕು.

ನಮಸ್ತೇ ದೇವದೇವೇಶ ಜಾಮದಗ್ನ್ಯ ನಮೋಽಸ್ತು ತೇ ।
ಗೃಹಾಣಾರ್ಘ್ಯಮಿಮಂ ದತ್ತಮಾಮಲ್ಯಾಸಹಿತೋ ಹರೇ　　|| ೫೭ ||

|| ಇತ್ಯರ್ಘ್ಯಮಂತ್ರಃ ||

ತತೋ ಜಾಗರಣಂ ಕುರ್ಯಾತ್ ಭಕ್ತಿಯುಕ್ತೇನ ಚೇತಸಾ ।
ನೃತ್ಯೈರ್ಗೀತೈಶ್ಚ ವಾದಿತ್ರೈರ್ಧರ್ಮಾಖ್ಯಾನವರ್ಶೈರಪಿ　　|| ೫೮ ||

ವೈಷ್ಣವೈಶ್ಚ ತಥಾಖ್ಯಾನೈಃ ಕ್ಷಪಯೇಚ್ಛರ್ವರೀಮಿಮಾಂ ।
ಪ್ರದಕ್ಷಿಣಂ ತತಃ ಕುರ್ಯಾದಾಮಲ್ಯಾಂ ವಿಷ್ಣುನಾಮಭಿಃ　　|| ೫೯ ||

ಅಷ್ಟಾಧಿಕಶತಂ ಚೈವ ಅಷ್ಟಾವಿಂಶತಿರೇವ ಚ ।
ತತಃ ಪ್ರಭಾತಸಮಯೇ ಕೃತ್ವಾ ನೀರಾಜನಂ ಹರೇಃ　　|| ೬೦ ||

ಬ್ರಾಹ್ಮಣಂ ಪೂಜಯಿತ್ವಾ ತು ಸರ್ವಂ ತಸ್ಮೈ ನಿವೇದಯೇತ್ ।
ಜಾಮದಗ್ನ್ಯಂ ಘಟಂ ತತ್ರ ವಸ್ತ್ರಯುಗ್ಮಮುಪಾನಹೌ　　|| ೬೧ ||

---

೫೭. ದೇವದೇವನೆ! ನಮಸ್ಕಾರವು. ಜಾಮದಗ್ನ್ಯನೆ! ನಮಸ್ಕಾರವು. ನೆಲ್ಲಿಯಿಂದ ಕೂಡಿದ ದೇವನೇ ನಾನು ಕೊಟ್ಟ ಈ ಅರ್ಘ್ಯವನ್ನು ಸ್ವೀಕರಿಸು. ಎಂದು ಹೇಳುತ್ತ ಅರ್ಘ್ಯವನ್ನು ಕೊಡಬೇಕು. ಇದು ಅರ್ಘ್ಯ ಮಂತ್ರವು.

೫೮-೬೦. ಅನಂತರ ಭಕ್ತಿಯಿಂದ ಜಾಗರಣೆಯನ್ನು ಮಾಡಬೇಕು. ನೃತ್ಯ, ಗೀತ, ವಾದ್ಯ, ಧರ್ಮ ಪ್ರಧಾನವಾದ ಕಥೆಗಳು, ವೈಷ್ಣವ ಚರಿತ್ರೆಗಳು ಇವುಗಳಿಂದ ರಾತ್ರಿಯನ್ನು ಕಳೆಯಬೇಕು. ಅನಂತರ ವಿಷ್ಣುವಿನ ನಾಮಗಳನ್ನು ಹೇಳುತ್ತಾ ನೆಲ್ಲಿಯ ಮರವನ್ನು ಸೇರಿಸಿಕೊಂಡು ನೂರೆಂಟು ಅಥವಾ ಇಪ್ಪತ್ತೆಂಟು ನಮಸ್ಕಾರಗಳನ್ನಾದರೂ ಮಾಡಬೇಕು. ಅನಂತರ ಬೆಳಗಿನ ಜಾವದಲ್ಲಿ ಸ್ವಾಮಿಗೆ ಮಂಗಳಾರತಿ ಮಾಡಬೇಕು.

೬೧-೬೩. ಬ್ರಾಹ್ಮಣನಿಗೆ ಅವೆಲ್ಲವನ್ನೂ ಕೊಟ್ಟುಬಿಡಬೇಕು. ಜಾಮದಗ್ನ್ಯ ಕಲಶವನ್ನು, ವಸ್ತ್ರ, ಕೆರಗಳನ್ನೂ ಆ ಬ್ರಾಹ್ಮಣನಿಗೆ ಕೊಡುತ್ತಾ

ಜಾಮದಗ್ನ್ಯಸ್ವರೂಪೇಣ ಪ್ರೀಯತಾಂ ಮಮ ಕೇಶವಃ ।
ತತಶ್ಚಾಮಲಕೀಂ ಸ್ಪೃಷ್ಟ್ವಾ ಕೃತ್ವಾ ಚೈವ ಪ್ರದಕ್ಷಿಣಾಂ ॥ ೬೨ ॥

ಸ್ನಾನಂ ಕೃತ್ವಾ ವಿಧಾನೇನ ಬ್ರಾಹ್ಮಣಾನ್ಭೋಜಯೇತ್ತತಃ ।
ತತಶ್ಚ ಸ್ವಯಮಶ್ನೀಯಾತ್ಕುಟುಂಬೇನ ಸಮಾವೃತಃ ॥ ೬೩ ॥

ಏವಂ ಕೃತೇನ ಯತ್ಪುಣ್ಯಂ ತತ್ಸರ್ವಂ ಕಥಯಾಮಿ ತೇ ।
ಸರ್ವತೀರ್ಥೇಷು ಯತ್ಪುಣ್ಯಂ ಸರ್ವದಾನೇಷು ಯತ್ಫಲಂ ॥ ೬೪ ॥

ಸರ್ವಯಜ್ಞಾದಿಕಂ ಚೈವ ಲಭತೇ ನಾತ್ರ ಸಂಶಯಃ ।
ಏತದ್ವಸ್ಸರ್ವಮಾಖ್ಯಾತಂ ವ್ರತನಾಮುತ್ತಮಂ ವ್ರತಂ ॥ ೬೫ ॥

॥ ವಸಿಷ್ಠ ಉವಾಚ ॥

ಏತಾವದುಕ್ತ್ವಾ ದೇವೇಶಸ್ತತ್ರೈವಾನ್ತರಧೀಯತ ।
ತೇ ಚಾಪಿ ಋಷಯಸ್ಸರ್ವೇ ಚಕ್ರುಸ್ಸರ್ವಮಶೇಷತಃ ॥
ತಥಾ ತ್ವಮಪಿ ರಾಜೇಂದ್ರ ಕರ್ತುಮರ್ಹಸಿ ಸತ್ತಮ ॥ ೬೬ ॥

---

ಜಾಮದಗ್ನ್ಯ ಸ್ವರೂಪನಾದ ಸ್ವಾಮಿಯು ಪ್ರೀತನಾಗಲಿ. ಎಂದು ದಾನ ಮಾಡ ಬೇಕು. ಆಮೇಲೆ ನೆಲ್ಲಿಯ ಮರವನ್ನು ಮುಟ್ಟಿ ಅದಕ್ಕೆ ಪ್ರದಕ್ಷಿಣೆ ಮಾಡಿ ಅನಂತರ ಸ್ನಾನವಿಧಿಯಿಂದ ಸ್ನಾನ ಮಾಡಿ ಬ್ರಾಹ್ಮಣರಿಗೆ ಸಂತರ್ಪಣೆ ಮಾಡಿಸ ಬೇಕು. ಆಮೇಲೆಮನೆಯವರೊಡನೆ ತಾನು ಊಟ ಮಾಡಬೇಕು.

೬೪-೬೫. ಹೀಗೆ ಮಾಡಿದರೆ ಬರುವ ಪುಣ್ಯವನ್ನು ಹೇಳುತ್ತೇನೆ. ಎಲ್ಲಾ ತೀರ್ಥಗಳಲ್ಲಿಯೂ ಸ್ನಾನ ಮಾಡಿದರೆ ಯಾವ ಪುಣ್ಯವು ಬರುತ್ತದೆಯೋ ಅದಕ್ಕಿಂತ ಹೆಚ್ಚು ಪುಣ್ಯವು ಬರುತ್ತದೆ. ಎಲ್ಲಾ ದಾನಗಳನ್ನೂ ಮಾಡಿದರೆ ಯಾವ ಫಲವು ಬರುತ್ತದೆಯೋ ಅದಕ್ಕಿಂತಲೂ ಹೆಚ್ಚು ಫಲವು ಬರುತ್ತದೆ. ಎಲ್ಲಾ ಯಜ್ಞಗಳನ್ನೂ ಮಾಡಿದರೆ ಬರುವ ಪುಣ್ಯಕ್ಕಿಂತಲೂ ಹೆಚ್ಚು ಪುಣ್ಯವು ಬರುತ್ತದೆ. ಸಂಶಯವಿಲ್ಲ. ಈರೀತಿ ವ್ರತಗಳಲ್ಲೆಲ್ಲಾ ಉತ್ತಮವಾದ ಈ ಆಮಲಕೀ ವ್ರತವನ್ನು ಹೇಳಿದ್ದೇನೆ.

೬೬. ವಸಿಷ್ಠನು ಹೇಳಿದನು–ದೇವನು ಇಷ್ಟನ್ನು ಹೇಳಿ ಅಂತರ್ಧಾನ ನಾದನು. ಅದೇ ರೀತಿಯಾಗಿ ಆ ಋಷಿಗಳೆಲ್ಲರೂ ಆ ವ್ರತವನ್ನು ಪೂರ್ಣವಾಗಿ ಮಾಡಿದರು. ಅವರಂತೆ ನೀನೂ ಮಾಡಲು ಯೋಗ್ಯನಾಗಿದ್ದೀಯೆ.

|| ಶ್ರೀಕೃಷ್ಣ ಉವಾಚ ||

ವ್ರತಮೇತದ್ದುರಾಧರ್ಷಂ ರಾಜೇಂದ್ರ ಕರ್ತುಮರ್ಹಸಿ || ೬೭ ||

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಪತಿ
ನಾರದ ಸಂವಾದಾನ್ತರ್ಗತ ಕೃಷ್ಣ ಯುಧಿಷ್ಠಿರ ಸಂವಾದೇ
ಫಾಲ್ಗುಣ ಶುಕ್ಲಾಮಲಕ್ಯೇಕಾದಶೀ ಮಾಹಾತ್ಮ್ಯಂ ನಾಮ
ಸಪ್ತಚತ್ವಾರಿಂಶೋಽಧ್ಯಾಯಸ್ಸಮಾಪ್ತಃ

---

೬೭. ಶ್ರೀ ಕೃಷ್ಣನು ಹೇಳಿದನು– ಎಲೈ ಧರ್ಮಜನೆ! ಈ ಕಷ್ಟವಾದ ವ್ರತವನ್ನು ನೀನು ಮಾಡಲು ಯೋಗ್ಯನಾಗಿದ್ದೀಯೆ. ಮಾಡು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಪತಿ
ನಾರದರ ಸಂವಾದಾಂತರ್ಗತವಾದ ಕೃಷ್ಣ ಯುಧಿಷ್ಠಿರರ ಸಂವಾದದಲ್ಲಿ
ಫಾಲ್ಗುಣ ಶುಕ್ಲ ಆಮಲಕೀ ಏಕಾದಶೀ ಮಹಿಮೆ ಎಂಬ
ನಾಲ್ವತ್ತೇಳನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

-x-

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

### || ಅಷ್ಟಚತ್ವಾರಿಂಶೋಽಧ್ಯಾಯಃ ||



**|| ಯುಧಿಷ್ಠಿರ ಉವಾಚ ||**

**ಫಾಲ್ಗುನಸ್ಯ ಸಿತೇ ಪಕ್ಷೇ ಶ್ರುತಾ ಚಾಮಲಕೀ ತಥಾ |**
**ಚೈತ್ರಸ್ಯ ಕೃಷ್ಣಪಕ್ಷೇ ತು ಕಿನ್ನಾಮ್ನ್ಯೇಕಾದಶೀ ಭವೇತ್ || ೧ ||**

**|| ಶ್ರೀಕೃಷ್ಣ ಉವಾಚ ||**

**ಶೃಣು ರಾಜೇಂದ್ರ ವಕ್ಷ್ಯಾಮಿ ಆಖ್ಯಾನಂ ಪಾಪನಾಶನಂ |**
**ಯಲ್ಲೋಮಶೋಬ್ರವೀತ್ಪೃಷ್ಟೋ ಮಾಂಧಾತ್ರಾ ಚಕ್ರವರ್ತಿನಾ || ೨ ||**

---

### ನಲವತ್ತೆಂಟನೆಯ ಅಧ್ಯಾಯವು



೧. ಯುಧಿಷ್ಠಿರನು ಹೇಳಿದನು– ಫಾಲ್ಗುಣದ ಶುಕ್ಲಪಕ್ಷದಲ್ಲಿ ಆಮಲಕೀ ಏಕಾದಶಿಯ ವಿಷಯವನ್ನು ಕೇಳಿದೆನು. ಚೈತ್ರ ಬಹುಳದಲ್ಲಿ ಬರುವ ಏಕಾದಶಿಯು ಯಾವುದು ? ಅದರ ಹೆಸರೇನು ?

೨. ಶ್ರೀಕೃಷ್ಣನು ಹೇಳಿದನು–ಎಲೈ ಧರ್ಮಜನೆ! ಮಾಂಧಾತ ಚಕ್ರವರ್ತಿಯು ಕೇಳಲು ಲೋಮಶನು ಹೇಳಿದ ಬಂದು ಕಥೆಯನ್ನು ಹೇಳುವೆನು. ಕೇಳಿ. ಆದು ಪಾಪನಾಶಕವಾದುದು.

|| ಮಾಂಧಾತೋವಾಚ ||

ಭಗವನ್ ಶ್ರೋತುಮಿಚ್ಛಾಮಿ ಲೋಕಾನಾಂ ಹಿತಕಾಮ್ಯಯಾ |
ಚೈತ್ರಸ್ಯ ಪ್ರಥಮೇ ಪಕ್ಷೇ ಕಿನ್ನಾಮ್ನ್ಯೇಕಾದಶೀ ಭವೇತ್
ಕೋ ವಿಧಿಃ ಕಿಂ ಫಲಂ ತಸ್ಯಾಃ ಕಥಯಸ್ವ ಪ್ರಸಾದತಃ | || ೩ ||

|| ಲೋಮಶ ಉವಾಚ ||

ಶೃಣು ತ್ವಂ ರಾಜಶಾರ್ದೂಲ ಕಾಮದಾಂ ಸಿದ್ಧಿದಾಯಿನೀಂ |
ಕಥಾಂ ವಿಚಿತ್ರಾಂ ಶುಭದಾಂ ಪಾಪಘ್ನೀಂ ಧರ್ಮದಾಯಿನೀಂ || ೪ ||

ಪುರಾ ಚೈತ್ರರಥೇ ದೇಶೇ ಅಪ್ಸರೋಗಣಸೇವಿತೇ |
ವಸಂತಸಮಯೇ ಪ್ರಾಪ್ತೇ ಷಟ್ಪದಾಕುಲನಾದಿತೇ || ೫ ||

ಗಂಧರ್ವಕನ್ಯಾ ವಾದಿತ್ರೈಃ ರಮನ್ತಿ ಸಹ ಕಿನ್ನರೈಃ |
ಪಾಕಶಾಸನಮುಖ್ಯಾಶ್ಚ ಕ್ರೀಡಂತೇ ತ್ರಿದಿವೌಕಸಃ || ೬ ||

---

೩. ಮಾಂಧಾತನು ಹೇಳಿದನು–ಎಲೈ ಲೋಮಶನೆ! ಲೋಕದ ಹಿತಕ್ಕೋಸ್ಕರ ಕೇಳುತ್ತೇನೆ. ಚೈತ್ರಮಾಸದ ಕೃಷ್ಣಪಕ್ಷದಲ್ಲಿ ಬರುವ ಏಕಾದಶಿಯ ಹೆಸರೇನು? ಅದರ ವಿಧಿಯೇನು? ಅದಕ್ಕೆ ಫಲವೇನು? ಕೃಪೆಮಾಡಿ ಹೇಳು.

೪. ಲೋಮಶನು ಹೇಳಿದನು–ಎಲೈ ರಾಜಶ್ರೇಷ್ಠನೆ! ಇಷ್ಟಾರ್ಥಗಳನ್ನೂ ಸಿದ್ಧಿಗಳನ್ನೂ ಕೊಡುವ ಪಾಪನಾಶಕವೂ ಧರ್ಮದಾಯಕವೂ ಆದ ಒಂದು ವಿಚಿತ್ರವಾದ ಕಥೆಯನ್ನು ಹೇಳುತ್ತೇನೆ. ಕೇಳು.

೫–೬. ಕುಬೇರನ ಉದ್ಯಾನವನವಾದ ಚೈತ್ರರಥವೆಂಬ ಒಂದು ವನವಿರುವುದು. ಅದರಲ್ಲಿ ಅಪ್ಸರಸ್ತ್ರೀಯರು ಕ್ರೀಡಿಸುತ್ತಾರೆ. ಒಂದುಸಾರಿ ವಸಂತಕಾಲವು ಬರಲು ಆ ಉದ್ಯಾನದಲ್ಲಿ ಭ್ರಮರಗಳು ಝೇಂಕರಿಸುತ್ತಿದ್ದುವು. ಆಗ ಇಂದ್ರನೇ ಮುಂತಾದ ದೇವತೆಗಳೂ ಗಂಧರ್ವರೂ ಕಿನ್ನರರೂ ವಾದ್ಯಗಳನ್ನು ಬಾಜಿಸುತ್ತ ನೃತ್ಯ ನರ್ತನಗಳಿಂದ ಅವರನ್ನು ಸಂತೋಷಪಡಿಸುತ್ತಲಿದ್ದರು.

ನಾಪರಂ ಸುಖದಂ ಕಿಂಚಿದ್ವಿನಾ ಚೈತ್ರರಥಾತ್ ವನಂ ।
ತಸ್ಮಿನ್ ವನೇ ತು ಮುನಯಃ ತಪ್ಯಂತಿ ಬಹುಳಂ ತಪಃ ॥ ೭ ॥

ಮೇಧಾವಿನಂ ನಾಮ ಋಷಿಂ ತತ್ರಸ್ಥಂ ಬ್ರಹ್ಮಚಾರಿಣಂ ।
ಅಪ್ಸರಾಸ್ತಂ ಮುನಿವರಂ ಮೋಹನಾಯೋಪಚಕ್ರಮೇ ॥ ೮ ॥

ಮಂಜುಘೋಷೇತಿ ವಿಖ್ಯಾತಾ ಭಯಂ ತಸ್ಯ ವಿತನ್ವತೀ ।
ಕ್ರೋಶಮಾತ್ರಂ ಸ್ಥಿತಾ ತಸ್ಯ ಭಯಾದಾಶ್ರಮಸನ್ನಿಧೌ ॥ ೯ ॥

ಗಾಯಂತೀಂ ಮಧುರಂ ಸಾಧು ಪೀಡಯಂತೀ ವಿಪಂಚಿಕಾಂ ।
ಗಾಯಂತೀ ತಾಮಥಾಲೋಕ್ಯ ಪುಷ್ಪಚಂದನಸೇವಿತಾಂ ॥ ೧೦ ॥

ಕಾಮೋಪಿ ವಿಜಯಾಕಾಂಕ್ಷೀ ಶಿವಭಕ್ತಾನ್ಪ್ರವೇಶಿತುಂ ।
ತಸ್ಯಾಶ್ಶರೀರೇ ಸಂವಾಸಮಕರೋನ್ಮನಸನ್ಸುತಃ ॥ ೧೧ ॥

---

೭. ಈ ಚೈತ್ರವನದಷ್ಟು ಸುಖವಾದ ವನ ಬೇರೆ ಮತ್ತೊಂದಿಲ್ಲ ಆ ವನದಲ್ಲಿ ಋಷಿಗಳು ಬಹುವಾಗಿ ತಪಸ್ಸನ್ನು ಮಾಡುತ್ತಿದ್ದರು.

೮. ಅಲ್ಲಿ ಮೇಧಾವಿಯೆಂಬೊಬ್ಬ ಋಷಿಯು ಬ್ರಹ್ಮಚರ್ಯದಿಂದ ತಪಸ್ಸು ಮಾಡುತ್ತಿದ್ದನು. ಅಪ್ಸರರು ಈ ಋಷಿಯ ತಪಸ್ಸನ್ನು ಕೆಡಿಸಲು ಅವನನ್ನು ಮೋಹಿಸುವುದಕ್ಕೆ ಉಪಾಯವನ್ನು ಮಾಡಿದರು.

೯. ಮಂಜುಘೋಷೆ ಎಂಬುವಳು ಆ ಋಷಿಗೆ ಭಯವನ್ನುಂಟುಮಾಡುತ್ತ ಅವನಿಂದ ಶಾಪ ಬರುತ್ತದೆಂಬ ಹೆದರಿಕೆಯಿಂದ ಅವನ ಆಶ್ರಮಕ್ಕೆ ಬಂದು ಕ್ರೋಶ ದೂರದಲ್ಲಿದ್ದು ಪ್ರಯತ್ನಿಸುತ್ತಿದ್ದಳು.

೧೦-೧೧. ಆ ಮಂಜುಘೋಷೆಯು ವೀಣೆಯನ್ನು ಮಿಾಟುತ್ತಾ ಚೆನ್ನಾಗಿ ಹಾಡುತ್ತಲಿದ್ದಳು. ಹೂವು ಗಂಧಗಳಿಂದ ಅಲಂಕೃತಳಾಗಿ ಮಧುರವಾಗಿ ಹಾಡುತ್ತಿರುವ ಆಕೆಯನ್ನು ನೋಡಿ ಕಾಮನೂ ಕೂಡ ಶಿವನ ಭಕ್ತರನ್ನು ನಿಗ್ರಸಲು ಇದೇ ಸಮಯವೆಂದು ಅವಳ ಶರೀರದಲ್ಲಿಯೇ ವಾಸಮಾಡುತ್ತಲಿದ್ದನು.

ಕೃತ್ವಾ ಭ್ರುವಂ ಧನುಷ್ಕೋಟಿಂ ಗುಣಂ ಕೃತ್ವಾ ಕಟಾಕ್ಷಕಂ ।
ಮಾರ್ಗಣೇ ನಯನೇ ಕೃತ್ವಾ ಪಕ್ಷ್ಮಯುಕ್ತೇ ಯಥಾಕ್ರಮಂ　　॥ ೧೨ ॥

ಕುಚೌ ಕೃತ್ವಾ ಪಟಕುಟೀಂ ವಿಜಯಾಯೋಪಚಕ್ರಮೇ ।
ಮಂಜುಘೋಷಾಭವತ್ತಸ್ಯ ಕಾಮಸ್ಯೈವ ವರೂಥಿನೀ　　॥ ೧೩ ॥

ಮೇಧಾವಿನಂ ಮುನಿಂ ದೃಷ್ಟ್ವಾ ಸಾಪಿ ಕಾಮೇನ ಪೀಡಿತಾ ।
ಯೌವನೋದ್ಭಿನ್ನದೇಹೋಽಸೌ ಮೇಧಾವೀ ರಾಜತೇ ಸದಾ　　॥ ೧೪ ॥

ಸಿತೋಪವೀತಸಹಿತೋ ದೃಷ್ಟಸ್ಸ್ಮರ ಇವಾಪರಃ ।
ಮೇಧಾವೀ ವಸತೇ ಚಾಸೌ ಚ್ಯವನಸ್ಯಾಶ್ರಮೇ ಶುಭೇ　　॥ ೧೫ ॥

ಮಂಜುಘೋಷಾ ಸ್ಥಿತಾ ತತ್ರ ದೃಷ್ಟ್ವಾ ಸಾ ಮುನಿಪುಂಗವಂ ।
ಸುರತಸ್ಯ ವಶಂ ಪ್ರಾಪ್ತಾ ಮಂದಮಂದಮಗಾಯತ　　॥ ೧೬ ॥

---

೧೨–೧೪. ಆ ಕಾಮನು ಆ ಮಂಜುಘೋಷೆಯ ಹುಬ್ಬುಗಳನ್ನು ಧನುಸ್ಸನ್ನಾಗಿಯೂ ಕಟಾಕ್ಷಗಳನ್ನು ಹಗ್ಗವನ್ನಾಗಿಯೂ ಕಣ್ಣುಗಳನ್ನು ಬಾಣಗಳನ್ನಾಗಿಯೂ ರೆಪ್ಪೆಗಳನ್ನು ಆ ಬಾಣದ ರೆಕ್ಕೆಗಳನ್ನಾಗಿಯೂ ಮಾಡಿಕೊಂಡು ಮೊಲೆಗಳನ್ನು ಪಟಕುಟಿ (ಡೇರೆ) ಗಳನ್ನಾಗಿಯೂ ಮಾಡಿಕೊಂಡು ಅವನನ್ನು ಜಯಿಸಲು ಯತ್ನಿಸಿದನು. ಮಂಜುಘೋಷೆಯು ಆ ಕಾಮನಿಗೆ ಸೈನ್ಯವೇ ಆದಳು.

೧೪. ಆ ಮಂಜುಘೋಷೆಯು ಮೇಧಾವಿ ಋಷಿಯನ್ನು ನೋಡಿ ಕಾಮಬಾಧೆಗೊಳಗಾದಳು. ಆ ಮೇಧಾವಿಯು ಯೌವನದಿಂದ ಕೂಡಿದವನಾಗಿ ಯಾವಾಗಲೂ ಇರುವನು.

೧೫. ಬೆಳ್ಳಗಿರುವ ಯಜ್ಞೋಪವೀತವನ್ನು ಧರಿಸಿ ಮತ್ತೊಬ್ಬ ಮನ್ಮಥನಂತೆ ಕಾಣುತ್ತಿದ್ದನು. ಈ ಮೇಧಾವಿಯು ಚ್ಯವನನ ಉತ್ತಮವಾದ ಆಶ್ರಮದಲ್ಲಿ ವಾಸಿಸುತ್ತಿದ್ದನು.

೧೬. ಅಲ್ಲಿಗೆ ಬಂದಿದ್ದ ಮಂಜುಘೋಷೆಯು ಆ ಋಷಿಯನ್ನು ನೋಡಿ ಸುರತವನ್ನು ಹೊಂದುವ ಇಚ್ಛೆಯಿಂದ ಮೆಲ್ಲಮೆಲ್ಲಗೆ ಗಾನಮಾಡಿದಳು.

ರಣದ್ವಲಯಸಂಯುಕ್ತಾಂ ಸಿಂಜನ್ನೂಪುರಮೇಖಲಾಂ ।
ಗಾಯಂತೀಂ ತಾಂ ತಥಾಭೂತಾಂ ವಿಲೋಕ್ಯ ಮುನಿಪುಂಗವಃ ॥ ೧೭ ॥

ಮದನೇನ ಸಸೈನ್ಯೇನ ನೀತೋ ಮೋಹವಶಂ ಬಲಾತ್ ।
ಮಂಜುಘೋಷಾ ಸಮಾಗಮ್ಯ ಮುನಿಂ ದೃಷ್ಟ್ವಾ ತಥಾವಿಧಂ ॥ ೧೮ ॥

ಹಾವಭಾವಕಟಾಕ್ಷೈಸ್ತಂ ಮೋಹಯಾಮಾಸ ಚಾಂಗನಾ ।
ಅಧಸ್ಸಂಸ್ಥಾಪ್ಯ ವೀಣಾಂ ಸಾ ಸಸ್ವಜೇ ತಂ ಮುನೀಶ್ವರಂ ॥ ೧೯ ॥

ಬಲಾದಿವ ಲತಾ ವೃಕ್ಷಂ ವಾತವೇಗೇನ ಕಂಪಿತಂ ।
ಸೋಪಿ ರೇಮೇ ತಯಾ ಸಾರ್ಧಂ ಮೇಧಾವೀ ಮುನಿಪುಂಗವಃ ॥ ೨೦ ॥

ತಸ್ಮಿನ್ವನೇ ತತೋ ದೃಷ್ಟ್ವಾ ತಸ್ಯಾಸ್ತು ದೇಹಮುತ್ತಮಂ ।
ಶಿವತತ್ವಂ ತು ವಿಸ್ಮೃತ್ಯ ಕಾಮತತ್ವವಶಂ ಗತಃ ॥ ೨೧ ॥

ನ ನಿಶಾಂ ನ ದಿನಂ ಸೋಪಿ ರಮ್ಯ ಜಾನಾತಿ ಕಾಮುಕಃ ।
ಬಹುಶಶ್ಚ ಗತಃ ಕಾಲೋ ಮುನೇರಾಚಾರಲೋಪತಃ ॥ ೨೨ ॥

---

೧೭–೨೦. ಬಳೆಗಳನ್ನು ಸದ್ದುಮಾಡುತ್ತ ಕಾಲು ಬಳೆಯನ್ನೂ ಒಡ್ಡಿಯಾಣವನ್ನೂ ಧ್ವನಿಮಾಡಿಸುತ್ತ ಹಾಡುತ್ತಿರುವ ಆ ಮಂಜುಘೋಷೆಯನ್ನು ಋಷಿಯು ನೋಡಿ ಮನ್ಮಥಾಧೀನನಾದನು. ಋಷಿಯು ಈ ರೀತಿಯಾಗಿ ಮೋಹಗೊಂಡುದನ್ನು ಆಕೆಯು ತಿಳಿದು ಹತ್ತಿರಕ್ಕೆ ಬಂದು ಆತನನ್ನು ಮದನನ ಚೇಷ್ಟೆಗಳಿಂದ ಮೋಹಿಸುವಂತೆ ಮಾಡಿದಳು. ಆಗ ಆಕೆಯು ವೀಣೆಯನ್ನು ಕೆಳಗಿಟ್ಟು ಆ ಋಷಿಯನ್ನು ಆಲಂಗಿಸಿಕೊಂಡಳು. ಇದನ್ನು ನೋಡಿದರೆ ಗಾಳಿಗೆ ಅಲ್ಲಾಡುತ್ತಿರುವ ಲತೆಯು ಮರವನ್ನು ಬಲವಾಗಿ ಅಪ್ಪಿಕೊಂಡಂತೆ ಕಾಣುತ್ತ ಇದ್ದಳು. ಆ ಮೇಧಾವಿಯೂ ಕೂಡ ಅವಳೊಡನೆ ಸುಖವಾಗಿ ರಮಿಸಿದನು.

೨೧–೨೨. ಆ ವನದಲ್ಲಿ ಮಂಜುಘೋಷೆಯ ಆ ಸೌಂದರ್ಯಕ್ಕೆ ಮುಗ್ಧನಾಗಿ ಋಷಿಯು ಶಿವತತ್ವವನ್ನು ಮರೆತುಬಿಟ್ಟು ಕಾಮತತ್ವಕ್ಕೆ ಅಧೀನನಾಗಿ ರಮಿಸುತ್ತ ಹಗಲು ರಾತ್ರಿಗಳನ್ನು ತಿಳಿಯದವನಾದನು. ಈ ರೀತಿಯಾಗಿ ಆ ಋಷಿಯು ಆಚಾರಲೋಪದಿಂದ ಬಹುಕಾಲವನ್ನು ಕಳೆದನು.

ಮಂಜುಘೋಷಾ ದೇವಲೋಕೇ ಗಮನಾಯೋಪಚಕ್ರಮೇ ।
ಗಂಚ್ಛಂತೀ ತಂ ಪ್ರತ್ಯುವಾಚ ರಮಂಸ್ತಂ ಮುನಿಸತ್ತಮಂ　　॥ ೨೩ ॥

॥ ಮಂಜುಘೋಷೋವಾಚ ॥

ಆದೇಶೋ ದೀಯತಾಂ ಬ್ರಹ್ಮನ್ ಸ್ವದೇಶಗಮನಾಯ ಮೇ　　॥ ೨೪॥

॥ ಮೇಧಾವ್ಯುವಾಚ ॥

ಯಾವತ್ಪ್ರಭಾತಸಂಧ್ಯಾ ಸ್ಯಾತ್ ತಾವತ್ತಿಷ್ಠ ಮಮಾಂತಿಕೇ　　॥ ೨೫ ॥

॥ ಲೋಮಶ ಉವಾಚ ॥

ಇತಿ ಶ್ರುತ್ವಾ ಮುನೇರ್ವಾಕ್ಯಂ ಭಯಭೀತಾ ಬಭೂವ ಸಾ ।
ಪುನರ್ವೈ ರಮಯಾಮಾಸ ತಮೃಷಿಂ ನೃಪಸತ್ತಮ　　॥ ೨೬ ॥

ಮುನೇಶ್ಶಾಪಭಯಾದ್ಭೀತಾ ಬಹುಳಾನ್ಪರಿವತ್ಸರಾನ್ ।
ವರ್ಷಾಣಾಂ ಪಂಚಪಂಚಾಶನ್ನವಮಾಸಾನ್ದಿನತ್ರಯಂ　　॥ ೨೭ ॥

---

೨೩. ಕಡೆಗೆ ಮಂಜುಘೋಷೆಯು ದೇವಲೋಕಕ್ಕೆ ಹೋಗಲು ಇಚ್ಛಿಸಿ ಸುಖಿಸುತ್ತಿರುವ ಆ ಮೇಧಾವಿಯನ್ನು ನೋಡಿ ಇಂತೆಂದಳು.

೨೪. ಮಂಜುಘೋಷೆಯು ಹೇಳಿದಳು- ಎಲೈ ಬ್ರಾಹ್ಮಣನೇ ! ನಾನು ನನ್ನ ಸ್ಥಳಕ್ಕೆ ಹೋಗಬೇಕು. ಅಪ್ಪಣೆಯನ್ನು ಕೊಡು.

೨೫. ಮೇಧಾವಿಯು ಹೇಳಿದನು- ನೀನು ಬೆಳಗಾಗುವವರೆಗೂ ನನ್ನ ಬಳಿಯಲ್ಲಿರು.

೨೬. ಲೋಮಶನು ಹೇಳಿದನು- ಋಷಿಯ ಈ ಮಾತನ್ನು ಕೇಳಿ ಆಕೆಯು ಭಯಪಟ್ಟಳು- ಅಲ್ಲದೆ ಆ ಋಷಿಯ ಬಳಿಯಲ್ಲಿಯೇ ಇದ್ದು ರಮಿಸುತ್ತಿದ್ದಳು.

೨೭–೨೮. ಆಕೆಯು ಆ ಋಷಿಯ ಶಾಪದ ಹೆದರಿಕೆಯಿಂದ ಬಹುವರ್ಷಗಳ ಕಾಲದವರೆಗೂ ರಮಿಸಿದಳು. ಹೀಗೆ ರಮಿಸುತ್ತ ಐವತ್ತೈದುವರ್ಷ ಒಂಭತ್ತು

ಸಾ ರೇಮೇ ಮುನಿನಾ ತಸ್ಯ ನಿಶಾರ್ಧಮಿವ ಚಾಭವತ್ ।
ಸಾ ತಂ ಮುನಿರುವಾಚಾಥ ತಸ್ಮಿನ್ ಕಾಲೇ ಗತೇ ಮುನಿಂ ॥ ೨೮ ॥

॥ ಮಂಜುಘೋಷೋವಾಚ ॥

ಆದೇಶೋ ದೀಯತಾಂ ಬ್ರಹ್ಮನ್ ಗನ್ತವ್ಯಂ ಸ್ವಗೃಹಂ ಮಯಾ ॥ ೨೯ ॥

॥ ಮೇಧಾವ್ಯುವಾಚ ॥

ಪ್ರಾತಃ ಕಾಲೋಧುನಾ ಚಾಸ್ತೇ ಶ್ರೂಯತಾಂ ವಚನಂ ಮಮ ।
ಸಂಧ್ಯಾಂ ಯಾವಚ್ಚ ಕುರ್ವೇಹಂ ತಾವತ್ತ್ವಂ ವೈ ಸ್ಥಿರಾ ಭವ ॥ ೩೦ ॥

॥ ಲೋಮಶ ಉವಾಚ ॥

ಇತಿ ವಾಕ್ಯಂ ಮುನೇಶ್ಶ್ರುತ್ವಾ ಜಾತಾನಂದಸಮಾಕುಲಾ ।
ಸ್ಮಿತಂ ಕೃತ್ವಾ ತು ಸಾ ಕಿಂಚಿತ್ಪ್ರತ್ಯುವಾಚ ಶುಚಿಸ್ಮಿತಾ ॥ ೩೧ ॥

---

ತಿಂಗಳು ಮೂರು ದಿನಗಳನ್ನೂ ಕಳೆದರು. ಇಷ್ಟು ದಿವಸವೂ ಕೂಡ ಋಷಿಗೆ ರಾತ್ರಿಯಲ್ಲಿ ಅರ್ಧ ಕಳೆದಂತೆ ಕಳೆದುಹೋಯಿತು. ಅಷ್ಟು ಕಾಲ ಕಳೆದ ಮೇಲೆ ಮತ್ತೆ ಆ ಋಷಿಯನ್ನು ಕುರಿತು ಇಂತೆಂದಳು.

೨೯. ಮಂಜುಘೋಷೆಯು ಹೇಳಿದಳು- ಎಲೈ ಋಷಿಯೇ! ನಮ್ಮ ಮನೆಗೆ ಹೋಗಬೇಕು. ಅಪ್ಪಣೆಯನ್ನು ಕೊಡು.

೩೦. ಮೇಧಾವಿಯು ಹೇಳಿದನು– ಎಲೈ ಸುಂದರಿಯೇ! ನನ್ನ ಮಾತನ್ನು ಕೇಳು. ಈಗ ಪ್ರಾತಃಕಾಲವಾಗಿದೆ. ಸಂಧ್ಯಾವಂದನೆಯನ್ನು ಮಾಡುವವರೆಗೂ ಸ್ವಲ್ಪ ಸುಮ್ಮನಿರು.

೩೧. ಲೋಮಶನು ಹೇಳಿದನು– ಮುನಿಯ ಈ ಮಾತನ್ನು ಕೇಳಿ ಸಂತೋಷಗೊಂಡಳು. ಮತ್ತು ನಗುತ್ತಾ ಆಕೆಯು ಅವನಿಗೆ ಇಂತೆಂದಳು.

॥ ಅಪ್ಸರಾ ಉವಾಚ ॥

ಕಿಯತ್ಪ್ರಮಾಣಾ ವಿಪ್ರೇಂದ್ರ ತವ ಸಂಧ್ಯಾ ಗತಾನಘ ।
ಮಯಿ ಪ್ರಸಾದಂ ಕೃತ್ವಾ ತು ಗತಃ ಕಾಲೋ ವಿಚಾರ್ಯತಾಂ ॥ ೩೨ ॥

॥ ಲೋಮಶ ಉವಾಚ ॥

ಇತಿ ತಸ್ಯಾ ವಚಃಶ್ರುತ್ವಾ ವಿಸ್ಮಯೋತ್ಫುಲ್ಲಲೋಚನಃ ।
ಗತಕಾಲಸ್ಯ ವಿಪ್ರೇಂದ್ರಃ ಪ್ರಮಾಣಮಕರೋತ್ತದಾ ॥ ೩೩ ॥

ಸಮಾಶ್ಚ ಸಪ್ತಪಂಚಾಶದ್ಗತಾಸ್ತಸ್ಯ ತಯಾ ಸಹ ।
ಚುಕ್ರೋಧ ಸ ತತಸ್ತಸ್ಯೈ ಜ್ವಾಲಾಮಾಲೀ ಬಭೂವ ಹ ॥ ೩೪ ॥

ನೇತ್ರಾಭ್ಯಾಂ ವಿಸ್ಫುಲಿಂಗಾನ್ ಸ ಮುಂಚಮಾನೋತಿಕೋಪಿತಃ ।
ಕಾಲರೂಪಾಂ ತು ತಾಂ ದೃಷ್ಟ್ವಾ ತಪಸಃ ಕ್ಷಯಕಾರಿಣೀಂ ॥ ೩೫ ॥

ದುಃಖಾರ್ಜಿತಂ ಕ್ಷಯಂ ನೀತಂ ತಪೋ ದೃಷ್ಟ್ವಾ ತಯಾ ಸಹ ।
ಸಕಂಪೋಷ್ಠೋ ಮುನಿಸ್ತತ್ರ ಪ್ರತ್ಯುವಾಚಾಕುಲೇಂದ್ರಿಯಃ ॥ ೩೬ ॥

---

೩೨. ಅಪ್ಸರೆಯು ಹೇಳಿದಳು- ಎಲೈ ಬ್ರಾಹ್ಮಣನೇ! ನಾನು ಬಂದ ಮೇಲೆ ನಿನಗೆ ಎಷ್ಟು ಸಂಧ್ಯೆಗಳು ಕಳೆದುವು? ದಯಮಾಡಿ ಹೋದ ಕಾಲಗಳನ್ನು ಯೋಚಿಸು.

೩೩-೩೪. ಈ ರೀತಿಯಾಗಿ ಹೇಳಿದ ಆಕೆಯ ಮಾತುಗಳನ್ನು ಕೇಳಿ ಕಣ್ಣುಗಳನ್ನು ಅರಳಿಸುತ್ತ ಆ ಋಷಿಯು ಅವಳೊಡನೆ ಕಳೆದುಹೋದ ಕಾಲವನ್ನು ಲೆಕ್ಕಮಾಡಿದನು. ಅವಳೊಡನೆ ರಮಿಸಿದ ಕಾಲವು ಐವತ್ತೇಳು ವರ್ಷಗಳಾಗಿ ಇದ್ದುವು. ಆಗ ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು ಅವಳ ಮೇಲೆ ಕೋಪ ಮಾಡಿದನು.

೩೫-೩೬. ಆಗ ಅವನು ಕೋಪಗೊಂಡು ಕಣ್ಣುಗಳಿಂದ ಕಿಡಿಗಳನ್ನುದುರಿಸುತ್ತಾ ತಪಸ್ಸನ್ನು ನಾಶಮಾಡಿದ ಯಮಸ್ವರೂಪಿಣಿಯಾದ ಆಕೆಯನ್ನು ನೋಡುತ್ತ ದುಃಖದಿಂದ ಸಂಪಾದಿಸಿದ ತಪಸ್ಸು ಈಕೆಯ ಸಹವಾಸದಿಂದ ನಾಶವಾಯಿತು. ಎಂದು ತಿಳಿದು ಕೋಪದಿಂದ ತುಟಿಗಳು ನಡುಗುತ್ತಿರಲು ದುಃಖದಿಂದ ಆಕೆಯನ್ನು ಕುರಿತು ಇಂತೆಂದನು.

ತಾಂ ಶಶಾಪಾಥ ಮೇಧಾವೀ ತ್ವಂ ಪಿಶಾಚೀ ಭವೇತಿ ಚ ।
ಧಿಕ್ ತ್ವಾಂ ಪಾಪೇ ದುರಾಚಾರೇ ಕುಲಟೇ ಪಾತಕಪ್ರಿಯೇ
ತಸ್ಯ ಶಾಪೇನ ಸಾ ದಗ್ಧಾ ವಿನಯಾವನತಾ ಸ್ಥಿತಾ ॥ ೩೭ ॥

॥ ಮಂಜುಘೋಷೋವಾಚ ॥

ಪ್ರಸಾದಂ ಕುರು ವಿಪ್ರೇಂದ್ರ ಶಾಪಸ್ಯಾನುಗ್ರಹಂ ಕುರು ।
ಸತಾಂ ಸಂಗೋ ಹಿ ಭವತಿ ವಚೋಭಿಸ್ಸಪ್ತಭಿಃ ಪದೈಃ ॥ ೩೮ ॥

ತ್ವಯಾ ಸಹ ಮಯಾ ಬ್ರಹ್ಮನ್ನೀತಾ ವೈ ಬಹುವತ್ಸರಾಃ ।
ಏತಸ್ಮಾತ್ಕಾರಣಾತ್ ಸ್ವಾಮಿನ್ ಪ್ರಸಾದಸು ಕುರು ಸುವ್ರತ ॥ ೩೯ ॥

॥ ಮುನಿರುವಾಚ ॥

ಶೃಣು ಮೇ ವಚನಂ ಭದ್ರೇ ಶಾಪಾನುಗ್ರಹಕಾರಕಂ ।
ಕಿಂ ಕರೋಮಿ ತ್ವಯಾ ಪಾಪೇ ಕ್ಷಯಂ ನೀತಂ ಮಹಾತಪಃ ॥ ೪೦ ॥

---

೩೭. "ನೀನು ಪಿಶಾಚಿಯಾಗು" ಎಂದು ಆಕೆಯನ್ನು ಶಪಿಸಿದನು. ಎಲೈ ಪಾಪಿನಿಯೇ ! ದುರಾಚಾರಿಣಿಯೇ ! ನಿನಗೆ ಧಿಕ್ಕಾರವಿರಲಿ, ಎಂದನು. ಅವನ ಶಾಪದಿಂದ ನೊಂದ ಆಕೆಯು ವಿನಯದಿಂದ ಅವನ ಎದುರಿಗೆ ನಿಂತು ಕೊಂಡಳು.

೩೮. ಮಂಜುಘೋಷೆಯು ಹೇಳಿದಳು–ಎಲೈ ಬ್ರಾಹ್ಮಣನೇ ! ದಯೆಇಡು. ಶಾಪಕ್ಕೆ ವಿಮೋಚಕವಾದ ಒಂದು ಅನುಗ್ರಹವನ್ನು ಮಾಡು. ಏಳು ಮಾತು ಗಳಿಂದ ಸತ್ಪುರುಷರು ಸ್ನೇಹಿತರಾಗುತ್ತಾರೆ ಎಂದು ದೊಡ್ಡವರು ಹೇಳುತ್ತಾರೆ.

೩೯. ನಿನ್ನೊಡನೆ ನಾನು ಬಹುವರ್ಷಗಳವರೆಗೆ ಇದ್ದು ಕಾಲವನ್ನು ಕಳೆದೆನು. ಈ ಕಾರಣದಿಂದ ನನ್ನಲ್ಲಿ ನೀನು ಅನುಗ್ರಹವಿಡು.

೪೦. ಮುನಿಯು ಹೇಳಿದನು– ಎಲೈ ಸುಂದರಿಯೇ ! ಆ ಶಾಪಕ್ಕೆ ನಿವಾರಕವಾದ ಒಂದು ಮಾತನ್ನು ಹೇಳುತ್ತೇನೆ. ಕೇಳು. ಏನು ಮಾಡಲಿ ? ನೀನು ನನ್ನ ಬಹುವಾದ ತಪಸ್ಸನ್ನು ನಾಶಮಾಡಿಬಿಟ್ಟಿದ್ದೀಯೆ ?

ಚೈತ್ರಸ್ಯ ಕೃಷ್ಣಪಕ್ಷೇ ತು ಭವತ್ಯೇಕಾದಶೀ ಶುಭಾ ।
ಪಾಪಮೋಚನಿಕಾ ನಾಮ ಸರ್ವಪಾಪಕ್ಷಯಂಕರೀ ॥
ತಸ್ಯಾ ವ್ರತೇ ಕೃತೇ ಸುಭ್ರು ಪಿಶಾಚತ್ವಂ ಪ್ರಯಾಸ್ಯತಿ ॥ ೪೧ ॥

॥ ಲೋಮಶ ಉವಾಚ ॥

ಇತ್ಯುಕ್ತ್ವಾ ತಾಂ ಸ ಮೇಧಾವೀ ಜಗಾಮ ಪಿತುರಾಶ್ರಮಂ ।
ತಮಾಗತಂ ಸಮಾಲೋಕ್ಯ ಚ್ಯವನಃ ಪ್ರತ್ಯುವಾಚ ತಂ ।
ಕಿಮೇತದ್ವಿಹಿತಂ ಪುತ್ರ ತ್ವಯಾ ಪುಣ್ಯಕ್ಷಯಃ ಕೃತಃ ॥ ೪೨ ॥

॥ ಮೇಧಾವ್ಯುವಾಚ ॥

ಪಾತಕಂ ವೈ ಕೃತಂ ತಾತ ರಮಿತಾ ಚಾಪ್ಸರಾ ಮಯಾ ।
ಪ್ರಾಯಶ್ಚಿತ್ತಂ ಬ್ರೂಹಿ ತಾತ ಯೇನ ಪಾಪಕ್ಷಯೋ ಭವೇತ್ ॥ ೪೩ ॥

॥ ಚ್ಯವನ ಉವಾಚ ॥

ಚೈತ್ರಸ್ಯ ಚಾಸಿತೇ ಪಕ್ಷೇ ನಾಮ್ನಾ ವೈ ಪಾಪಮೋಚಿನೀ ।
ಅಸ್ಯಾ ವ್ರತೇ ಕೃತೇ ಪುತ್ರ ಪಾಪರಾಶಿಃ ಕ್ಷಯಂ ವ್ರಜೇತ್ ॥ ೪೪ ॥

---

೪೧. ಚೈತ್ರ ಕೃಷ್ಣಪಕ್ಷದಲ್ಲಿ ಏಕಾದಶಿಯು ಬರುತ್ತದೆ. ಅದಕ್ಕೆ ಪಾಪ ಮೋಚನಿಕೆಯೆಂದು ಹೆಸರು. ಅದು ಎಲ್ಲಾ ಪಾಪಗಳನ್ನೂ ನಾಶಮಾಡುತ್ತದೆ. ಆ ವ್ರತವನ್ನು ನೀನು ಮಾಡಿದರೆ ನಿನ್ನ ಪಿಶಾಚತನವು ಹೋಗುತ್ತದೆ.

೪೨. ಲೋಮಶನು ಹೇಳಿದನು– ಆಕೆಗೆ ಈ ರೀತಿಯಾಗಿ ಶಪಿಸಿ ವಿಮೋಚನ ರೀತಿಯನ್ನು ಹೇಳಿ ತಂದೆಯಾದ ಚ್ಯವನನ ಆಶ್ರಮಕ್ಕೆ ಹೊರಟುಹೋದನು. ಚ್ಯವನನು ಮಗನು ಬಂದುದನ್ನು ನೋಡಿ ಎಲೈ ಪುತ್ರನೇ! ನೀನು ಏನು ಮಾಡಿಬಿಟ್ಟೆ! ಪುಣ್ಯವೆಲ್ಲವನ್ನೂ ನಾಶಮಾಡಿಕೊಂಡೆಯಲ್ಲಾ! ಎಂದನು.

೪೩. ಮೇಧಾವಿಯು ಹೇಳಿದನು– ಎಲೈ ತಂದೆಯೇ! ಪಾಪಕಾರ್ಯವನ್ನು ಮಾಡಿಬಿಟ್ಟೆನು. ಅಪ್ಸರಸ್ತ್ರೀಯೊಡನೆ ರಮಿಸಿಬಿಟ್ಟೆನು. ಪಾಪವು ನಾಶವಾಗುವಂತೆ ಪ್ರಾಯಶ್ಚಿತ್ತವನ್ನು ಹೇಳು.

೪೪. ಚ್ಯವನನು ಹೇಳಿದನು- ಎಲೈ ಮಗನೇ! ಚೈತ್ರಮಾಸದ ಕೃಷ್ಣ ಪಕ್ಷದಲ್ಲಿ ಪಾಪವಿಮೋಚಿನೀ ಎಂಬ ಏಕಾದಶಿಯು ಬರುತ್ತದೆ. ಅದರ ವ್ರತವನ್ನು ಮಾಡಿದರೆ ಪಾಪಗಳೆಲ್ಲವೂ ನಾಶವಾಗುತ್ತವೆ.

|| ಲೋಮಶ ಉವಾಚ ||

ಇತಿ ಶ್ರುತ್ವಾ ಪಿತುರ್ವಾಕ್ಯಂ ಕೃತಂ ತೇನ ವ್ರತೋತ್ತಮಂ ।
ಗತಂ ಪಾಪಂ ಕ್ಷಯಂ ತಸ್ಯ ತಪೋಯುಕ್ತೋ ಬಭೂವ ಸಃ || ೪೫ ||

ಪಿಶಾಚತ್ವಾದ್ವಿನಿರ್ಮುಕ್ತಾ ಪಾಪಮೋಚನಿಕಾವ್ರತಾತ್ ।
ದಿವ್ಯರೂಪಧರಾ ಸಾ ವೈ ಗತಾ ನಾಕೇ ವರಾಪ್ಸರಾಃ || ೪೬ ||

|| ಶ್ರೀ ಕೃಷ್ಣ ಉವಾಚ ||

ಪಾಪಮೋಚನಿಕಾಂ ರಾಜನ್ ಯೇ ಕುರ್ವಂತಿ ನರೋತ್ತಮಾಃ ।
ತೇಷಾಂ ಪಾಪಂ ಚ ಯತ್ಕಿಂಚಿತ್ ತತ್ಸರ್ವಂ ಚ ಕ್ಷಯಂ ವ್ರಜೇತ್ || ೪೭ ||

ಪಠನಾಚ್ಛ್ರವಣಾದ್ರಾಜನ್ ಗೋಸಹಸ್ರಫಲಂ ಲಭೇತ್ ।
ಬ್ರಹ್ಮಹಾ ಹೇಮಹಾರೀ ಚ ಸುರಾಪೋ ಗುರುತಲ್ಪಗಃ || ೪೮ ||

---

೪೫. ಲೋಮಶನು ಹೇಳಿದನು- ತಂದೆಯ ಈ ಮಾತನ್ನು ಕೇಳಿ ಅವನು ಈ ವ್ರತವನ್ನು ಮಾಡಿದನು. ಅವನ ಪಾಪವೆಲ್ಲವೂ ಹೋಯಿತು. ಮತ್ತೆ ತಪಸ್ವಿಯೂ ಆದನು.

೪೬. ಆ ಮಂಜುಘೋಷೆಯೂ ಕೂಡ ಉತ್ತಮವಾದ ಈ ವ್ರತವನ್ನು ಮಾಡಿ ಪಿಶಾಚತನದಿಂದ ಬಿಡುಗಡೆಹೊಂದಿ ಒಳ್ಳೆಯ ರೂಪವನ್ನು ಧರಿಸಿ ಸ್ವರ್ಗಕ್ಕೆ ಹೋದಳು.

೪೭. ಶ್ರೀಕೃಷ್ಣನು ಹೇಳಿದನು– ಎಲೈ ಧರ್ಮಜನೆ ! ಈ ಪಾಪಮೋಚನಿಕಾ ವ್ರತವನ್ನು ಯಾರು ಮಾಡುತ್ತಾರೆಯೋ ಅವರಲ್ಲಿರುವ ಪಾಪವೆಲ್ಲವೂ ನಾಶವಾಗುತ್ತವೆ.

೪೮-೪೯. ಇದನ್ನು ಓದುವುದರಿಂದಲೂ ಕೇಳುವುದರಿಂದಲೂ ಸಾವಿರ ಗೋದಾನ ಮಾಡಿದ ಫಲವನ್ನು ಹೊಂದುತ್ತಾನೆ. ಬ್ರಹ್ಮಹತ್ಯೆ ಮಾಡಿದವನು ಚಿನ್ನ ಕದ್ದವನು, ಹೆಂಡಗುಡಕ, ಗುರುಗಳ ಹೆಂಡತಿಯಲ್ಲಿ ರಮಿಸಿದವನು

ವ್ರತಸ್ಯ ಚಾಸ್ಯ ಕರಣಾತ್ ಭೂಯೋ ಮುಕ್ತಾ ಭವಂತಿ ತೇ ।
ಬಹುಪುಣ್ಯಂ ವ್ರತಂ ಹ್ಯೇತತ್ಕರಣಾದ್ವ್ರತಮುತ್ತಮಂ ॥ ೪೯ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಪತಿ ನಾರದ
ಸಂವಾದಾಂತರ್ಗತ ಶ್ರೀ ಕೃಷ್ಣ ಯುಧಿಷ್ಠಿರ ಸಂವಾದೇ ಚೈತ್ರ
ಕೃಷ್ಣ ಪಾಪಮೋಚನ್ಯೇಕಾದಶೀ ವರ್ಣನಂ ನಾಮ
ಅಷ್ಟಚತ್ವಾರಿಂಶೋಽಧ್ಯಾಯಸ್ಸಮಾಪ್ತಃ

---

ಇವರಾರಾದರೂ ಈ ವ್ರತವನ್ನು ಮಾಡುವುದರಿಂದ ಆ ಪಾಪಗಳಿಂದ ಬಿಡುಗಡೆ ಹೊಂದುತ್ತಾರೆ. ಈ ಉತ್ತಮವಾದ ವ್ರತವನ್ನು ಮಾಡುವುದರಿಂದ ಬಹುವಾದ ಪುಣ್ಯವು ಬರುತ್ತದೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಪತಿ
ನಾರದರ ಸಂವಾದದೊಳಗಿನ ಕೃಷ್ಣ ಯುಧಿಷ್ಠಿರರ ಸಂವಾಪವಲ್ಲಿ
ಚೈತ್ರ ಕೃಷ್ಣ ಪಾಪಮೋಚಿನೀ ಏಕಾದಶಿಯ ವರ್ಣನೆ ಎಂಬ
ನಲವತ್ತೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-x-

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಏಕೋನಪಂಚಾಶತ್ತಮೋऽಧ್ಯಾಯಃ ॥



॥ ಯುಧಿಷ್ಠಿರ ಉವಾಚ ॥

ವಾಸುದೇವ ನಮಸ್ತುಭ್ಯಂ ಕಥಯಸ್ವ ಮಮಾಗ್ರತಃ ।
ಚೈತ್ರಸ್ಯ ಶುಕ್ಲಪಕ್ಷೇ ತು ಕಿನ್ನಾಮ್ನ್ಯೇಕಾದಶೀ ಭವೇತ್ ॥ ೧ ॥

॥ ಶ್ರೀ ಕೃಷ್ಣ ಉವಾಚ ॥

ಶೃಣುಷ್ವೈಕಮನಾ ರಾಜನ್ ಕಥಾಮೇತಾಂ ಪುರಾತನೀಂ ।
ವಸಿಷ್ಠಃ ಕಥಯಾಮಾಸ ದಿಲೀಪಾಯ ತು ಪೃಚ್ಛತೇ ॥ ೨ ॥

॥ ದಿಲೀಪ ಉವಾಚ ॥

ಭಗವನ್ ಶ್ರೋತುಮಿಚ್ಛಾಮಿ ಕಥಯಸ್ವ ಪ್ರಸಾದತಃ ।
ಚೈತ್ರಮಾಸೇ ಸಿತೇ ಪಕ್ಷೇ ಕಿನ್ನಾಮ್ನ್ಯೇಕಾದಶೀ ಭವೇತ್ ॥ ೩ ॥

---

## ನಲವತ್ತೊಂಭತ್ತನೆಯ ಅಧ್ಯಾಯವು



೧. ಎಲೈ ವಾಸುದೇವನೇ ! ನಿನಗೆ ನಮಸ್ಕಾರವು. ಚೈತ್ರ ಶುದ್ಧದಲ್ಲಿ ಬರುವ ಏಕಾದಶಿಯ ಹೆಸರೇನು ? ಅದನ್ನು ನನಗೆ ಹೇಳು.

೨. ಶ್ರೀಕೃಷ್ಣನು ಹೇಳಿದನು- ಎಲೈ ರಾಜನೇ ! ಮನಸ್ಸಿಟ್ಟು ಕೇಳು. ಪುರಾತನವಾದ ಕಥೆಯನ್ನು ಹೇಳುತ್ತೇನೆ. ದಿಲೀಪನಿಗೆ ವಸಿಷ್ಠನು ಈ ಕಥೆಯನ್ನು ಹೇಳಿದನು.

೩. ದಿಲೀಪನು ಹೇಳಿದನು– ಎಲೈ ಸ್ವಾಮಿಯೇ ! ಚೈತ್ರಮಾಸದ ಶುಕ್ಲಪಕ್ಷದಲ್ಲಿ ಬರುವ ಏಕಾದಶಿಯ ಹೆಸರೇನು ? ನನಗೆ ಈಗ ಹೇಳು.

|| ವಸಿಷ್ಠ ಉವಾಚ ||

ಸಾಧು ಪೃಷ್ಟಂ ತ್ವಯಾ ರಾಜನ್ ಕಥಯಾಮಿ ತವಾಗ್ರತಃ ।
ಚೈತ್ರಸ್ಯ ಶುಕ್ಲಪಕ್ಷೇ ತು ಕಾಮದಾ ನಾಮ ನಾಮತಃ || ೪ ||

ಏಕಾದಶೀ ಪುಣ್ಯತಮಾ ಪಾಪೇಂಧನದವಾನಲಾ ।
ಶೃಣು ರಾಜನ್ ಕಥಾಮೇತಾಂ ಪಾಪಘ್ನೀಂ ಪುಣ್ಯದಾಯಿನೀಂ || ೫ ||

ಪುರಾ ನಾಗಪುರೇ ರಮ್ಯೇ ಹೇಮಹರ್ಮ್ಯವಿನಿರ್ಮಿತೇ ।
ಪುಂಡರೀಕಮುಖಾ ನಾಮ ನಿವಸಂತಿ ಮಹೋತ್ಕಟಾಃ || ೬ ||

ತಸ್ಮಿನ್ ಪುರೇ ಪುಂಡರೀಕೋ ರಾಜಾ ರಾಜ್ಯಂ ಚಕಾರ ಸಃ ।
ಗಂಧರ್ವೈಃ ಕಿನ್ನರೈಶ್ಚೈವ ಅಪ್ಸರೋಭಿಶ್ಚ ಸೇವಿತೇ || ೭ ||

ವರಾಪ್ಸರಾಸ್ತು ಲಲಿತಾ ಗಂಧರ್ವೋ ಲಲಿತಸ್ತಥಾ ।
ಉಭೌ ರಾಗೇಣ ಸಂರಕ್ತೌ ದಂಪತೀ ಕಾಮಪೀಡಿತೌ || ೮ ||

---

೪. ವಸಿಷ್ಠನು ಹೇಳಿದನು– ಎಲೈ ದೊರೆಯೇ! ನೀನು ಕೇಳಿದುದು ಸರಿ. ಹೇಳುತ್ತೇನೆ. ಚೈತ್ರ ಶುದ್ಧ ಏಕಾದಶಿಯು "ಕಾಮದಾ" ಎಂಬ ಹೆಸರಿನದು.

೫. ಈ ಏಕಾದಶಿಯು ಪುಣ್ಯವನ್ನುಂಟುಮಾಡುತ್ತದೆ. ಪಾಪವೆಂಬ ಸೌದೆಗೆ ಕಾಳ್ಗಿಚ್ಚು. ಒಂದು ಕಥೆಯನ್ನು ಹೇಳುತ್ತೇನೆ ಕೇಳು. ಅದು ಪಾಪ ನಾಶಕವು. ಪುಣ್ಯದಾಯಕವು.

೬. ಹಿಂದೆ ನಾಗಪುರವೆಂಬ ಪಟ್ಟಣದಲ್ಲಿ ಚಿನ್ನದ ಮಹಡಿಮನೆಗಳಲ್ಲಿ ಪುಂಡರೀಕ ಮುಖರೆಂಬ ಮಹೋತ್ಕಟರು (ಸರ್ಪಗಳು) ವಾಸಿಸುತ್ತಿದ್ದರು.

೭. ಆ ಊರಿನಲ್ಲಿ ಗಂಧರ್ವರಿಂದಲೂ, ಕಿನ್ನರರಿಂದಲೂ, ಅಪ್ಸರರಿಂದಲೂ ಸೇವಿಸಲ್ಪಡುತ್ತ ಪುಂಡರೀಕನೆಂಬ ರಾಜನು ರಾಜ್ಯವಾಳುತ್ತಿದ್ದನು.

೮–೧೧. ಅವರಲ್ಲಿ ಲಲಿತೆಯೆಂಬ ಅಪ್ಸರಸ್ತ್ರೀಯೂ ಲಲಿತನೆಂಬ ಗಂಧರ್ವನೂ ಗಂಡ ಹೆಂಡಿರು. ಇಬ್ಬರೂ ಬಹು ಅನುರಾಗದಿಂದ ಕೂಡಿದ್ದರು.

ರೇವಮಾತೇ ಸ್ವಗೃಹೇ ರಮ್ಯೇ ಧನಧಾನ್ಯಯುತೇ ಸದಾ ।
ಲಲಿತಾಯಾಶ್ಚ ಹೃದಯೇ ಪತಿರ್ವಸತಿ ಸರ್ವದಾ ॥ ೯ ॥

ಹೃದಯೇ ತಸ್ಯ ಲಲಿತಾ ನಿತ್ಯಂ ವಸತಿ ಭಾಮಿನೀ ।
ಏಕದಾ ಪುಂಡರೀಕೋಥ ಕ್ರೀಡೆ ಸ ಸದಸಿ ಸ್ಥಿತಃ ॥ ೧೦ ॥

ಗೀತಂ ಗಾನಂ ಪ್ರಕುರುತೇ ಲಲಿತೋ ದಯಿತಾಂ ವಿನಾ ।
ಪಾದಬಂಧಃ ಸ್ಖಲಜ್ಜಿಹ್ವಃ ಬಭೂವ ಲಲಿತಾಂ ಸ್ಮರ್ರ ॥ ೧೧ ॥

ಮನಸ್ತಾಪಂ ವಿದಿತ್ವಾಸ್ಯ ಕರ್ಕೋಟೋ ನಾಗಸತ್ತಮಃ ।
ಪಾದಬಂಧಚ್ಯುತಿಂ ತಸ್ಯ ಪುಂಡರೀಕೇ ನ್ಯವೇದಯತ್ ॥ ೧೨ ॥

ಶ್ರುತ್ವಾ ಕರ್ಕೋಟಕವಚಃ ಪುಂಡರೀಕೋ ಭುಜಂಗರಾಟ್ ।
ಕ್ರೋಧಸಂರಕ್ತನಯನೋ ಬಭೂವಾತಿಭಯಂಕರಃ ।
ಶಶಾಪ ಲಲಿತಂ ತತ್ರ ಗಾಯಂತಂ ಮದನಾತುರಂ ॥ ೧೩ ॥

---

ಮತ್ತು ಧನಧಾನ್ಯಗಳಿಂದ ಸಮೃದ್ಧಿಯಾದ ತಮ್ಮ ಆ ಮಹಡಿಮನೆಯಲ್ಲಿ ರಮಿಸುತ್ತಿದ್ದರು. ಲಲಿತೆಯ ಹೃದಯದಲ್ಲಿ ಲಲಿತನೂ ಲಲಿತನ ಹೃದಯದಲ್ಲಿ ಲಲಿತೆಯೂ ಯಾವಾಗಲೂ ವಾಸಮಾಡುತ್ತಿರುವರು. ಅಷ್ಟು ಅನುರಾಗದಿಂದ ಇದ್ದರು. ಒಂದು ಸಾರಿ ಪುಂಡರೀಕ ರಾಜನು ಸಭೆಯಲ್ಲಿ ಕುಳಿತು ವಿನೋದಿಸು ತ್ತಿದ್ದನು. ಈ ಲಲಿತನು ಹೆಂಡತಿಯಿಲ್ಲದಿದ್ದರೆ ಮನಸ್ಸು ಸರಿಯಿಲ್ಲದೆ ಹಾಡುಗಳನ್ನು ಹಾಡುತ್ತಿರಲಿಲ್ಲ. ವಾದ್ಯಗಳನ್ನು ಬಾರಿಸುತ್ತಿರಲಿಲ್ಲ. ಆಗ ಸಭೆಯಲ್ಲಿ ಅವನು ಹಾಡಬೇಕಾಗಿ ಬರಲು ಹಾಡುತ್ತ ಹೆಂಡತಿಯಿಲ್ಲದುದರಿಂದ ಅವುಗಳನ್ನು ಜ್ಞಾಪಿಸಿಕೊಳ್ಳುತ್ತ ಗಾನದಲ್ಲಿ ಮುಂದಿನ ಪಾದಗಳು ಜ್ಞಾಪಕಕ್ಕೆ ಬರದೆ ನಾಲಗೆಯು ತೊದಲು ತೊದಲಾಯಿತು.

೧೨. ಈ ಲಲಿತನ ಮನೋದುಃಖವನ್ನು ತಿಳಿದು ಸಭೆಯಲ್ಲಿದ್ದ ಕರ್ಕೋಟನೆಂಬ ನಾಗನು ಈತನು ಪಾದವನ್ನು ಹೇಳುವುದರಲ್ಲಿ ತಪ್ಪಿದುದನ್ನು ಪುಂಡರೀಕನಿಗೆ ತಿಳಿಸಿದನು.

೧೩. ಕರ್ಕೋಟಕನ ಮಾತನ್ನು ಕೇಳಿ ಪುಂಡರೀಕನು ಕೋಪದಿಂದ ನೋಡಲು ಆಗದಷ್ಟು ಕೋಪವನ್ನು ಹೊಂದಿದವನಾಗಿ ಗಾನಮಾಡುತ್ತಿರುವ ಮದನನಿಗೆ ಅಧೀನನಾಗಿದ್ದ ಆ ಲಲಿತನನ್ನು ಶಪಿಸಿದನು.

|| ಪುಂಡರೀಕ ಉವಾಚ ||

ರಾಕ್ಷಸೋ ಭವ ದುರ್ಬುದ್ಧೇ ಕ್ರವ್ಯಾದಃ ಪುರುಷಾದಕಃ !
ಯತಃ ಪತ್ನೀವಶೋಽಪೇತೋ ಗಾಯಮಾನೋ ಮಮಾಗ್ರತಃ　|| ೧೪ ||

|| ವಸಿಷ್ಠ ಉವಾಚ ||

ವಚನಾತ್ತಸ್ಯ ರಾಜೇಂದ್ರ ರಕ್ಷೋರೂಪೋ ಬಭೂವ ಸಃ !
ರೌದ್ರಾನನೋ ವಿರೂಪಾಕ್ಷೋ ದೃಷ್ಟಮಾತ್ರೋ ಭಯಂಕರಃ　|| ೧೫ ||

ಬಹುಯೋಜನವಿಸ್ತೀರ್ಣೋ ಮುಖಂ ಕಂದರಸನ್ನಿಭಂ ।
ಚಂದ್ರಸೂರ್ಯನಿಭೇ ನೇತ್ರೇ ಗ್ರೀವಾ ಪರ್ವತಸನ್ನಿಭಾ　|| ೧೬ ||

ನಾಸಾರಂಧ್ರೇ ತು ವಿವರೇ ಅಥ ತೌ ಯೋಜನಾರ್ಧಕೌ ।
ಶರೀರಂ ತಸ್ಯ ರಾಜೇಂದ್ರ ಉಚ್ಛ್ರಿತಂ ಯೋಜನಾಷ್ಟಕಂ　|| ೧೭ ||

ಈದೃಶೋ ರಾಕ್ಷಸೋ ಭೂತ್ವಾ ಭುಂಜಾನಃ ಕರ್ಮಣಃ ಫಲಂ ।
ಲಲಿತಾ ತಮಥಾಲೋಕ್ಯ ಸ್ವಪತಿಂ ವಿಕೃತಾಕೃತಿಂ　|| ೧೮ ||

---

೧೪. ಪುಂಡರೀಕನು ಹೇಳಿದನು– ನೀನು ನನ್ನೆದುರಿಗೆ ಗಾನಮಾಡುತ್ತ ಹೆಂಡತಿಯನ್ನು ಸ್ಮರಿಸಿಕೊಂಡುದರಿಂದ ಮನುಷ್ಯರನ್ನು ತಿನ್ನುವ ರಾಕ್ಷಸನಾಗು.

೧೫. ವಸಿಷ್ಠನು ಹೇಳಿದನು– ಅವನ ಶಾಪದಂತೆ ಭಯಂಕರವಾದ ಮುಖವುಳ್ಳವನೂ, ವಿಕಾರವಾದ ಕಣ್ಣುಳ್ಳವನೂ, ನೋಡಿದೊಡನೆಯೇ ಭಯಂಕರನೂ ಆದ ರಾಕ್ಷಸನಾದನು.

೧೬–೧೭. ಅವನ ಬಾಯಿಯು ಅನೇಕ ಯೋಜನಗಳುದ್ದವುಳ್ಳ, ಗುಹೆ ಯಂತೆ ಆಯಿತು. ಕಣ್ಣು ಚಂದ್ರಸೂರ್ಯರಂತೆ ಕಾಣುತ್ತಿದ್ದಿತು. ಕತ್ತು ಬೆಟ್ಟದಂತಿದ್ದಿತು. ಮೂಗಿನ ಹೊಳ್ಳೆಗಳು ಬಿಲಗಳಂತಿದ್ದುವು. ತುಟಿಗಳು ಅರ್ಧಯೋಜನದಷ್ಟಿದ್ದುವು.

೧೮–೧೯. ಲಲಿತನು ಈ ರೀತಿ ರಾಕ್ಷಸನಾಗಿ ತನ್ನ ಕರ್ಮ ಫಲವನ್ನು ಅನುಭವಿಸುತ್ತಿದ್ದನು. ಈರೀತಿ ವಿಕಾರವಾದ ಆಕಾರವುಳ್ಳ ಗಂಡನನ್ನು ನೋಡಿ

ಚಿಂತಯಾಮಾಸ ಮನಸಾ ದುಃಖೇನ ಮಹತಾರ್ದಿತಾ ।
ಕಿಂ ಕರೋಮಿ ಕ್ವ ಗಚ್ಛಾಮಿ ಪತಿಃ ಪಾಪೇನ ಪೀಡಿತಃ ॥ ೧೯ ॥

ಇತಿ ಸಂಸ್ಮೃತ್ಯ ಸಂಸ್ಮೃತ್ಯ ಮನಸಾ ಶರ್ಮ ನಾಲಭತ್ ।
ಚಚಾರ ಪತಿನಾ ಸಾರ್ಧಂ ಲಲಿತಾ ಗಹನೇ ವನೇ ॥ ೨೦ ॥

ಬಭ್ರಾಮ ವಿಪಿನೇ ದುರ್ಗೇ ಕಾಮರೂಪೀ ಸ ರಾಕ್ಷಸಃ ।
ನಿರ್ಘೃಣಃ ಪಾಪನಿರತೋ ವಿರೂಪಃ ಪುರುಷಾದಕಃ ॥ ೨೧ ॥

ನ ಸುಖಂ ಲಭತೇ ರಾತ್ರೌ ನ ದಿವಾ ಪಾಪಪೀಡಿತಃ ।
ಲಲಿತಾ ದುಃಖಿತಾತೀವ ಪತಿಂ ದೃಷ್ಟ್ವಾ ತಥಾ ವಿಧಂ ॥ ೨೨ ॥

ಬಭ್ರಾಮ ತೇನ ಸಾರ್ಧಂ ಸಾ ರುದತೀ ಗಹನೇ ವನೇ ।
ದೃಷ್ಟ್ವಾಶ್ರಮಪದಂ ರಮ್ಯಂ ಮುನಿಂ ಶಾಂತಮವಿಗ್ರಹಂ ॥ ೨೩ ॥

---

ಲಲಿತೆಯು ಬಹು ದುಃಖದಿಂದ ಕೂಡಿದವಳಾಗಿ ನನ್ನ ಪತಿಯು ಈರೀತಿಯಾದ ಪಾಪಕ್ಕೆ ಒಳಗಾದನು. ಏನು ಮಾಡಲಿ ? ಎಲ್ಲಿ ಹೋಗಲಿ ? ಎಂದು ಯೋಚಿಸುತ್ತಿದ್ದಳು.

೨೦. ಇದನ್ನು ಯೋಚಿಸುತ್ತ ಮನಸ್ಸಿನಲ್ಲಿ ಶಾಂತಿಯನ್ನೇ ಹೊಂದಲಿಲ್ಲ. ಆದರೂ ಗಂಡನೊಡನೆಯೇ ಆಕೆಯು ಗೊಂಡಾರಣ್ಯದಲ್ಲೆಲ್ಲಾ ಸಂಚರಿಸುತ್ತ ಇದ್ದಳು.

೨೧–೨೪. ಕಾಮರೂಪವುಳ್ಳವನಾದ ಆ ರಾಕ್ಷಸನು ಆ ಕಾಡಿನಲ್ಲೆಲ್ಲಾ ಸಂಚರಿಸುತ್ತಿದ್ದನು. ಪಾಪಿಯಾಗಿ ದಯಾಶೂನ್ಯನಾಗಿ ಮನುಷ್ಯರನ್ನು ತಿನ್ನುತ್ತಾ ಹಗಲೂ, ರಾತ್ರಿಯೂ ಅಲೆಯುತ್ತಾ ಸುಖವೆಂಬುದನ್ನೇ ಯಾವಾಗಲೂ ಕಾಣದವನಾದನು. ಲಲಿತೆಯು ಆ ರೀತಿಯಾದ ಗಂಡನನ್ನು ನೋಡಿ ದುಃಖಿಸುತ್ತ ಅವನೊಡನೆ ಆ ಗೊಂಡಾರಣ್ಯದಲ್ಲಿ ಸುತ್ತುತ್ತಿರಲು ಒಂದು ಆಶ್ರಮವು ಸಿಕ್ಕಿತು. ಅದು ರಮ್ಯವಾಗಿದ್ದಿತು. ಅಲ್ಲಿ ಒಬ್ಬ ಶಾಂತಮೂರ್ತಿಯಾದ ಋಷಿಯು ಇದ್ದನು.

ಶೀಘ್ರಂ ಜಗಾಮ ಲಲಿತಾ ನಮಸ್ಕೃತ್ಯಾಗ್ರತಸ್ಸ್ಥಿತಾ ।
ತಾಂ ದೃಷ್ಟ್ವಾ ಸ ಮುನಿಃ ಪ್ರಾಹ ದುಃಖಿತಾಂ ಹಿ ದಯಾಪರಃ ॥ ೨೪ ॥

॥ ಮುನಿರುವಾಚ ॥

ಕಾ ತ್ವಂ ಕಸ್ಮಾದಿಹಾಯಾತಾ ಸತ್ಯಂ ವದ ಮಮಾಗ್ರತಃ ॥ ೨೫ ॥

॥ ಲಲಿತೋವಾಚ ॥

ವೀರಧನ್ವೇತಿ ಗಂಧರ್ವಃ ಸುತಾಂ ತಸ್ಯ ಮಹಾತ್ಮನಃ ।
ಲಲಿತಾಂ ನಾಮ ಮಾಂ ವಿದ್ಧಿ ಪತ್ಯರ್ಥಮಿಹ ಚಾಗತಾ ॥ ೨೬ ॥

ಭರ್ತಾ ಮೇ ಪಾಪದೋಷೇಣ ರಾಕ್ಷಸೋಭೂನ್ಮಹಾಮುನೇ ।
ರೌದ್ರರೂಪೋ ದುರಾಚಾರಸ್ತಂ ದೃಷ್ಟ್ವಾ ನಾಸ್ತಿ ಮೇ ಸುಖಂ ॥ ೨೭ ॥

ಸಾಂಪ್ರತಂ ಶಾಧಿ ಮಾಂ ಬ್ರಹ್ಮನ್ ಯತ್ಕೃತ್ಯಂ ತದ್ವದ ಪ್ರಭೋ ।
ಯೇನ ಪುಣ್ಯೇನ ವಿಪ್ರೇಂದ್ರ ರಾಕ್ಷಸತ್ವಾದ್ವಿಮುಚ್ಯತೇ ॥ ೨೮ ॥

---

ಅವನನ್ನು ನೋಡಿ ಲಲಿತೆಯು ಜಾಗ್ರತೆಯಾಗಿ ಅವನಲ್ಲಿಗೆ ಹೋಗಿ ಅವನಿಗೆ ನಮಸ್ಕರಿಸಿ ಮುಂದೆ ನಿಂತುಕೊಂಡಳು. ಆಕೆಯು ದುಃಖಿಸುತ್ತಿರುವುದನ್ನು ನೋಡಲಾರದೆ ಆ ಋಷಿಯು ದಯೆಯಿಂದ ಇಂತೆಂದನು.

೨೫. ಮುನಿಯು ಹೇಳಿದನು– ನೀನು ಯಾರು ? ಇಲ್ಲಿಗೇಕೆ ಬಂದೆ ? ನನ್ನೆದುರಿಗೆ ನಿಜವನ್ನು ಹೇಳು ?

೨೬. ಲಲಿತೆಯು ಹೇಳಿದಳು- ವೀರಧನ್ವನೆಂಬ ಗಂಧರ್ವನಿರುವನು. ನಾನು ಅವನ ಮಗಳು. ನನ್ನ ಹೆಸರು ಲಲಿತೆಯು. ಗಂಡನಿಗೋಸ್ಕರ ಇಲ್ಲಿಗೆ ಬಂದಿರುವೆನು.

೨೭ ನನ್ನ ಗಂಡನು ಶಾಪದೋಷದಿಂದ ರಾಕ್ಷಸನಾದನು. ಎಲೈ ಋಷಿಯೇ ! ಪಾಪಿಯೂ, ದುರಾಚಾರಿಯೂ, ಭಯಂಕರನೂ ಆದ ಆತನನ್ನು ನೋಡುತ್ತ ನನಗೆ ದುಃಖವಾಗುತ್ತಿರುವುದು.

೨೮. ಈಗ ನಾನು ಮಾಡಬೇಕಾದುದನ್ನು ಅಪ್ಪಣೆ ಮಾಡು ಯಾವ ಪುಣ್ಯ ಕೆಲಸಮಾಡಿದರೆ, ಅವನಿಗೆ ಆ ರಾಕ್ಷಸತನವು ಹೋಗುತ್ತದೆ ?

|| ಋಷಿರುವಾಚ ||

ಚೈತ್ರಮಾಸಸ್ಯ ರಂಭೋರು ಶುಕ್ಲಪಕ್ಷೇಽಸ್ತಿ ಸಾಂಪ್ರತಂ ।
ಕಾಮದೈಕಾದಶೀ ನಾಮ ಸರ್ವಪಾಪಹರಾ ಪರಾ || ೨೯ ||

ಕುರುಷ್ವ ತದ್ವ್ರತಂ ಭದ್ರೇ ವಿಧಿಪೂರ್ವಂ ಮಯೋದಿತಂ ।
ಅಸ್ಯ ವ್ರತಸ್ಯ ಯತ್ಪುಣ್ಯಂ ತತ್ಸ್ವಭರ್ತ್ರೇ ಪ್ರದೀಯತಾಂ ||
ದತ್ತೇ ಪುಣ್ಯೇ ಕ್ಷಣಾತ್ತಸ್ಯ ಶಾಪದೋಷಃ ಪ್ರಯಾಸ್ಯತಿ || ೩೦ ||

|| ವಸಿಷ್ಠ ಉವಾಚ ||

ಇತಿ ಶ್ರುತ್ವಾ ಮುನೇರ್ವಾಕ್ಯಂ ಲಲಿತಾ ಹರ್ಷಿತಾಭವತ್ ।
ಉಪೋಷ್ಯೈಕಾದಶೀಂ ರಾಜನ್ ದ್ವಾದಶೀದಿವಸೇ ತಥಾ || ೩೧ ||

ವಿಪ್ರಸ್ಯೈವ ಸಮೀಪೇ ತು ವಾಸುದೇವಸ್ಯ ಚಾಗ್ರತಃ ।
ಉವಾಚ ಲಲಿತಾ ವಾಕ್ಯಂ ಸ್ವಪತ್ಯುಸ್ತಾರಣಾಯ ವೈ || ೩೨ ||

---

೨೯. ಎಲೈ ಸುಂದರಿಯೇ ! ಈಗ ಚೈತ್ರಮಾಸವಾಗಿದೆ. ಇದರ ಶುಕ್ಲ ಪಕ್ಷದಲ್ಲಿ ಏಕಾದಶಿಯು ಬರುತ್ತದೆ. ಅದು ಕಾಮದಾ (ಎಲ್ಲವನ್ನೂ ಕೊಡುವ) ಏಕಾದಶಿಯು. ಎಲ್ಲಾ ಪಾಪಗಳನ್ನೂ ನಾಶಮಾಡುತ್ತದೆ.

೩೦. ಎಲೈ ಮಂಗಳಕರಳೇ ! ಆ ವ್ರತವನ್ನು ಮಾಡು. ವಿಧಿಪೂರ್ವಕವಾಗಿ ಆ ವ್ರತವನ್ನು ಮಾಡಿ, ಅದರಿಂದ ಬಂದ ಪುಣ್ಯವನ್ನು ನಿನ್ನ ಗಂಡನಿಗೆ ದಾನ ಮಾಡು. ನೀನು ಹಾಗೆ ಕೊಟ್ಟರೆ ಆ ಕ್ಷಣದಲ್ಲಿಯೇ ಶಾಪವು ಹೋಗುತ್ತದೆ.

೩೧-೩೨. ವಸಿಷ್ಠನು ಹೇಳಿದನು– ಮುನಿಯ ಈ ಮಾತನ್ನು ಕೇಳಿ ಲಲಿತೆಯು ಸಂತೋಷಗೊಂಡಳು. ಅದೇ ರೀತಿಯಲ್ಲಿ ಆ ಏಕಾದಶಿಯು ದಿನ ಉಪವಾಸವಿದ್ದು ದ್ವಾದಶಿಯ ದಿವಸ ಬ್ರಾಹ್ಮಣರಿಗೆ ಮಾಡುವ ದಾನವನ್ನೆಲ್ಲಾ ಮಾಡಿ, ಬ್ರಾಹ್ಮಣರ ಎದುರಿಗೆ ತನ್ನ ಗಂಡನನ್ನು ಉದ್ಧರಿಸಲು ಇಂತೆಂದಳು.

|| ಲಲಿತೋವಾಚ ||

ಮಯಾ ತು ತದ್ವ್ರತಂ ಚೀರ್ಣಂ ಕಾಮುದಾಯಾ ಉಪೋಷಣಂ |
ತಸ್ಯ ಪುಣ್ಯಪ್ರಭಾವೇಣ ಗಚ್ಛತ್ವಸ್ಯ ಪಿಶಾಚತಾ || ೩೩ ||

|| ವಸಿಷ್ಠ ಉವಾಚ ||

ಲಲಿತಾ ವಚನಾದೇವ ವರ್ತಮಾನೇಪಿ ತತ್ ಕ್ಷಣೇ |
ಗತಶಾಪಸ್ಸ ಲಲಿತೋ ದಿವ್ಯದೇಹೋ ಬಭೂವ ಹ || ೩೪ ||

ರಾಕ್ಷಸತ್ವಂ ಗತಂ ತಸ್ಯ ಪ್ರಾಪ್ತಾ ಗಂಧರ್ವತಾ ಪುನಃ |
ಹೇಮರತ್ನಸಮಾಕೀರ್ಣೋ ರೇಮೇ ಲಲಿತಯಾ ಸಹ || ೩೫ ||

ತೌ ವಿಮಾನಸಮಾರೂಢೌ ಪೂರ್ವರೂಪಾಧಿಕೌ ಚ ತೌ ||
ದಂಪತೀ ಅತ್ಯಶೋಭೇತಾಂ ಕಾಮುದಾಯಾಃ ಪ್ರಭಾವತಃ || ೩೬ ||

---

೩೩. ನಾನು ಈ ಕಾಮುದೆಯ ವ್ರತವನ್ನು ಮಾಡಿ ಉಪವಾಸ ಮಾಡಿದೆನು ಈ ವ್ರತದ ಪುಣ್ಯದ ಪ್ರಭಾವದಿಂದ ನನ್ನ ಗಂಡನ ಪಿಶಾಚಭಾವವು ಹೋಗಲಿ.

೩೪. ವಸಿಷ್ಠನು ಹೇಳಿದನು– ಲಲಿತೆಯು ಪುಣ್ಯದಾನಮಾಡಿದ ಆ ಕ್ಷಣವೇ ನೋಡುತ್ತಿದ್ದಂತೆಯೇ ಆ ಲಲಿತನು ತನ್ನ ಅಕಾರ್ಯವನ್ನೆಲ್ಲಾ ಬಿಟ್ಟು ಉತ್ತಮದೇಹವನ್ನು ಹೊಂದಿದನು.

೩೫. ಅವನ ರಾಕ್ಷಸ ರೂಪವು ಹೋಗಿ ಗಂಧರ್ವ ಭಾವವನ್ನು ಹೊಂದಿದನು. ಚಿನ್ನ, ರತ್ನಗಳ ಅಲಂಕಾರದಿಂದ ಶೋಭಿಸಿದನು. ಆಗ ಅವನೊಡನೆ ಲಲಿತೆಯು ಸಂತೋಷದಿಂದ ಕ್ರೀಡಿಸಿದಳು.

೩೬- ಅವರು ಜೊತೆಯಲ್ಲಿಯೇ ವಿಮಾನವನ್ನು ಹತ್ತಿದರು. ಹಿಂದಿನ ರೂಪಕ್ಕಿಂತಲೂ ಅಧಿಕವಾದ ಸೌಂದರ್ಯವನ್ನು ಹೊಂದಿದರು. ಈ ರೀತಿಯಾಗಿ ಕಾಮುದೈಕಾದಶಿಯ ಆ ಪ್ರಭಾವದಿಂದ ಗಂಡಹೆಂಡರು ಶೋಭಿಸಿದರು.

ಇತಿ ಜ್ಞಾತ್ವಾ ನೃಪಶ್ರೇಷ್ಠ ಕರ್ತವ್ಯೈಷಾ ಪ್ರಯತ್ನತಃ ||
ಲೋಕಾನಾಂ ತು ಹಿತಾರ್ಥಾಯ ತವಾಗ್ರೇ ಕಥಿತಾ ಮಯಾ || ೩೭ ||

|| ಶ್ರೀಕೃಷ್ಣ ಉವಾಚ ||

ಬ್ರಹ್ಮಹತ್ಯಾದಿಪಾಪಘ್ನೀ ಪಿಶಾಚತ್ವವಿನಾಶಿನೀ |
ನಾತಃ ಪರತರಾ ಕಾಚಿತ್ ತ್ರೈಲೋಕ್ಯೇ ಸಚರಾಚರೇ ||
ಪಠನಾಚ್ಛ್ರವಣಾದ್ರಾಜನ್ ವಾಜಪೇಯಫಲಂ ಲಭೇತ್ || ೩೮ ||

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಪತಿ
ನಾರದ ಸಂವಾದಾನ್ತರ್ಗತ ಕೃಷ್ಣ ಯುಧಿಷ್ಠಿರ ಸಂವಾದೇ
ಚೈತ್ರ ಶುಕ್ಲ ಕಾಮದೈಕಾದಶೀ ಮಾಹಾತ್ಮ್ಯಂ ನಾಮ
ಏಕೋನಪಂಚಾಶತ್ತಮೋಽಧ್ಯಾಯಸ್ಸಮಾಪ್ತಃ

---

೩೭. ಎಲೈ ದೊರೆಯೇ! ಇದನ್ನು ತಿಳಿದು ಈ ಕಾಮದೆಯನ್ನು ಮಾಡು. ನಾನು ಲೋಕಹಿತಕ್ಕೋಸ್ಕರ ನಿನ್ನ ಎದುರಿಗೆ ಹೇಳಿದೆನು.

೩೮. ಶ್ರೀಕೃಷ್ಣನು ಹೇಳಿದನು– ಈ ಕಾಮದೈಕಾದಶಿಯು ಬ್ರಹ್ಮ ಹತ್ಯೇ ಮೊದಲಾದ ಪಾಪಗಳನ್ನೂ ಪಿಶಾಚತನವನ್ನೂ ಹಾಳುಮಾಡುತ್ತದೆ. ಮೂರು ಲೋಕದಲ್ಲಿಯೂ ಇದಕ್ಕಿಂತಲೂ ಉತ್ತಮವಾದ ವ್ರತವು ಮತ್ತೊಂದಿಲ್ಲವು. ಇದನ್ನು ಓದಿದವರೂ ಕೇಳಿದವರೂ ವಾಜಪೇಯಯಾಗದ ಫಲವನ್ನು ಹೊಂದುತ್ತಾರೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಪತಿ
ನಾರದರ ಸಂವಾದಾಂತರ್ಗತವಾದ ಕೃಷ್ಣ ಯುಧಿಷ್ಠಿರರ ಸಂವಾದದಲ್ಲಿ
ಚೈತ್ರ ಶುಕ್ಲ ಕಾಮದೈಕಾದಶೀ ಮಹಿಮೆ ಎಂಬ
ನಲವತ್ತೊಂಭತ್ತನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ಪಂಚಾಶತ್ತಮೋಽಧ್ಯಾಯಃ ||



|| ಯುಧಿಷ್ಠಿರ ಉವಾಚ ||

ವೈಶಾಖಸ್ಯಾಸಿತೇ ಪಕ್ಷೇ ಕಿನ್ನಾಮ್ನ್ಯೇಕಾದಶೀ ಭವೇತ್ ।
ಮಹಿಮಾನಂ ಕಥಯ ಮೇ ವಾಸುದೇವ ನಮೋಽಸ್ತು ತೇ || ೧ ||

|| ಕೃಷ್ಣ ಉವಾಚ ||

ಸೌಭಾಗ್ಯದಾಯಿನೀ ರಾಜನ್ ಇಹಲೋಕೇ ಪರತ್ರ ಚ ।
ವೈಶಾಖಕೃಷ್ಣಪಕ್ಷೇ ತು ನಾಮ್ನಾ ಚೈವ ವರೂಥಿನೀ || ೨ ||

ವರೂಥಿನ್ಯಾ ವ್ರತೇನೈವ ಸೌಖ್ಯಂ ಭವತಿ ಸರ್ವದಾ ।
ಪಾಪಹಾನಿಶ್ಚ ಭವತಿ ಸೌಭಾಗ್ಯಪ್ರಾಪ್ತಿರೇವ ಚ || ೩ ||

---

## ಐವತ್ತನೆಯ ಅಧ್ಯಾಯವು



೧. ಯುಧಿಷ್ಠಿರನು ಹೇಳಿದನು- ವೈಶಾಖ ಮಾಸದ ಕೃಷ್ಣಪಕ್ಷದಲ್ಲಿ ಬರುವ ಏಕಾದಶಿಯ ಹೆಸರೇನು? ಎಲೈ ವಾಸುದೇವನೇ! ನಿನಗೆ ನಮಸ್ಕಾರವು. ಅದರ ಮಹಿಮೆಯನ್ನು ಹೇಳು.

೨. ಕೃಷ್ಣನು ಹೇಳಿದನು– ಎಲೈ ರಾಜನೇ! ವೈಶಾಖ ಕೃಷ್ಣಪಕ್ಷದ ಏಕಾದಶಿಗೆ ವರೂಥಿನೀ ಏಕಾದಶಿ ಎಂದು ಹೆಸರು. ಅದು ಇಹಪರಗಳಲ್ಲಿ ಸೌಭಾಗ್ಯವನ್ನು ಕೊಡುತ್ತದೆ.

೩. ವರೂಥಿನೀ ವ್ರತವನ್ನು ಮಾಡುವುದರಿಂದ ಯಾವಾಗಲೂ ಸೌಖ್ಯವುಂಟು. ಸೌಭಾಗ್ಯಪ್ರಾಪ್ತಿಯಾಗುವುದಲ್ಲದೆ ಪಾಪವೂ ನಾಶವಾಗುತ್ತದೆ.

ದುರ್ಭಗಾ ಯಾ ಕರೋತ್ಯೇತಾಂ ಸಾ ಸ್ತ್ರೀ ಸೌಭಾಗ್ಯಮಾಪ್ನುಯಾತ್ ।
ಲೋಕಾನಾಂ ಚೈವ ಸರ್ವೇಷಾಂ ಭುಕ್ತಿಮುಕ್ತಿಪ್ರದಾಯಿನೀ ॥ ೪ ॥

ಸರ್ವಪಾಪಹರಾ ನೃಣಾಂ ಗರ್ಭವಾಸನಿಕೃನ್ತಿನೀ ।
ವರೂಥಿನ್ಯಾ ವ್ರತೇನೈವ ಮಾಂಧಾತಾ ಸ್ವರ್ಗತಿಂ ಗತಃ ॥ ೫ ॥

ಧುಂಧುಮಾರಾದಯಶ್ಚಾನ್ಯೇ ರಾಜಾನೋ ಬಹವಸ್ತಥಾ ।
ಬ್ರಾಹ್ಮಾತ್ಕಪಾಲಾನ್ನಿರ್ಮುಕ್ತೋ ಬಭೂವ ಭಗವಾನ್ಭವಃ ॥ ೬ ॥

ದಶವರ್ಷಸಹಸ್ರಾಣಿ ತಪಸ್ತಪ್ಯತಿ ಯೋ ನರಃ ।
ತತ್ತುಲ್ಯಂ ಫಲಮಾಪ್ನೋತಿ ವರೂಥಿನ್ಯಾ ವ್ರತಾನ್ನರಃ ॥ ೭ ॥

ಶ್ರದ್ಧಾವಾನ್ಯಸ್ತು ಕುರುತೇ ವರೂನ್ಯಾ ವ್ರತಂ ನರಃ ।
ವಾಂಛಿತಂ ಲಭತೇ ಸೋಽಪಿ ಇಹಲೋಕೇ ಪರತ್ರ ಚ ॥ ೮ ॥

---

೪. ಕಷ್ಟದಲ್ಲಿ ಸಿಕ್ಕಿರುವವಳು ಇದನ್ನು ಮಾಡಿದರೆ ಸೌಭಾಗ್ಯವು ಬರುತ್ತದೆ. ಲೋಕಕ್ಕೆಲ್ಲವು ಭುಕ್ತಿ ಮುಕ್ತಿಗಳನ್ನು ಕೊಡುತ್ತದೆ.

೫. ವರೂಥಿನೀ ವ್ರತವು ಎಲ್ಲಾ ಪಾಪಗಳನ್ನೂ ಹಾಳುಮಾಡುತ್ತದೆ. ಪುನರ್ಜನ್ಮವನ್ನು ತಪ್ಪಿಸುತ್ತದೆ. ಈ ವ್ರತದಿಂದಲೇ ಮಾಂಧಾತನು ಸ್ವರ್ಗವನ್ನು ಹೊಂದಿದನು.

೬. ದುಂಧುಮಾರನೇ ಮುಂತಾದ ರಾಜರು ಸ್ವರ್ಗವನ್ನು ಇದರಿಂದಲೇ ಹೊಂದಿದರು. ಶಿವನು ಈ ವ್ರತಮಾಡಿ ಬಹ್ಮ ಕಪಾಲವು ಪೀಡಿಸುತ್ತಿದುದನ್ನು ತಪ್ಪಿಸಿಕೊಂಡನು.

೭. ಮನುಷ್ಯನು ಹತ್ತುಸಾವಿರ ವರ್ಷಕಾಲ ತಪಸ್ಸು ಮಾಡಿದರೆ ಹೊಂದುವ ಫಲವನ್ನು ಈ ವರೂಥಿನೀ ವ್ರತ ಒಂದರಿಂದಲೇ ಹೊಂದುತ್ತಾನೆ.

೮. ಈ ವರೂಥಿನೀ ವ್ರತವನ್ನು ಶ್ರದ್ಧೆಯಿಂದ ಮಾಡಿದವನು ಇಹಲೋಕ ಪರಲೋಕಗಳಲ್ಲಿ ಇಷ್ಟವಾದ ಫಲಗಳನ್ನು ಹೊಂದುತ್ತಾನೆ.

ಪವಿತ್ರಾ ಪಾವನೀ ಹ್ಯೇಷಾ ಮಹಾಪಾತಕನಾಶಿನೀ ।
ಭುಕ್ತಿಮುಕ್ತಿಪ್ರದಾ ಚೈವ ಕರ್ತೄಣಾಂ ನೃಪಸತ್ತಮ ॥ ೯ ॥

ಅಶ್ವದಾನಾನ್ನೃಪಶ್ರೇಷ್ಠ ಗಜದಾನಂ ವಿಶಿಷ್ಯತೇ ।
ಗಜದಾನಾದ್ಭೂಮಿದಾನಂ ತಿಲದಾನಂ ತತೋಽಧಿಕಂ ॥ ೧೦ ॥

ತಿಲದಾನಾತ್ಸ್ವರ್ಣದಾನಮನ್ನದಾನಂ ತತೋಽಧಿಕಂ ।
ಅನ್ನದಾನಾತ್ಪರಂ ದಾನಂ ನ ಭೂತಂ ನ ಭವಿಷ್ಯತಿ ॥ ೧೧ ॥

ಪಿತೃದೇವಮನುಷ್ಯಾಣಾಂ ತೃಪ್ತಿರನ್ನೇನ ಜಾಯತೇ ।
ತತ್ಸಮಂ ಕವಿಭಿಃ ಪ್ರೋಕ್ತಂ ಕನ್ಯಾದಾನಂ ನೃಪೋತ್ತಮ ॥ ೧೨ ॥

ಧೇನುದಾನಂ ಚ ತತ್ತುಲ್ಯಂ ಇತ್ಯಾಹ ಭಗವಾನ್ಸ್ವಯಂ ।
ಪ್ರೋಕ್ತೇಭ್ಯಸ್ಸರ್ವದಾನೇಭ್ಯೋ ವಿದ್ಯಾದಾನಂ ವಿಶಿಷ್ಯತೇ ॥ ೧೩ ॥

---

೯. ಈ ವ್ರತವು ಪವಿತ್ರವಾದುದು. ಮಾಡಿದವರ ಮಹಾಪಾಪಗಳನ್ನು ನಾಶಮಾಡುತ್ತದೆ. ಇಹಪರಗಳಲ್ಲಿ ಭುಕ್ತಿಮುಕ್ತಿಗಳನ್ನು ಕೊಡುತ್ತದೆ.

೧೦–೧೧. ಅಶ್ವ (ಕುದುರೆ) ದಾನವು ಶ್ರೇಷ್ಠವಾದುದು. ಆ ಕುದುರೆ ದಾನಕ್ಕಿಂತಲೂ ಆನೆಯ ದಾನವು ಹೆಚ್ಚಿನದು. ಆ ಆನೆಯ ದಾನಕ್ಕಿಂತಲೂ ಭೂಮಿದಾನವು ಉತ್ಕೃಷ್ಟವು. ಆ ಭೂಮಿದಾನಕ್ಕಿಂತಲೂ ಎಳ್ಳಿನ ದಾನವು ಹೆಚ್ಚಿನದು. ಆ ಎಳ್ಳಿನ ದಾನಕ್ಕಿಂತಲೂ ಚಿನ್ನದ ದಾನವು ಇನ್ನೂ ಹೆಚ್ಚಿನದು. ಆ ಚಿನ್ನದ ದಾನಕ್ಕಿಂತಲೂ ಅನ್ನದಾನವು ಉತ್ಕೃಷ್ಟವು. ಅನ್ನದಾನಕ್ಕಿಂತ ಉತ್ಕೃಷ್ಟವಾದುದು ಹಿಂದೆಯೂ ಇಲ್ಲ. ಮುಂದೆಯೂ ಇರುವುದಿಲ್ಲ

೧೨. ಪಿತೃಗಳು, ದೇವತೆಗಳು, ಮನುಷ್ಯರು ಅನ್ನದಾನದಿಂದ ತೃಪ್ತರಾಗುತ್ತಾರೆ. ಅದಕ್ಕೆ ಸಮವಾದ ದಾನವು ಕನ್ಯಾದಾನವೊಂದಿರುವುದು ಎಂದು ತಿಳಿದವರು ಹೇಳುತ್ತಾರೆ.

೧೩–೧೫. ಗೋದಾನಕ್ಕೆ ಕನ್ಯಾದಾನವು ಸಮವು. ಈ ಮೇಲೆ ಹೇಳಿದ ದಾನವೆಲ್ಲಕ್ಕಿಂತಲೂ ವಿದ್ಯಾದಾನವು ಅಧಿಕವಾದುದು. ಆ ಫಲವನ್ನು ವರೂಥಿನೀ

ತತ್ಫಲಂ ಸಮವಾಪ್ನೋತಿ ನರಃ ಕೃತ್ವಾ ವರೂಥಿನೀಂ ।
ಕನ್ಯಾವಿತ್ತೇನ ಜೀವಂತಿ ಯೇ ನರಾಃ ಪಾಪಮೋಹಿತಾಃ ॥ ೧೪ ॥

ಪುಣ್ಯಕ್ಷಯಾತ್ತೇ ಗಚ್ಛಂತಿ ನಿರಯಂ ಯಾತನಾಮಯಂ ।
ತಸ್ಮಾತ್ಸರ್ವಪ್ರಯತ್ನೇನ ನ ಗ್ರಾಹ್ಯಂ ಕನ್ಯಕಾಧನಂ ॥ ೧೫ ॥

ಕನ್ಯಾಂ ಪುಣ್ಯೇನ ಯೋ ದದ್ಯಾದ್ಯಥಾಶಕ್ತಿ ಸ್ವಲಂಕೃತಾಂ ।
ತತ್ಪುಣ್ಯಸಂಖ್ಯಾಂ ಗದಿತುಂ ಚಿತ್ರಗುಪ್ತೋ ನ ಶಕ್ನುಯಾತ್ ॥ ೧೬ ॥

ತತ್ತುಲ್ಯಂ ಫಲಮಾಪ್ನೋತಿ ನರಃ ಕೃತ್ವಾ ವರೂಥಿನೀಂ ।
ಕಾಂಸ್ಯಂ ಮಾಂಸಂ ಮಸೂರಾಂಶ್ಚ ಚಣಕಾನ್ಕೋದ್ರವಾಂಸ್ತಥಾ ॥ ೧೭ ॥

ಶಾಕಂ ಮಧು ಪರಾನ್ನಂ ಚ ಪುನರ್ಭೋಜನಮೈಥುನೇ ।
ವೈಷ್ಣವೋ ವ್ರತಕರ್ತಾ ಚ ದಶಮ್ಯಾಂ ದಶವರ್ಜಯೇತ್ ॥ ೧೮ ॥

---

ವ್ರತವನ್ನು ಮಾಡಿದವನು ಹೊಂದುತ್ತಾನೆ. ಪಾಪಿಗಳಾದ ಯಾವ ಜನರು ಕನ್ಯೆಯ ಸಂಬಂಧವಾದ ಹಣದಿಂದ ಜೀವಿಸುತ್ತಾರೆಯೋ ಅವರು ಪುಣ್ಯಗಳನ್ನು ನಾಶಮಾಡಿಕೊಂಡು ನರಕಯಾತನೆಯನ್ನು ಹೊಂದುತ್ತಾರೆ. ಆದುದರಿಂದ ಸರ್ವಪ್ರಯತ್ನದಿಂದಲೂ ಕನ್ಯಾಶುಲ್ಕವನ್ನು ತೆಗೆದುಕೊಳ್ಳಬಾರದು.

೧೬. ಯಾವನು ಶಕ್ತಿಗನುಗುಣವಾಗಿ ಕನ್ಯೆಗೆ ಅಲಂಕರಿಸಿ ದಾನಮಾಡುತ್ತಾನೆಯೋ ಆ ಪುಣ್ಯದ ಸಂಖ್ಯೆಯನ್ನು ಚಿತ್ರಗುಪ್ತನೂ ಹೇಳಲಾರನು.

೧೭–೧೮. ಮನುಷ್ಯನು ವರೂಥಿನೀ ವ್ರತವನ್ನು ಮಾಡಿದರೆ ಆ ಕನ್ಯಾದಾನದಫಲವನ್ನು ಹೊಂದುತ್ತಾನೆ. ಈ ವರೂಥಿನೀ ವ್ರತಮಾಡುವವನು ದಶಮಿಯ ದಿವಸ ಕಂಚಿನ ತಟ್ಟೆಯಲ್ಲಿ ಊಟಮಾಡಬಾರದು. ಮಾಂಸ, ಹಾರಕ, ಕಡಲೆ, ನವಣೆ, ಕಾಯಿಪಲ್ಯಗಳು, ಜೇನು, ಪರರನ್ನವನ್ನು ಊಟಮಾಡುವುದು ಎರಡನೆ ಬಾರಿ ಊಟಮಾಡುವುದು. ರತಿಕ್ರೀಡೆ ಈ ಹತ್ತನ್ನು ಬಿಟ್ಟುಬಿಡಬೇಕು.

ದ್ಯೂತಕ್ರೀಡಾಂ ಚ ನಿದ್ರಾಂ ಚ ತಾಂಬೂಲಂ ದಂತಧಾವನಂ ।
ಪರಾಪವಾದಪೈಶುನ್ಯೇ ಸ್ತೇಯಂ ಹಿಂಸಾಂ ತಥಾ ರತಿಂ　　॥ ೧೯ ॥

ಕ್ರೋಧಂ ಚಾನೃತವಾಕ್ಯಾನಿ ಹ್ಯೇಕಾದಶ್ಯಾಂ ವಿವರ್ಜಯೇತ್ ।
ಕಾಂಸ್ಯಂ ಮಾಂಸಂ ಸುರಾಂ ಕ್ಷೌದ್ರಂ ತೈಲಂ ಪತಿತಭಾಷಣಂ　　॥ ೨೦ ॥

ವ್ಯಾಯಾಮಂ ಚ ಪ್ರವಾಸಂ ಚ ಪುನರ್ಭೋಜನಮೈಥುನೇ ।
ಪಷ್ಟಿಷಷ್ಟಿಮಸೂರಾನ್ನಂ ದ್ವಾದಶ್ಯಾಂ ಪರಿವರ್ಜಯೇತ್　　॥ ೨೧ ॥

ಅನೇನ ವಿಧಿನಾ ರಾಜನ್ವಿಹಿತಾ ವೈ ವರೂಥಿನೀ ।
ರಾತ್ರೌ ಜಾಗರಣಂ ಕೃತ್ವಾ ಪೂಜಿತ್ವಾ ಮಧುಸೂದನಂ　　॥ ೨೨ ॥

ಸರ್ವಪಾಪವಿನಿರ್ಮುಕ್ತಾಸ್ತೇ ಯಾಂತಿ ಪರಮಾಂ ಗತಿಂ ।
ತಸ್ಮಾತ್ಸರ್ವಪ್ರಯತ್ನೇನ ಕರ್ತವ್ಯಾ ಪಾಪಭೀರುಭಿಃ　　॥ ೨೩ ॥

---

೧೯–೨೧. ಜೂಜು, ನಿದ್ರೆ, ತಾಂಬೂಲಚರ್ವಣ, ಹಲ್ಲುಜ್ಜುವುದು, ಪರರನ್ನು ನಿಂದಿಸುವುದು, ಚಾಡಿ ಹೇಳುವುದು, ಕಳ್ಳತನ, ಹಿಂಸೆ, ರತಿಕ್ರೀಡೆ, ಕೋಪ, ಸುಳ್ಳುಮಾತಾಡುವುದು. ಇವನ್ನು ಏಕಾದಶಿಯ ದಿನ ಬಿಡಬೇಕು. ಕಂಚಿನಪಾತ್ರೆಗಳನ್ನು ಉಪಯೋಗಿಸುವುದು, ಮಾಂಸ, ಹೆಂಡ, ಜೇನು, ಎಣ್ಣೆ, ಅಯೋಗ್ಯರೊಡನೆ ಮಾತಾಡುವುದು. ಪ್ರಯಾಣ. ಎರಡನೆ ಬಾರಿ ಊಟ ಮೈಥುನ, ಹಿಟ್ಟಿನ ಪದಾರ್ಥಗಳು, ಹಾರಕದನ್ನ, ಇವನ್ನು ದ್ವಾದಶಿಯ ದಿನ ಬಿಡಬೇಕು.

೨೨–೨೪. ಈ ರೀತಿಯಾದ ವಿಧಿಯಿಂದ ವರೂಥಿನೀ ವ್ರತವನ್ನು ಮಾಡಬೇಕು. ರಾತ್ರಿಯಲ್ಲಿ ಜಾಗರಣೆ ಮಾಡಿ ಮಧುಸೂದನನನ್ನು ಪೂಜಿಸಿದರೆ ಪಾಪಗಳನ್ನೆಲ್ಲಾ ಕಳೆದುಕೊಂಡು ಉತ್ತಮ ಗತಿಯನ್ನು ಹೊಂದುತ್ತಾನೆ. ಆದುದರಿಂದ ಪಾಪಕ್ಕೆ ಹೆದರುವವರು ಬಹು ಪ್ರಯತ್ನದಿಂದ ಈ ವರೂಥಿನೀ ವ್ರತವನ್ನು

ಕ್ಷಪಾರಿತನಯಾದ್ಭೀತೋ ನರಃ ಕುರ್ಯಾದ್ವರೂಥಿನೀಂ ।
ಪಠನಾಚ್ಛ್ರವಣಾದ್ರಾಜನ್ ಗೋಸಹಸ್ರಫಲಂ ಲಭೇತ್ ॥ ೨೪ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಪತಿ ನಾರದ ಸಂವಾದಾನ್ತರ್ಗತ ಕೃಷ್ಣ ಯುಧಿಷ್ಠಿರ ಸಂವಾದೇ ವೈಶಾಖ ಕೃಷ್ಣ ವರೂಥಿನ್ಯೇಕಾದಶೀ ಮಾಹಾತ್ಮ್ಯಂ ನಾಮ ಪಂಚಾಶತ್ತಮೋಽಧ್ಯಾಯಸ್ಸಮಾಪ್ತಃ

---

ಮಾಡಬೇಕು. ಇದನ್ನು ಓದುವುದರಿಂದಲೂ ಕೇಳುವುದರಿಂದಲೂ ಸಾವಿರ ಗೋದಾನದ ಫಲವನ್ನು ಹೊಂದುತ್ತಾನೆ. ಅಲ್ಲದೆ ಪಾಪಗಳೆನ್ನು ಕಳೆದುಕೊಂಡು ವೈಕುಂಠವನ್ನು ಹೊಂದುತ್ತಾನೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಪತಿ ನಾರದರ ಸಂವಾದಾನ್ತರ್ಗತವಾದ ಕೃಷ್ಣ ಯುಧಿಷ್ಠರರ ಸಂವಾದದಲ್ಲಿ ವೈಶಾಜ ಕೃಷ್ಣ ವರೂಥಿನೀ ಏಕಾದಶೀ ಮಹಿಮೆ ಎಂಬ ಐವತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಏಕಪಂಚಾಶತ್ತಮೋಽಧ್ಯಾಯಃ ॥



॥ ಯುಧಿಷ್ಠಿರ ಉವಾಚ ॥

ವೈಶಾಖಶುಕ್ಲಪಕ್ಷೇ ತು ಕಿನ್ನಾಮ್ನ್ಯೇಕಾದಶೀ ಭವೇತ್ ।
ಕಿಂ ಫಲಂ ಕೋ ವಿಧಿಸ್ತತ್ರ ಕಥಯಸ್ವ ಜನಾರ್ದನ ॥ ೧ ॥

॥ ಕೃಷ್ಣ ಉವಾಚ ॥

ಇದಮೇವ ಪುರಾಪೃಷ್ಟಂ ರಾಮಚಂದ್ರೇಣ ಧೀಮತಾ ।
ವಸಿಷ್ಠಂ ಪ್ರತಿ ರಾಜೇಂದ್ರ ಯತ್ತ್ವಂ ಮಾಮನುಪೃಚ್ಛಸಿ ॥ ೨ ॥

॥ ಶ್ರೀರಾಮ ಉವಾಚ ॥

ಭಗವನ್ ಶ್ರೋತುಮಿಚ್ಛಾಮೀ ವ್ರತಾನಾಮುತ್ತಮಂ ವ್ರತಂ ।
ಸರ್ವಪಾಪಕ್ಷಯಕರಂ ಸರ್ವದುಃಖನಿಕೃಂತನಂ ॥ ೩ ॥

---

## ಐವತ್ತೊಂದನೆಯ ಅಧ್ಯಾಯವು



೧. ಯುಧಿಷ್ಠಿರನು ಹೇಳಿದನು–ಎಲೈ ಜನಾರ್ದನನೇ! ವೈಶಾಖ ಶುಕ್ಲದಲ್ಲಿ ಬರುವ ಏಕಾದಶಿಯ ಹೆಸರೇನು? ಅದರ ಫಲವೇನು? ಅದಕ್ಕೆ ವಿಧಿಯು ಏನು? ಅದನ್ನು ಹೇಳು.

೨. ಕೃಷ್ಣನು ಹೇಳಿದನು– ಎಲೈ ಧರ್ಮಜನೇ! ನೀನು ಕೇಳಿದ ಈ ವಿಷಯವನ್ನೇ ಪೂರ್ವದಲ್ಲಿ ರಾಮಚಂದ್ರನು ವಸಿಷ್ಠನನ್ನು ಕುರಿತು ಕೇಳಿದನು.

೩. ಶ್ರೀರಾಮನು ಹೇಳಿದನು–ಎಲೈ ವಸಿಷ್ಠನೇ! ಸರ್ವಪಾಪವನ್ನು ನಾಶ ಮಾಡುವುದೂ ದುಃಖಗಳನ್ನು ನಾಶಮಾಡುವುದೂ ಆದ ಉತ್ತಮವಾದ ವ್ರತವನ್ನು ಕೇಳಬೇಕೆಂಬ ಇಚ್ಛೆ ಇರುವುದು.

ಮಯಾ ದುಃಖಾನಿ ಭುಕ್ತಾನಿ ಸೀತಾವಿರಹಜಾನಿ ತು ।
ತತೋಽಹಂ ಭಯಭೀತೋಽಸ್ಮಿ ಪೃಚ್ಛಾಮಿ ತ್ವಾಂ ಮಹಾಮುನೇ ॥ ೪ ॥

॥ ವಸಿಷ್ಠ ಉವಾಚ ॥

ಸಾಧುಪೃಷ್ಟಂ ತ್ವಯಾ ರಾಮ ತವೈಷಾ ನೈಷ್ಠಿಕೀ ಮತಿಃ ।
ತ್ವನ್ನಾಮಗ್ರಹಣೇನೈವ ಪೂತೋ ಭವತಿ ಮಾನವಃ ॥ ೫ ॥

ತಥಾಪಿ ಕಥಯಿಷ್ಯಾಮಿ ಲೋಕಾನಾಂ ಹಿತಕಾಮ್ಯಯಾ ।
ಪವಿತ್ರಂ ಪಾವನಾನಾಂ ಚ ವ್ರತಾನಾಮುತ್ತಮಂ ವ್ರತಂ ॥ ೬ ॥

ವೈಶಾಖಸ್ಯ ಸಿತೇ ಪಕ್ಷೇ ರಾಮ ಯೈಕಾದಶೀ ಭವೇತ್ ।
ಮೋಹಿನೀ ನಾಮ ಸಾ ಪ್ರೋಕ್ತಾ ಸರ್ವಪಾಪಹರಾ ಪರಾ ॥ ೭ ॥

ಮೋಹಜಾಲಾತ್ಪ್ರಮುಚ್ಯಂತೇ ಪಾತಕಾನಾಂ ಸಮೂಹತಃ ।
ಅಸ್ಯಾ ವ್ರತಪ್ರಭಾವೇಣ ಸತ್ಯಂ ಸತ್ಯಂ ವದಾಮ್ಯಹಂ ॥ ೮ ॥

---

೪. ನಾನು ಸೀತೆಯ ಅಗಲುವಿಕೆಯಿಂದ ಉಂಟಾದ ದುಃಖವನ್ನು ಅನುಭವಿಸಿದೆನು. ಆದುದರಿಂದ ಭಯಪಟ್ಟು ನಿನ್ನನ್ನು ಕೇಳುತ್ತೇನೆ.

೫. ವಸಿಷ್ಠನು ಹೇಳಿದನು–ಎಲೈ ರಾಮನೇ! ನೀನು ಕೇಳಿದುದು ಸರಿ. ಈ ಬುದ್ಧಿಯು ನಿನಗೆ ಸ್ವಭಾವವಾದುದು. ನಿನ್ನ ಹೆಸರನ್ನು ಹೇಳುವುದರಿಂದಲೇ ಲೋಕದಲ್ಲಿ ಜನರು ಪರಿಶುದ್ಧರಾಗುತ್ತಾರೆ.

೬. ಆದರೂ ಕೂಡ ಲೋಕದ ಜನರ ಹಿತಕ್ಕೋಸ್ಕರ ಹೇಳುತ್ತೇನೆ. ಪವಿತ್ರವೂ ಯೋಗ್ಯವೂ ಉತ್ತಮವೂ ಆದ ವ್ರತವೊಂದಿರುವುದು.

೭. ವೈಶಾಖ ಶುದ್ಧದಲ್ಲಿ ಬರುವ ಏಕಾದಶಿಗೆ ಮೋಹಿನೀ ಏಕಾದಶಿಯೆಂದು ಹೆಸರು. ಅದು ಎಲ್ಲಾ ಪಾಪಗಳನ್ನೂ ಹೋಗಲಾಡಿಸುತ್ತದೆ.

೮. ಆ ವ್ರತವನ್ನು ಮಾಡಿದರೆ ಎಲ್ಲಾ ಮೋಹ (ಅಜ್ಞಾನ) ಗಳಿಂದಲೂ ಪಾಪಗಳಿಂದಲೂ ಜನರು ಪಾರಾಗುತ್ತಾರೆ. ಸತ್ಯವಾಗಿ ಹೇಳುತ್ತೇನೆ.

ಅತಃ ಕಾರಣತೋ ರಾಮ ಕರ್ತವ್ಯೈಷಾ ಭವಾದೃಶೈಃ ।
ಪಾತಕಾನಾಂ ಕ್ಷಯಕರೀ ಮಹಾದುಃಖವಿನಾಶಿನೀ ॥ ೯ ॥

ಶೃಣುಷ್ವೈಕಮನಾ ರಾಮ ಕಥಾಂ ಪಾಪಹರಾಂ ಪರಾಂ ॥
ಯಸ್ಯಾಶ್ಶ್ರವಣಮಾತ್ರೇಣ ಮಹಾಪಾಪಂ ಪ್ರಣಶ್ಯತಿ ॥ ೧೦ ॥

ಸರಸ್ವತ್ಯಾಸ್ತಟೇ ರಮ್ಯೇ ಪುರೀ ಭದ್ರಾವತೀ ಶುಭಾ ।
ಧೃತಿಮಾನ್ನಾಮ ನೃಪತಿಸ್ತತ್ರ ರಾಜ್ಯಂ ಕರೋತಿ ವೈ ॥ ೧೧ ॥

ಚಂದ್ರವಂಶೋದ್ಭವೋ ರಾಮ ಧೃತಿಮಾನ್ ಸತ್ಯಸಂಗರಃ ।
ತತ್ರ ವೈಶ್ಯೋ ನಿವಸತಿ ಧನಧಾನ್ಯಸಮೃದ್ಧಿಮಾನ್ ॥ ೧೨ ॥

ಧನಪಾಲ ಇತಿ ಖ್ಯಾತಃ ಪುಣ್ಯಕರ್ಮಪ್ರವರ್ತಕಃ ।
ಪ್ರಪಾಕೂಪಮಠಾರಾಮತಟಾಗಗೃಹಕಾರಕಃ ॥ ೧೩ ॥

---

೯. ಆ ವ್ರತವು ಪಾಪಗಳನ್ನು ನಾಶಮಾಡುತ್ತಾ ದುಃಖವನ್ನು ತೊಲಗಿಸುತ್ತದೆ. ಆದುದರಿಂದ ಎಲೈ ರಾಮನೆ! ನಿನ್ನಂತಹ ದುಃಖಿಗಳು ಅದನ್ನು ಮಾಡಬೇಕು.

೧೦. ಎಲೈ ರಾಮನೆ! ಈ ಮಹಾ ಪಾಪನಾಶಕವಾದ ಕಥೆಯನ್ನು ಹೇಳುತ್ತೇನೆ. ಒಂದೇ ಮನಸ್ಸಿನಿಂದ ಕೇಳು. ಅದನ್ನು ಕೇಳುವುದರಿಂದಲೇ ಮಹಾಪಾಪಗಳೆಲ್ಲವೂ ನಾಶವಾಗುತ್ತವೆ.

೧೧. ಸರಸ್ವತೀ ನದಿಯ ದಡದಲ್ಲಿ ಭದ್ರಾವತಿಯೆಂಬ ಒಂದು ಪಟ್ಟಣ ವಿದ್ದಿತು. ಅದರಲ್ಲಿ ಧೃತಿಮಂತನೆಂಬ ರಾಜನೊಬ್ಬನು ರಾಜ್ಯವಾಳುತ್ತಿದ್ದನು.

೧೨-೧೩. ಆ ರಾಜನು ಚಂದ್ರವಂಶದವನು. ಬಹು ಶೂರನು. ಆ ಊರಿನಲ್ಲಿ ಒಬ್ಬ ವೈಶ್ಯನಿದ್ದನು. ಅವನು ಧನಧಾನ್ಯಗಳನ್ನು ಬಹುವಾಗಿ ಹೊಂದಿದ್ದನು. ಅವನ ಹೆಸರು ಧನಪಾಲನು. ಯಾವಾಗಲೂ ಪುಣ್ಯಕೆಲಸಗಳನ್ನು ಮಾಡುತ್ತಿದ್ದನು. ಅರವಟ್ಟಿಗೆ ಇಡಿಸಿದ್ದನು. ಬಾವಿಗಳನ್ನು ತೋಡಿಸಿದ್ದನು. ಮಠಗಳನ್ನು ಕಟ್ಟಿಸಿದ್ದನು. ತೋಪುಗಳನ್ನು ಹಾಕಿಸಿದ್ದನು. ಕೆರೆಗಳನ್ನು ಕಟ್ಟಿಸಿರುವನು. ಮನೆಗಳನು ಕಟ್ಟಿಸಿರುವನು.

ವಿಷ್ಣುಭಕ್ತಿರತಶ್ಶಾಂತಸ್ತಸ್ಯಾಸನ್ಪಂಚ ಪುತ್ರಕಾಃ ।
ಸುಮನಾ ದ್ಯುತಿಮಾಂಶ್ಚೈವ ಮೇಧಾವೀ ಸುಕೃತಸ್ತಥಾ ॥ ೧೪ ॥

ಪಂಚಮೋ ಧೃಷ್ಟಬುದ್ಧಿಶ್ಚ ಮಹಾಪಾಪರತಸ್ಸದಾ ।
ಪರಸ್ತ್ರೀಸಂಗನಿರತೋ ವಿಟಗೋಷ್ಠೀವಿಶಾರದಃ ॥ ೧೫ ॥

ದ್ಯೂತಾದಿವ್ಯಸನಾಸಕ್ತೋ ವಾರಸ್ತ್ರೀರತಿಲಾಲಸಃ ।
ನ ಚ ದೇವಾರ್ಚನೇ ಬುದ್ಧಿಃ ನ ಪಿತ್ರ್ಯಾಂಶ್ಚ ದ್ವಿಜಾನ್ಪ್ರತಿ ॥ ೧೬ ॥

ಅನ್ಯಾಯವರ್ತೀ ದುಷ್ಟಾತ್ಮಾ ಪಿತುರ್ದ್ರವ್ಯಕ್ಷಯಂಕರಃ ।
ಅಭಕ್ಷ್ಯಭಕ್ಷಕಃ ಪಾಪೀ ಸುರಾಪಾನೇ ರತಸ್ಸದಾ ॥ ೧೭ ॥

ವೇಶ್ಯಾಕಂಠೇ ಕ್ಷಿಪ್ತಬಾಹುರ್ಭ್ರಮನ್ದೃಷ್ಟಶ್ಚತುಷ್ಪಥೇ ।
ಪಿತ್ರಾ ನಿಷ್ಕಾಸಿತೋ ಗೇಹಾತ್ಪರಿತ್ಯಕ್ತಶ್ಚ ಬಾಂಧವೈ ॥ ೧೮ ॥

---

೧೪-೧೬. ಆ ಧನಪಾಲನು ವಿಷ್ಣುವಿನ ಭಕ್ತಿಯನ್ನು ಹೊಂದಿ ಶಾಂತನಾಗಿದ್ದನು. ಅವನಿಗೆ ಸುಮನ, ದ್ಯುತಿಮಾನ್, ಮೇಧಾವೀ, ಸುಕೃತ, ಧೃಷ್ಟಬುದ್ಧಿ ಎಂಬುದಾಗಿ ಐದುಜನ ಮಕ್ಕಳಿದ್ದರು. ಕೊನೆಯವನಾದ ಧೃಷ್ಟಬುದ್ಧಿಯು ಯಾವಾಗಲೂ ಪಾಪಕೆಲಸದಲ್ಲಿಯೇ ನಿರತನಾಗಿದ್ದನು. ಅವನು ಯಾವಾಗಲೂ ಪರರ ಹೆಂಗಸರಲ್ಲಿಯೇ ಆಸಕ್ತನಾಗಿದ್ದನು. ವಿಟರ ಗುಂಪಿನಲ್ಲಿ ವಿನೋದಪಡುತ್ತಿದ್ದನು. ಜೂಜು ಮುಂತಾದ ದುರ್ವ್ಯಸನಗಳುಳ್ಳವನಾಗಿದ್ದನು. ಸೂಳೆಯರ ಮನೆಯಲ್ಲಿಯೇ ಇರುತ್ತಿದ್ದನು. ದೇವತೆಗಳನ್ನು ಪೂಜಿಸುವ ಬುದ್ಧಿಯೇ ಇವನಿಗಿರಲಿಲ್ಲವು. ಪಿತೃಗಳನ್ನಾಗಲೀ ಬ್ರಾಹ್ಮಣರನ್ನಾಗಲೀ ಪೂಜಿಸಿ ತೃಪ್ತಿಪಡಿಸಬೇಕೆಂಬ ಬುದ್ಧಿಯೇ ಬಾರದು.

೧೭-೧೮. ಅವನು ಯಾವಾಗಲೂ ಅನ್ಯಾಯಮಾರ್ಗದಲ್ಲಿರುತ್ತಾ ತಂದೆಯ ಹಣವನ್ನೆಲ್ಲಾ ನಾಶಪಡಿಸುತ್ತಿದ್ದನು. ತಿನ್ನಬಾರದುದನ್ನು ತಿನ್ನುವುದು, ಹೆಂಡ ಮುಂತಾದುವನ್ನು ಕುಡಿಯುವುದು ಇವುಗಳಲ್ಲಿ ಆಸಕ್ತನಾಗಿ ಇರುತ್ತಿದ್ದನು. ಸೂಳೆಯರ ಕತ್ತಿನಮೇಲೆ ಕೈ ಹಾಕಿಕೊಂಡು ಬೀದಿಬೀದಿಗಳಲ್ಲಿ ಎಲ್ಲರ ಎದುರಿಗೂ ಸುತ್ತುತ್ತಿದ್ದನು. ಇದನ್ನು ನೋಡಿ ಇವನನ್ನು ತಂದೆಯು ಮನೆಯಿಂದ ಓಡಿಸಿಬಿಟ್ಟನು. ಬಂಧುಗಳು ಅವನನ್ನು ಮಾತನಾಡಿಸುತ್ತಿರಲಿಲ್ಲ.

ಸ್ವದೇಹಭೂಷಣಾನ್ಯೇವ ಕ್ಷಯಂ ನೀತಾನಿ ತೇನ ವೈ ।
ಗಣಿಕಾಭಿಃ ಪರಿತ್ಯಕ್ತೋ ನಿಂದಿತಶ್ಚ ಧನಕ್ಷಯಾತ್ ॥ ೧೯ ॥

ತತಶ್ಚಿಂತಾಪರೋ ವಸ್ತ್ರಧನಹೀನಃ ಕ್ಷುಧಾರ್ದಿತಃ ।
ಕಿಂ ಕರೋಮಿ ಕ್ವ ಗಚ್ಛಾಮಿ ಕೇನೋಪಾಯೇನ ಜೀವ್ಯತೇ ॥ ೨೦ ॥

ತಸ್ಕರತ್ವಂ ಸಮಾರಬ್ಧಂ ತತ್ರೈವ ನಗರೇ ಪಿತುಃ ।
ಗೃಹೀತೋ ರಾಜಪುರುಷೈರ್ಮುಕ್ತಶ್ಚ ಪಿತೃಗೌರವಾತ್ ॥ ೨೧ ॥

ಪುನರ್ಬದ್ಧಃ ಪುನಸ್ತ್ಯಕ್ತಃ ಪುನರ್ಬದ್ಧಸ್ಸಸಂಭ್ರಮೈಃ ।
ಧೃಷ್ಟಬುದ್ಧಿರ್ದುರಾಚಾರೋ ನಿಭದ್ಧೋ ನಿಗಡೈರ್ದೃಢೈಃ ॥ ೨೨ ॥

ಕಶಾಘಾತೈಸ್ತಾಡಿತಶ್ಚ ತತಶ್ಚೇತಶ್ಚ ಧಾವತಿ ।
ಸಿಂಹವನ್ನಿಜಘಾನಾಸೌ ಮೃಗಶೂಕರಚಿತ್ರಲಾನ್ ॥ ೨೩ ॥

---

೧೯. ಕೊನೆಗೆ ತನ್ನ ಮೈಮೇಲಿರುವ ಒಡವೆಗಳನ್ನು ಮಾರಿ ತಿಂದು ಅವನ್ನು ನಾಶಪಡಿಸಿಕೊಂಡನು. ಕೈಯ್ಯಲ್ಲಿ ಹಣವಿಲ್ಲದುದರಿಂದ ಸೂಳೆಯರು ನಿಂದಿಸುತ್ತ ಇವನನ್ನು ಬಿಟ್ಟುಬಿಟ್ಟರು.

೨೦. ಈ ರೀತಿಯಾಗಿ ಬಟ್ಟೆ ಹಣ ಒಂದೂ ಇಲ್ಲದವನಾಗಿ ಹೊಟ್ಟೆಗಿಲ್ಲದೆ ಹಸಿವುಗೊಂಡವನಾಗಿ ಏನು ಮಾಡಲಿ ? ಎಲ್ಲಿ ಹೋಗಲಿ ? ಯಾವ ರೀತಿಯಲ್ಲಿ. ಜೀವನ ಮಾಡಲಿ ? ಎಂದು ಯೋಚಿಸುತ್ತಿದ್ದನು.

೨೧-೨೫. ಆ ತಂದೆಯಿರುವ ಪಟ್ಟಣದಲ್ಲಿಯೇ ಕಳ್ಳತನಕ್ಕೆ ಮೊದಲು ಮಾಡಿದನು. ಕಾವಲುಗಾರರು ಹಿಡಿದರು. ಆದರೆ ತಂದೆಯಲ್ಲಿರುವ ಗೌರವದಿಂದ ಬಿಟ್ಟುಬಿಟ್ಟರು. ಮತ್ತೆ ಕಳ್ಳತನಮಾಡಿ ಸಿಕ್ಕಿದನು. ಮತ್ತೆ ಹಿಡಿದು ಮತ್ತೆ ಬಿಟ್ಟುಬಿಟ್ಟರು. ಮತ್ತೆ ಕಳ್ಳತನಮಾಡಲು ಹಿಡಿದರು. ಈ ದುರಾಚಾರಿಯಾದ ಧೃಷ್ಟಬುದ್ಧಿಗೆ ಬೇಡಿ ಹಾಕಿದರು. ಚಾವಟಿಗಳಿಂದ ಹೊಡೆದರು. ಕೊನೆಗೆ ಬಿಟ್ಟು ಬಿಟ್ಟರು. ಆಮೇಲೆಯೂ ಕೂಡ ಅಲ್ಲಿ ಇಲ್ಲಿ ಓಡಾಡುತ್ತ ಕಾಡಿಗೆ ಹೋಗಿ ಮೃಗಗಳನ್ನೂ ಹಂದಿಗಳನ್ನೂ ಜಿಂಕೆಗಳನ್ನೂ ಇನ್ನೂ ಇತರ ಪ್ರಾಣಿಗಳನ್ನೂ ಸಿಂಹದಂತೆ ಕೊಂದು ತಿನ್ನುತ್ತಿದ್ದನು. ಮಾಂಸಾಹಾರದಲ್ಲಿ ಆಸಕ್ತನಾಗಿ

ಆಮಿಷಾಹಾರನಿರತೋ ವನೇ ತಿಷ್ಠತಿ ಸರ್ವದಾ ।
ಕರೇ ಶರಾಸನಂ ಕೃತ್ವಾ ನಿಷಂಗಂ ಪೃಷ್ಠಸಂಗತಂ ॥ ೨೪ ॥

ಅರಣ್ಯಚಾರಿಣೋ ಹಂತಿ ಪಕ್ಷಿಣಶ್ಚ ಸದಾ ಚರನ್ ।
ಚಕೋರಾಂಶ್ಚ ಮಯೂರಾಂಶ್ಚ ಕಂಕತಿತ್ತಿರಿಮೂಷಕಾನ್ ॥ ೨೫ ॥

ಏತಾನ್ಯನ್ಯಾನ್ ಹಿನಸ್ತ್ಯಂಧೋ ಧೃಷ್ಟಬುದ್ಧಿಸ್ಸುನಿರ್ಘೃಣಃ ।
ಪೂರ್ವಜನ್ಮಕೃತೈಃ ಪಾಪೈಃ ನಿಮಗ್ನಃ ಪಾಪಕರ್ದಮೇ ॥ ೨೬ ॥

ದುಃಖಶೋಕಸಮಾವಿಷ್ಟಃ ಪೀಡ್ಯಮಾನೋಽಪ್ಯಹರ್ನಿಶಂ ।
ಕೌಂಡಿನ್ಯಸ್ಯಾಶ್ರಮಪದಂ ಪ್ರಾಪ್ತಃ ಪುಣ್ಯಾಗಮಾತ್ ಕ್ವಚಿತ್ ॥ ೨೭ ॥

ಮಾಧವೇ ಮಾಸಿ ಜಾಹ್ನವ್ಯಾಂ ಕೃತಸ್ನಾನಸ್ತಪೋಧನಂ ।
ಆಸಸಾದ ಧೃಷ್ಟಬುದ್ಧಿಃಶೋಕಭಾರೇಣ ಪೀಡಿತಃ ॥ ೨೮ ॥

---

ವನದಲ್ಲಿಯೇ ಯಾವಾಗಲೂ ಇರುತ್ತಿದ್ದನು. ಕೈಯ್ಯಲ್ಲಿ ಧನುಸ್ಸನ್ನು ಹಿಡಿದು ಹೆಗಲಿನ ಮೇಲೆ ಬತ್ತಳಿಕೆಯನ್ನು ಹಾಕಿಕೊಂಡು ಕಾಡಿನಲ್ಲಿ ಪಕ್ಷಿಗಳು ಮೃಗಗಳು ಚಕೋರಗಳು ನವಿಲುಗಳು ಹದ್ದುಗಳು ಲಾವುಗೆಗಳು ಇಲಿಗಳು ಇವೆಲ್ಲವನ್ನೂ ಹೊಡೆಯುತ್ತಿದ್ದನು.

೨೬-೨೭. ಈರೀತಿಯಾಗಿ ತಿಳುವಳಿಕೆಯಿಲ್ಲದೆ ಆ ಧೃಷ್ಟಬುದ್ಧಿಯು ದಯಾ ಶೂನ್ಯನಾಗಿ ಎಲ್ಲವನ್ನೂ ಕೊಲ್ಲುತ್ತಿದ್ದನು. ಪೂರ್ವಜನ್ಮದ ಪಾಪಶೇಷದಿಂದ ಈ ಜನ್ಮದಲ್ಲಿಯೂ ಪಾಪದ ಕೆಸರಿನಲ್ಲಿ ಸಿಕ್ಕಿಕೊಂಡಿದ್ದನು. ಅಂತು ಕಷ್ಟಪಡುತ್ತ ದುಃಖಿಸುತ್ತ ಯಾವಾಗಲೂ ಇರುತ್ತಿದನು. ಯಾವುದೋ ಪೂರ್ವಜನ್ಮದ ಒಂದು ಪುಣ್ಯವು ಪ್ರಾಪ್ತವಾಗಲು ಅದರ ಆಧೀನದಿಂದ ಕೌಂಡಿನ್ಯಋಷಿಯ ಆಶ್ರಮಕ್ಕೆ ಹೋದನು.

೨೮. ವೈಶಾಖದಲ್ಲಿ ಗಂಗೆಯಲ್ಲಿ ಸ್ನಾನಮಾಡಿ ಆ ಧೃಷ್ಟಬುದ್ಧಿಯು ತನ್ನ ಸ್ಥಿತಿಗೆ ಶೋಕಿಸುತ್ತ ಆ ಕಾಂಡಿನ್ಯನ ಆಶ್ರಮಕ್ಕೆ ಹೋದನು.

ತದ್ವಸ್ತ್ರಬಿಂದುಸ್ಪರ್ಶೇನ ಗತತಾಪೋ ಹತಾಶುಭಃ ।
ಕೌಂಡಿನ್ಯಸ್ಯಾಗ್ರತಸ್ಸ್ಥಿತ್ವಾ ಪ್ರತ್ಯುವಾಚ ಕೃತಾಂಜಲಿಃ ॥ ೨೯ ॥

॥ ಧೃಷ್ಟಬುದ್ಧಿರುವಾಚ ॥

ಭೋ ಭೋ ಬ್ರಹ್ಮರ್ಷೇ ದ್ವಿಜಶ್ರೇಷ್ಠ ದಯಾಂ ಕೃತ್ವಾ ಮಮೋಪರಿ ।
ಯೇನ ಪುಣ್ಯಪ್ರಭಾವೇಣ ಮುಕ್ತಿರ್ಭವತಿ ತದ್ವದ ॥ ೩೦ ॥

॥ ಕೌಂಡಿನ್ಯ ಉವಾಚ ॥

ಶೃಣುಷ್ವೈಕಮನಾ ಭೂತ್ವಾ ಯೇನ ಪಾಪಕ್ಷಯಸ್ತವ ।
ವೈಶಾಖಸ್ಯ ಸಿತೇ ಪಕ್ಷೇ ಮೋಹಿನೀ ನಾಮ ವಿಶ್ರುತಾ ॥ ೩೧ ॥

ಏಕಾದಶೀ ವ್ರತಂ ತಸ್ಯಾಃ ಕುರು ಮದ್ವಾಕ್ಯಚೋದಿತಃ ।
ಮೇರುತುಲ್ಯಾನಿ ಪಾಪಾನಿ ಕ್ಷಯಂ ಗಚ್ಛಂತಿ ದೇಹಿನಾಂ ॥
ಬಹುಜನ್ಮಾರ್ಜಿತಾನ್ಯೇಷಾ ಮೋಹಿನೀ ಸಮುಪೋಷಿತಾ ॥ ೩೨ ॥

॥ ವಸಿಷ್ಠ ಉವಾಚ ॥

ಇತಿವಾಕ್ಯಂ ಮುನೇಶ್ಶ್ರುತ್ವಾ ಧೃಷ್ಟಬುದ್ಧಿಃ ಪ್ರಸನ್ನಧೀಃ ।
ವ್ರತಂ ಚಕಾರ ವಿಧಿವತ್ ಕೌಂಡಿನ್ಯಸ್ಯೋಪದೇಶತಃ ॥ ೩೩ ॥

---

೨೯. ಆ ಕೌಂಡಿನ್ಯನ ಬಟ್ಟೆಯ ನೀರಿನ ಸ್ಪರ್ಶದಿಂದಲೇ ಅವನ ದುಃಖವೂ ಪಾಪಗಳೂ ಹೋದುವು. ಆಗ ಕೌಂಡಿನ್ಯಋಷಿಯು ಮುಂದೆ ನಿಂತು ಕೈಮುಗಿದು ಕೊಂಡು ಇಂತೆಂದನು.

೩೦. ಧೃಷ್ಟಬುದ್ಧಿಯು ಹೇಳಿದನು–ಎಲೈ ಬ್ರಾಹ್ಮಣಶ್ರೇಷ್ಠನೆ! ನನ್ನಮೇಲೆ ದಯೆಯಿಡು. ನಾನು ಯಾವ ಪುಣ್ಯ ಕೆಲಸನ್ನು ಮಾಡಿದರೆ ಪಾಪವನ್ನು ಕಳೆದುಕೊಂಡು ಮುಕ್ತಿಯನ್ನು ಹೊಂದುವೆನೋ ಅದನ್ನು ಹೇಳು.

೩೧-೩೨. ಕೌಂಡಿನ್ಯನು ಹೇಳಿದನು–ಹಾಗಾದರೆ ಒಂದೇ ಮನಸ್ಸಿನಿಂದ ಕೇಳು. ಅದರಿಂದ ಪಾಗಕ್ಷಯವಾಗುತ್ತದೆ. ವೈಶಾಖಮಾಸದ ಶುಕ್ಲಪಕ್ಷದಲ್ಲಿ ಮೋಹಿನೀ ಎಂಬ ಏಕಾದಶಿಯು ಬರುವುದು. ನನ್ನ ಮಾತಿನಂತೆ ಅದರ ವ್ರತವನ್ನು ಮಾಡು. ಆ ಮೋಹಿನೀ ಏಕಾದಶಿಯದಿನ ಉಪವಾಸಮಾಡಿ ದರೆ ಪಾಪವು ಮೇರುಪರ್ವತದಷ್ಟಿದ್ದರೂ ನಾಶವಾಗುತ್ತದೆ. ಅನೇಕ ಜನ್ಮಗಳದ್ದಾ ದರೂ ನಾಶವಾಗುತ್ತದೆ.

೩೩. ವಸಿಷ್ಠನು ಹೇಳಿದನು– ಧೃಷ್ಟಬುದ್ಧಿಯು ಸಂತೋಷಗೊಂಡು ಕೌಂಡಿನ್ಯನ ಮಾತಿನಂತೆ ನಿಯಮದಿಂದ ಆ ಏಕಾದಶೀವ್ರತವನ್ನು ಮಾಡಿದನು.

ವ್ರತೇ ಕೃತೇ ನೃಪಶ್ರೇಷ್ಠ ಗತತಾಪೋ ಬಭೂವ ಸಃ ।
ದಿವ್ಯದೇಹಸ್ತತೋ ಭೂತ್ವಾ ಗರುಡೋಪರಿಸಂಸ್ಥಿತಃ ॥ ೩೪ ॥

ಜಗಾಮ ವೈಷ್ಣವಂ ಲೋಕಂ ಸರ್ವೋಪದ್ರವವರ್ಜಿತಂ ।
ಇತೀದೃಶಂ ರಾಮಚಂದ್ರ ಉತ್ತಮಂ ಮೋಹಿನೀವ್ರತಂ ।
ನಾತಃ ಪರತರಂ ಕಿಂಚಿತ್ತ್ರೈಲೋಕ್ಯೇ ಸಚರಾಚರೇ ॥ ೩೫ ॥

॥ ಶ್ರೀಕೃಷ್ಣ ಉವಾಚ ॥

ಯಜ್ಞಾದಿತೀರ್ಥದಾನಾನಿ ಕಲಾಂ ನಾರ್ಹಂತಿ ಷೋಡಶೀಂ ।
ಪಠನಾಚ್ಛ್ರವಣಾದ್ರಾಜನ್ ಗೋಸಹಸ್ರಫಲಂ ಲಭೇತ್ ॥ ೩೬ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಪತಿ
ನಾರದ ಸಂವಾದಾನ್ತರ್ಗತ ಕೃಷ್ಣ ಯುಧಿಷ್ಠಿರ ಸಂವಾದೇ
ವೈಶಾಖ ಶುಕ್ಲ ಮೋಹಿನ್ಯೇಕಾದಶೀ ಮಾಹಾತ್ಮ್ಯಂ ನಾಮ
ಏಕಪಂಚಾಶತ್ತಮೋಽಧ್ಯಾಯಸ್ಸಮಾಪ್ತಃ

---

೩೪-೩೫. ಈ ವ್ರತವನ್ನು ಮಾಡಲು ಅವನ ತೊಂದರೆಗಳೆಲ್ಲವೂ ಹೋಗಿ ಸುಖಿಯಾದನು. ಅನಂತರ ದಿವ್ಯದೇಹವನ್ನು ಹೊಂದಿ ಗರುಡನ ಮೇಲೆ ಕುಳಿತು ಕೊಂಡು ತೊಂದರೆಗಳೊಂದೂ ಇಲ್ಲದ ವಿಷ್ಣುಲೋಕವಾದ ವೈಕುಂಠವನ್ನು ಹೊಂದಿದನು. ಎಲೈ ರಾಮಚಂದ್ರನೆ! ಈ ಮೋಹಿನೀವ್ರತವು ಈ ರೀತಿಯಲ್ಲಿ ಉತ್ತಮವಾದುದು. ಇದಕ್ಕಿಂತಲೂ ಉತ್ತಮವಾದ ವ್ರತವು ಮೂರುಲೋಕ ದಲ್ಲಿಯೂ ಮತ್ತೊಂದಿಲ್ಲ.

೩೬. ಕೃಷ್ಣನು ಹೇಳಿದನು–ಯಜ್ಞಾದಿಗಳೂ ಎಲ್ಲಾ ತೀರ್ಥಗಳೂ ಈ ವ್ರತದ ಹದಿನಾರನೇ ಒಂದು ಭಾಗವನ್ನೂ ಕೂಡ ಹೋಲುವುದಿಲ್ಲ. ಇದನ್ನು ಕೇಳಿ ದರೂ ಓದಿದರೂ ಸಾವಿರ ಗೋದಾನದ ಫಲವನ್ನು ಹೊಂದುತ್ತಾನೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಪತಿ
ನಾರದರ ಸಂವಾದಾಂತರ್ಗತವಾದ ಕೃಷ್ಣ ಯುಧಿಷ್ಠಿರರ ಸಂವಾದದಲ್ಲಿ
ವೈಶಾಖ ಶುದ್ಧ ಮೋಹಿನ್ಯೇಕಾದಶೀ ಮಹಿಮೆ ಎಂಬ
ಐವತ್ತೊಂದನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ದ್ವಿಪಂಚಾಶತ್ತಮೋಽಧ್ಯಾಯಃ ||



|| ಯುಧಿಷ್ಠಿರ ಉವಾಚ ||

ಜ್ಯೇಷ್ಠಸ್ಯ ಕೃಷ್ಣಪಕ್ಷೇ ತು ಕಿನ್ನಾಮ್ನ್ಯೇಕಾದಶೀ ಭವೇತ್ ।
ಶ್ರೋತುಮಿಚ್ಛಾಮಿ ಮಾಹಾತ್ಮ್ಯಂ ತದ್ವದಸ್ವ ಜನಾರ್ದನ || ೧ ||

|| ಶ್ರೀ ಕೃಷ್ಣ ಉವಾಚ ||

ಸಾಧು ಪೃಷ್ಟಂ ತ್ವಯಾ ರಾಜನ್ ಲೋಕಾನಾಂ ಹಿತಕಾಮ್ಯಯಾ ।
ಬಹುಪುಣ್ಯಪ್ರದಾಹ್ಯೇಷಾ ಮಹಾಪಾತಕಹಾನಿದಾ || ೨ ||

ಅಪರಾ ನಾಮ ರಾಜೇಂದ್ರ ಅಪರಾ ಪುತ್ರದಾಯಿನೀ ।
ಲೋಕೇ ಪ್ರಸಿದ್ಧತಾಂ ಯಾತಿ ಅಪರಾಂ ಯಸ್ತು ಸೇವತೇ || ೩ ||

---

## ಐವತ್ತೆರಡನೆಯ ಅಧ್ಯಾಯವು



೧. ಯುಧಿಷ್ಠಿರನು ಹೇಳಿದನು–ಎಲೈ ಜನಾರ್ದನನೇ! ಜ್ಯೇಷ್ಠಕೃಷ್ಣ ಏಕಾದಶಿಗೆ ಹೆಸರೇನು? ಅದರ ಮಹಿಮೆಯನ್ನು ಕೇಳಲಿಚ್ಛಿಸುತ್ತೇನೆ. ಹೇಳು.

೨. ಶ್ರೀ ಕೃಷ್ಣನು ಹೇಳಿದನು–ಎಲೈ ದೊರೆಯೇ! ನೀನು ಕೇಳಿದುದು ಚೆನ್ನಾಗಿದೆ. ಇದು ಲೋಕಕ್ಕೆ ಬೇಕಾದುದು. ಇದು ಬಹುವಾದ ಪುಣ್ಯವನ್ನು ಕೊಡುತ್ತದಲ್ಲದೆ ಮಹಾಪಾಪಗಳನ್ನೂ ನಾಶಮಾಡುತ್ತದೆ.

೩. ಆ ಜ್ಯೇಷ್ಠಕೃಷ್ಣ ಏಕಾದಶಿಗೆ ಅಪರಾ ಎಂದು ಹೆಸರು. ಈ ಅಪರೆಯು ಪುತ್ರರನ್ನು ಕೊಡುತ್ತದೆ. ಈ ಅಪರಾ ಏಕಾದಶೀವ್ರತವನ್ನು ಮಾಡಿದವನು ಲೋಕದಲ್ಲಿ ಪ್ರಸಿದ್ಧನಾಗುತ್ತಾನೆ.

ಬ್ರಹ್ಮಹತ್ಯಾಭಿಭೂತೋಽಪಿ ಗೋತ್ರಹಾ ಭ್ರೂಣಹಾ ತಥಾ ।
ಪರಾಪವಾದವಾದೀ ಚ ಪರಸ್ತ್ರೀರತಿಕೋಽಪಿ ಚ ॥ ೪ ॥

ಅಪರಾಸೇವನಾದ್ರಾಜನ್ ವಿಪಾಪ್ಮಾ ಭವತಿ ಧ್ರುವಂ ।
ಕೂಟಸಾಕ್ಷ್ಯಂ ಕೂಲಮಾನಂ ಕೂಟಾತ್ಕೂಟಂ ಕರೋತಿ ಯಃ ॥ ೫ ॥

ಕೂಟವೇದಂ ಪಠೇದ್ಯಸ್ತು ಕೂಟಶಾಸ್ತ್ರಂ ತಥೈವ ಚ ।
ಜ್ಯೋತಿಷಾಂ ಗಣಕಃ ಕೂಟಃ ಕೂಟಾಯುರ್ವೇದಕೋ ಭಿಷಕ್ ॥ ೬ ॥

ಕೂಟಸಾಕ್ಷಿಸಮಾಯುಕ್ತೋ ವಿಜ್ಞೇಯಾ ನರಕೌಕಸಃ ।
ಅಪರಾಸೇವನಾದ್ರಾಜನ್ ಪಾಪೈರ್ಮುಕ್ತಾ ಭವಂತಿ ತೇ ॥ ೭ ॥

ಕ್ಷತ್ರಿಯಃ ಕ್ಷಾತ್ರಧರ್ಮಂ ಯಸ್ತ್ಯಕ್ತ್ವಾ ಯುದ್ಧಾತ್ಪಲಾಯತೇ ।
ಸ ಯಾತಿ ನರಕಂ ಘೋರಂ ಸ್ವಾಮಿಧರ್ಮಬಹಿಷ್ಕೃತಃ ॥ ೮ ॥

---

೪-೭. ಬ್ರಹ್ಮಹತ್ಯೆ ಗೋಹತ್ಯೆ ಭ್ರೂಣಹತ್ಯೆ ಪರಾಪವಾದದ ಪಾಪ ಪರಸ್ತ್ರೀ ರತಿಯ ಪಾಪ ಇವೆಲ್ಲವೂ ಈ ಅಪರಾ ಏಕಾದಶಿಯ ಸೇವನೆಯಿಂದ ನಾಶವಾಗಿ ಪಾಪವನ್ನು ಕಳೆದುಕೊಳ್ಳುತ್ತಾನೆ. ನಿಶ್ಚಯವು. ಸುಳ್ಳುಸಾಕ್ಷಿ ಸುಳ್ಳು ಅಳತೆ ಅನ್ಯಾಯದಿಂದ ಮತ್ತೊಂದು ಅನ್ಯಾಯ ಸೃಷ್ಟಿಸುವುದು ಇವೆಲ್ಲವೂ ಪಾಪಗಳು. ಕೂಟವೇದ (ಅಥರ್ವಣವೇದದಲ್ಲಿ ಆಭಿಚಾರಿಕಭಾಗ) ವನ್ನು ಒದುವವನು ಕೂಟ ಶಾಸ್ತ್ರ (ಚಾಣಿಕ್ಯನೀತಿಯಂಥವು) ವನ್ನು ಓದುವವನು ಜ್ಯೋತಿಷ್ಕನು ರಸಮರ್ದನ ಗಳನ್ನು ಓದುವ ವೈದ್ಯನು ಸುಳ್ಳುಸಾಕ್ಷಿ ಹೇಳುವವನು ಇವರೆಲ್ಲರೂ ನರಕಭಾಗಿ ಗಳಾಗುತ್ತಾರೆ. ಈ ಮೇಲೆ ಹೇಳಿದ ಪಾಪಿಗಳೂ ಕೂಡ ಈ ಅಪರಾ ಏಕಾದಶೀ ವ್ರತದಿಂದ ಮುಕ್ತರಾಗುತ್ತಾರೆ.

೮. ಕ್ಷತ್ರಿಯನಾದವನು ಕ್ಷತ್ರಿಯ ಧರ್ಮವನ್ನು ಗಮನಿಸದೆ ಯುದ್ಧದಿಂದ ಓಡಿಹೋದರೆ ಅವನು ಘೋರವಾದ ನರಕವನ್ನು ಹೊಂದುತ್ತಾನೆ. ಭಟನಾದವನು ಸ್ವಾಮಿಗೆ ಮಾಡಬೇಕಾದ ಕರ್ತವ್ಯವನ್ನು ಬಿಟ್ಟು ಹಿಂತಿರುಗಿದರೆ ಅವನೂ ನರಕ ಭಾಗಿಯಾಗುತ್ತಾನೆ.

ಅಪರಾಸೇವನಾತ್ಸೋಽಪಿ ಪಾಪಂ ತ್ಯಕ್ತ್ವಾ ದಿವಂ ವ್ರಜೇತ್ ।
ವಿದ್ಯಾವಾನ್ಯಃ ಸ್ವಯಂ ಶಿಷ್ಯೋ ಗುರುನಿಂದಾಂ ಕರೋತಿ ಚ ॥ ೯ ॥

ಸ ಮಹಾಪಾತಕೈರ್ಯುಕ್ತೋ ನಿರಯಂ ಯಾತಿ ದಾರುಣಂ ।
ಅಪರಾಸೇವನಾತ್ಸೋಽಪಿ ಸದ್ಗತಿಂ ಪ್ರಾಪ್ನುಯಾನ್ನರಃ ॥ ೧೦ ॥

ಮಹಿಮಾನಮಪರಾಯಾಃ ಶೃಣು ರಾಜನ್ವದಾಮ್ಯಹಂ ।
ಮಕರಸ್ಥೇ ರವೌ ಮಾಘೇ ಪ್ರಯಾಗೇ ಯತ್ಫಲಂ ನೃಣಾಂ ॥ ೧೧ ॥

ಕಾಶ್ಯಾಂ ಯತ್ಪ್ರಾಪ್ಯತೇ ಪುಣ್ಯಂ ಶಿವರಾತ್ರೇ ರುಪೋಷಣಾತ್ ।
ಗಯಾಪಿಂಡಪ್ರದಾನೇನ ಪಿತೃಣಾಂ ತೃಪ್ತಿದೋ ಯಥಾ ॥ ೧೨ ॥

ಸಿಂಹಸ್ಥಿತೇ ದೇವಗುರೌ ಗೌತಮ್ಯಾಂ ಸ್ನಾತಕೋ ನರಃ ।
ಯತ್ಫಲಂ ಸಮವಾಪ್ನೋತಿ ಕೇದಾರಾದರ್ಶನಾನ್ನರಃ ॥ ೧೩ ॥

---

೯-೧೦. ಅಂತಹ ಕ್ಷತ್ರಿಯನೂ ಭಟನೂ ಈ ಅಪರಾವ್ರತದ ಆಚರಣೆಯಿಂದ ಸ್ವರ್ಗವನ್ನು ಸೇರುತ್ತಾರೆ. ವಿದ್ಯಾವಂತನಾದವನು ತಾನು ಶಿಷ್ಯನಾಗಿದ್ದು ಗುರುವನ್ನು ನಿಂದಿಸಿದರೆ ಅವನು ಮಹಾಪಾಪಿಯಾಗಿ ನರಕಭಾಗಿಯಾಗುವನು. ಅವನೂಕೂಡ ಈ ಅಪರಾಸೇವನೆಯಿಂದ ಸದ್ಗತಿಯನ್ನು ಹೊಂದುತ್ತಾನೆ.

೧೧-೧೨. ಅಪರಾ ಏಕಾದಶಿಯ ಮಹಿಮೆಯನ್ನು ಹೇಳುತ್ತೇನೆ ಕೇಳು. ಮಕರಮಾಸ ಮಾಘಮಾಸಗಳೆರಡೂ ಸೇರಿದಾಗ ಪ್ರಯಾಗದಲ್ಲಿ ಸ್ನಾನಮಾಡಿದರೆ ಯಾವ ಫಲವು ಬರುತ್ತದೆಯೋ ಆ ಫಲವು ಅಪರಾವ್ರತದಾಚರಣೆಯಿಂದ ಬರುತ್ತದೆ. ಕಾಶಿಯಲ್ಲಿ ಶಿವರಾತ್ರಿಯ ದಿವಸ ಉಪವಾಸಮಾಡಿದರೆ ಯಾವಪುಣ್ಯವು ಬರುತ್ತವೆ. ಯೊ ಆ ಪುಣ್ಯವು ಅಪರಾಸೇವನೆಯಿಂದ ಬರುತ್ತದೆ. ಗಯೆಯಲ್ಲಿ ಪಿಂಡದಾನ ಮಾಡಿದರೆ ಪಿತೃಗಳಿಗೆ ತೃಪ್ತಿಯುಂಟಾಗಿ ಯಾವ ಪುಣ್ಯವು ಬರುತ್ತದೆಯೋ ಆ ಪುಣ್ಯವು ಅಪರಾಸೇವನೆಯಿಂದ ಬರುತ್ತದೆ. ಗಯೆಯಲ್ಲಿ ಪಿಂಡದಾನ ಮಾಡಿದರೆ ಪಿತೃಗಳಿಗೆ ತೃಪ್ತಿಯುಂಟಾಗಿ ಯಾವಪುಣ್ಯವು ಬರುತ್ತದೆಯೋ ಆ ಪುಣ್ಯವು ಅಪರಾ ಸೇವನೆಯಿಂದ ಬರುತ್ತದೆ.

೧೩-೧೫. ಬೃಹಸ್ಪತಿಯು ಸಿಂಹರಾಶಿಯಲ್ಲಿರುವಾಗ ಗೌತಮೀನದಿಯಲ್ಲಿ ಸ್ನಾನ ಮಾಡಿದರೆ ಯಾವ ಫಲ ಬರುತ್ತದೆಯೋ ಅದೂ ಕೇದಾರದಲ್ಲಿ ತೀರ್ಥಸ್ನಾನ

ಬದರ್ಯಾಶ್ರಮಯಾತ್ರಾಯಾಂ ತತ್ತೀರ್ಥಾ ಸೇವನಾದಪಿ ।
ಯತ್ಫಲಂ ಸಮವಾಪ್ನೋತಿ ಕುರುಕ್ಷೇತ್ರೇ ರವಿಗ್ರಹೇ ॥ ೧೪ ॥

ಗಜಾಶ್ವಹೇಮದಾನೇನ ಯಜ್ಞಂ ಕೃತ್ವಾ ಸದಕ್ಷಿಣಂ ।
ತಾದೃಶಂ ಫಲಮಾಪ್ನೋತಿ ಅಪರಾವ್ರತಸೇವನಾತ್ ॥ ೧೫ ॥

ಪಾಪದ್ರುಮಕುಠಾರೀಯಂ ಪಾಪೇಂಧನದವಾನಲಃ ।
ಪಾಪಾಂಧಕಾರತರಣಿಃ ಪಾಪಸಾರಂಗಕೇಸರೀ ॥ ೧೬ ॥

ಬುದ್ಬುದಾ ಇವ ತೋಯೇಷು ಪೂತಿಕಾ ಇವ ಜಂತುಷು ।
ಜಾಯಂತೇ ಮರಣಾಯೈವ ಏಕಾದಶ್ಯಾವ್ರತಂ ವಿನಾ ॥ ೧೭ ॥

---

ಮಾಡಿ ಸ್ವಾಮಿಯ (ಕೇದಾರೇಶ್ವರನ) ದರ್ಶನಮಾಡಿದರೆ ಯಾವಫಲ ಬರುವುದೋ ಅದೂ ಬದರ್ಯಾಶ್ರಮದ ಯಾತ್ರೆಮಾಡಿ ಅಲ್ಲಿನ ತೀರ್ಥವನ್ನು ಸೇವಿಸಿದರೆ ಯಾವಫಲವು ಬರುತ್ತದೆಯೋ ಅದೂ ಸೂರ್ಯಗ್ರಹಣದಲ್ಲಿ ಕುರುಕ್ಷೇತ್ರದಲ್ಲಿ ಸ್ನಾನ ಮಾಡಿದರೆ ಯಾವಪುಣ್ಯವು ಬರುವುದೋ ಅದೂ ಆನೆ ಕುದುರೆ ಸ್ವರ್ಣದಾನಗಳನ್ನು ಮಾಡಿ ಸಂಪೂರ್ಣವಾದ ದಕ್ಷಿಣೆಯನ್ನು ಕೊಟ್ಟು ಯಾಗಮಾಡಿದರೆ ಯಾವ ಪುಣ್ಯವು ಬರುತ್ತದೆಯೋ ಆ ಪುಣ್ಯವೂ ಈ ಅಪರಾ ಏಕಾದಶಿಯ ವ್ರತಾಚರಣೆ ಇಂದ ಬರುತ್ತದೆ.

೧೬. ಈ ಅಪರಾ ಏಕಾದಶೀವ್ರತವು ಪಾಪವೆಂಬ ಮರಕ್ಕೆ ಕೊಡಲಿಯು ಪಾಪವೆಂಬ ಸೌದೆಗೆ ಕಾಳ್ಗಿಚ್ಚು ಪಾಪವೆಂಬ ಕತ್ತಲೆಗೆ ಸೂರ್ಯನು. ಪಾಪವೆಂಬ ಜಿಂಕೆಗೆ ಸಿಂಹವು.

೧೭. ಏಕಾದಶಿಯ ವ್ರತವನ್ನು ಮಾಡದವರು ನೀರಿನಮೇಲಿನ ಗುಳ್ಳೆಗಳಂತೆಯೂ ಪ್ರಾಣಿಗಳಲ್ಲಿ ಪೂತಿಕೆ (ಕೊಡತಿಯಹುಳು) ಗಳಂತೆಯೂ ಸಾಯುವುದಕ್ಕೆ ಹುಟ್ಟಿದ್ದಾರೆ.

**ಅಪರಾಂ ಸಮುಪೋಷ್ಯೈವ ಪೂಜಯಿತ್ವಾ ತ್ರಿವಿಕ್ರಮಂ ।**
**ಸರ್ವಪಾಪವಿನಿರ್ಮುಕ್ತೋ ವಿಷ್ಣುಲೋಕೇ ಮಹೀಯತೇ ॥ ೧೮ ॥**

**ಪಠನಾಚ್ಛ್ರವಣಾದ್ರಾಜನ್ ಗೋಸಹಸ್ರಫಲಂ ಲಭೇತ್ ॥ ೧೯ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಪತಿ ನಾರದ ಸಂವಾದಾಂತರ್ಗತ ಶ್ರೀ ಕೃಷ್ಣ ಯುಧಿಷ್ಠಿರ ಸಂವಾದೇ ಜ್ಯೇಷ್ಠ ಕೃಷ್ಣ ಅಪರೈಕಾದಶೀ ವರ್ಣನಂ ನಾಮ ದ್ವಿಪಂಚಾಶತ್ತಮೋಽಧ್ಯಾಯಸ್ಸಮಾಪ್ತಃ**

---

೧೮-೧೯. ಅಪರಾ ಏಕಾದಶಿಯ ದಿನ ಉಪವಾಸ ಮಾಡಿ ತ್ರಿವಿಕ್ರಮ ದೇವರನ್ನು ಪೂಜಿಸಿದರೆ ಪಾಪಗಳೆಲ್ಲವನ್ನೂ ಕಳೆದುಕೊಂಡು ವೈಕುಂಠವನ್ನು ಹೊಂದುತ್ತಾನೆ. ಈ ವ್ರತವನ್ನು ಓದುವವನೂ ಕೇಳುವವನೂ ಸಾವಿರ ಗೋದಾನಗಳ ಫಲವನ್ನು ಹೊಂದುತ್ತಾರೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಪತಿ ನಾರದರ ಸಂವಾದದೊಳಗಿನ ಕೃಷ್ಣ ಯುಧಿಷ್ಠಿರರ ಸಂವಾದದಲ್ಲಿ ಜ್ಯೇಷ್ಠ ಕೃಷ್ಣ ಅಪರೈಕಾದಶಿಯ ವರ್ಣನೆ ಎಂಬ ಐವತ್ತೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ತ್ರಿಪಂಚಾಶತ್ತಮೋಽಧ್ಯಾಯಃ ॥



॥ ಯುಧಿಷ್ಠಿರ ಉವಾಚ ॥

ಅಪರಾಯಾಶ್ಚ ಮಾಹಾತ್ಮ್ಯಂ ಶ್ರುತಂ ಸರ್ವಂ ಜನಾರ್ದನ ।
ಜ್ಯೇಷ್ಠಸ್ಯ ಶುಕ್ಲಪಕ್ಷೇ ತು ಸ್ಯಾದ್ಯಾ ತಾಂ ವದ ಮಾನದ ॥ ೧ ॥

॥ ಶ್ರೀಕೃಷ್ಣ ಉವಾಚ ॥

ಏತಾಂ ವಕ್ಷ್ಯತಿ ಧರ್ಮಾತ್ಮಾ ವ್ಯಾಸಸ್ಸತ್ಯವತೀಸುತಃ ।
ಸರ್ವಶಾಸ್ತ್ರಾರ್ಥತತ್ವಜ್ಞೋ ವೇದವೇದಾಂಗಪಾರಗಃ ॥ ೨ ॥

---

## ಐವತ್ತಮೂರನೆಯ ಅಧ್ಯಾಯವು



೧. ಯುಧಿಷ್ಠಿರನು ಹೇಳಿದನು–ಎಲೈ ಜನಾರ್ದನನೆ! ಅಪರ ಏಕಾದಶಿಯ ಮಹಿಮೆಯನ್ನು ಕೇಳಿದೆನು. ಆದೇ ಜ್ಯೇಷ್ಠ ಶುದ್ಧದಲ್ಲಿ ಬರುವ ಏಕಾದಶಿಯ ಹೆಸರೇನು? ಅದನ್ನು ಹೇಳು.

೨. ಶ್ರೀ ಕೃಷ್ಣನು ಹೇಳಿದನು–ಎಲೈ ಯುಧಿಷ್ಠಿರನೆ! ಸರ್ವಶಾಸ್ತ್ರಾರ್ಥವನ್ನೂ ಬಲ್ಲ ವೇದವೇದಾಂಗಗಳಲ್ಲಿ ಪಾರಗನಾದ ಸತ್ಯವತಿಯ ಮಗನಾದ ವ್ಯಾಸನು ಈ ಏಕಾದಶಿಯ ವಿಷಯವನ್ನು ಹೇಳಿದ್ದಾನೆ. ಅದನ್ನೇ ಹೇಳುತ್ತೇನೆ.

|| ಯುಧಿಷ್ಠಿರ ಉವಾಚ ||

ಶ್ರುತಾ ಮೇ ಮಾನವಾ ಧರ್ಮಾ ವಾಸಿಷ್ಠಾಶ್ಚ ಶ್ರುತಾ ಮಯಾ |
ದ್ವೈಪಾಯನ ಯಥಾವತ್ತ್ವಂ ವೈಷ್ಣವಾನ್ವಕ್ತುಮರ್ಹಸಿ || ೩ ||

|| ಕೃಷ್ಣ ಉವಾಚ ||

ಶ್ರುತಾ ಯೇ ಮಾನವಾ ಧರ್ಮಾ ವೈದಿಕಾಶ್ಚ ಶ್ರುತಾಸ್ತ್ವಯಾ |
ಕಲೌ ಯುಗೇ ನ ಶಕ್ಯಂತೇ ತೇ ವೈ ಕರ್ತುಂ ನರಾಧಿಪ || ೪ ||

ಸುಖೋಪಾಯಂ ಅಲ್ಪಧನಮಲ್ಪಕ್ಲೇಶಂ ಮಹಾಫಲಂ |
ಪುರಾಣಾನಾಂ ಚ ಸರ್ವೇಷಾಂ ಸಾರಭೂತಂ ಮಹಾಮತೇ || ೫ ||

ಏಕಾದಶ್ಯಾಂ ನ ಭುಂಜೀತ ಪಕ್ಷಯೋರುಭಯೋರಪಿ |
ದ್ವಾದಶ್ಯಾಂ ತು ಶುಚಿರ್ಭೂತ್ವಾ ಪುಷ್ಪೈಸ್ಸಂಪೂಜ್ಯ ಕೇಶವಂ || ೬ ||

ಭುಂಜೀತ ಕೃತ್ಯಕೃತ್ಯಸ್ತು ಪಶ್ಚಾದ್ವಿಪ್ರಪುರಸ್ಸರಂ |
ಸೂತಕೇಽಪಿ ನ ಭೋಕ್ತವ್ಯಂ ನಾಽಽಶೌಚೇ ಚ ಜನಾಧಿಪ || ೭ ||

---

೩. ಯುಧಿಷ್ಠಿರನು ಹೇಳಿದನು–ಎಲೈ ಕೃಷ್ಣನೆ! ಮನುವು ಹೇಳಿರುವ ಧರ್ಮಗಳನ್ನು ಕೇಳಿದೆನು. ವಸಿಷ್ಠನು ಹೇಳಿದ ಧರ್ಮಗಳನ್ನೂ ಕೇಳಿದೆನು. ವ್ಯಾಸನು ಹೇಳಿರುವ ವೈಷ್ಣವ ಧರ್ಮಗಳನ್ನು ತಿಳಿಸು.

೪. ಕೃಷ್ಣನು ಹೇಳಿದನು- ಮನುವಿನ ಧರ್ಮಗಳನ್ನೂ, ವೈದಿಕ ಧರ್ಮಗಳನ್ನೂ ಕಲಿಯುಗದಲ್ಲಿ ಮಾಡಲಾಗುವುದಿಲ್ಲ.

೫. ಎಲೈ ಕೃಷ್ಣನೆ! ಪುರಾಣಗಳ ಸಾರವೇನೆಂದರೆ, ಸುಲಭವಾದ ಉಪಾಯವನ್ನು ಬೋಧಿಸುತ್ತದೆ. ಸ್ವಲ್ಪವೇ ಹಣದಿಂದ ಸಾಧ್ಯವಾಗುತ್ತದೆ. ಫಲವು ಹೆಚ್ಚು ಬರುತ್ತದೆ.

೬–೭. ಎರಡು ಪಕ್ಷಗಳ ಏಕಾದಶಿಯ ದಿನವೂ ಊಟ ಮಾಡಬಾರದು. ದ್ವಾದಶಿಯ ದಿವಸ ಸ್ನಾನಮಾಡಿ ಶುಚಿಯಾಗಿ ಕೇಶವನನ್ನು ಪೂಜಿಸಿ ಬ್ರಾಹ್ಮಣರಿಗೆ ಭೋಜನಮಾಡಿಸಿ ಅನಂತರ ತಾನು ಊಟ ಮಾಡಬೇಕು. ಸೂತಕದಲ್ಲಿಯಾಗಲಿ ಆಶೌಚದಲ್ಲಿಯಾಗಲಿ ಏಕಾದಶಿಯ ದಿವಸ ಊಟಮಾಡಬಾರದು.

ಯಾವಜ್ಜೀವಂ ವ್ರತಮಿದಂ ಕರ್ತವ್ಯಂ ಪುರುಷರ್ಷಭ ।
ಸ್ವರ್ಗತಿಂ ಪ್ರಾಪ್ತುಮಿಚ್ಛದ್ಭಿರತ್ರ ಮೇ ನಾಸ್ತಿ ಸಂಶಯಃ ॥ ೮ ॥

ಅತಿಪಾಪದುರಾಚಾರಾಃ ಪಾಪಿಷ್ಠಾ ಧರ್ಮವರ್ಜಿತಾಃ ।
ಏಕಾದಶ್ಯಾಂ ನ ಭುಂಜಂತಿ ನ ತೇ ಯಾನ್ತಿ ಯಮಾಂತಿಕಂ ॥ ೯ ॥

॥ ಮಹಾದೇವ ಉವಾಚ ॥

ಇತಿ ತದ್ವಚನಂ ಶ್ರುತ್ವಾ ಕಂಪಿತೋಽಶ್ವತ್ಥಪತ್ರವತ್ ।
ಭೀಮಸೇನೋ ಮಹಾಬಾಹುಃ ತದೋವಾಚ ಗುರುಂ ಪ್ರತಿ ॥ ೧೦ ॥

॥ ಭೀಮಸೇನ ಉವಾಚ ॥

ಪಿತಾಮಹ ಮಹಾಬುದ್ಧೇ ಶೃಣು ಮೇ ಪರಮಂ ವಚಃ ।
ಯುಧಿಷ್ಠಿರಶ್ಚ ಕುಂತೀ ಚ ತಥಾ ದ್ರುಪದನಂದಿನೀ ॥ ೧೧ ॥

ಅರ್ಜುನೋ ನಕುಲಶ್ಚೈವ ಸಹದೇವಸ್ತಥೈವ ಚ ।
ಏಕಾದಶ್ಯಾಂ ನ ಭುಂಜಂತಿ ಕದಾಚಿದಪಿ ಸುವ್ರತ ॥ ೧೨ ॥

---

೮. ಎಲೈ ಧರ್ಮಜನೆ! ಈ ವ್ರತವನ್ನು ಪ್ರಾಣವಿರುವವರೆಗೂ ಮಾಡಬೇಕು. ಹಾಗಾದರೆ ಸ್ವರ್ಗವು ಸಿಕ್ಕುತ್ತದೆ. ಇದರಲ್ಲಿ ಸಂಶಯವಿಲ್ಲ.

೯. ಪಾಪಿಷ್ಠರೂ ಧರ್ಮಮಾಡದವರೂ ಕೂಡ ಏಕಾದಶಿಯ ದಿನ ಊಟ ಮಾಡದಿದ್ದರೆ ಅವರು ಯಮಲೋಕವನ್ನು ಹೊಂದುವುದಿಲ್ಲ.

೧೦. ಮಹಾದೇವನು ಹೇಳಿದನು-ಆಗ ಮಹಾಬಾಹುವಾದ ಭೀಮಸೇನನು ಇದನ್ನು ಕೇಳಿ ಅರಳಿಯ ಎಲೆಯಂತೆ ನಡುಗುತ್ತಾ ಇಂತೆಂದನು.

೧೧-೧೨. ಭೀಮಸೇನನು ಹೇಳಿದನು- ಎಲೈ ಪಿತಾಮಹನಾದ ವ್ಯಾಸನೆ! ಧರ್ಮಜ, ಕುಂತಿ, ದ್ರೌಪದಿ, ಅರ್ಜುನ, ನಕುಲ, ಸಹದೇವ ಇವರು ಏಕಾದಶಿಯ ದಿವಸ ಊಟಮಾಡುವುದಿಲ್ಲ.

ತೇ ಮಾಂ ಬ್ರುವಂತಿ ವೈ ನಿತ್ಯಂ ಮಾ ಭುಂಕ್ಷ್ವ ತ್ವಂ ವೃಕೋದರ ।
ಅಹಂ ತಾನಬ್ರವಂ ತಾತ ಬುಭುಕ್ಷಾ ದುಸ್ಸಹಾ ಮಮ ॥
ದಾನಂ ದಾಸ್ಯಾಮಿ ವಿಧಿವತ್ ಪೂಜಯಿತ್ವಾ ಚ ಕೇಶವಂ　　|| ೧೩ ||

|| ಮಹಾದೇವ ಉವಾಚ ||

ಭೀಮಸೇನವಚಶ್ಶ್ರುತ್ವಾ ವ್ಯಾಸೋ ವಚನಮಬ್ರವೀತ್　　|| ೧೪ ||

॥ ವ್ಯಾಸ ಉವಾಚ ॥

ಯದಿ ಸ್ವರ್ಗೋ ಹ್ಯಭೀಷ್ಟಸ್ತೇ ನರಕೋ ದುಷ್ಟ ಏವ ಚ ।
ಏಕಾದಶ್ಯಾಂ ನ ಭೋಕ್ತವ್ಯಂ ಪಕ್ಷಯೋರುಭಯೋರಪಿ　　|| ೧೫ ||

॥ ಭೀಮಸೇನ ಉವಾಚ ॥

ಪಿತಾಮಹ ಮಹಾಬುದ್ಧೇ ಕಥಯಾಮಿ ತವಾಗ್ರತಃ ।
ಏಕಭುಕ್ತೇ ನ ಶಕ್ನೋಮಿ ಉಪವಾಸೇ ಕುತಃ ಪ್ರಭೋ　　|| ೧೬ ||

---

೧೩. ಅವರೆಲ್ಲರೂ ನನ್ನನ್ನು ಕುರಿತು ಎಲೈ ವೃಕೋದರನೆ! ನೀನು ಏಕಾದಶಿಯ ದಿವಸ ಊಟಮಾಡಬೇಡವೆನ್ನುತ್ತಾರೆ. ನಾನು ಮಾತ್ರ, ನನಗೆ ಹಸಿವು ತಡೆಯಲಾಗುವುದಿಲ್ಲ. ಕೇಶವನ ಪೂಜೆಯನ್ನು ಮಾಡಿ ದಾನಗಳನ್ನು ಕೊಡುತ್ತೇನೆ. ಎಂದೆನ್ನುತ್ತಿರುವೆನು.

೧೪. ಮಹಾದೇವನು ಹೇಳಿದನು–ಭೀಮಸೇನನ ಈ ಮಾತನ್ನು ಕೇಳಿ ವ್ಯಾಸನು ಹೀಗೆಂದನು.

೧೫. ವ್ಯಾಸನು ಹೇಳಿದನು–ಎಲೈ ಭೀಮನೆ! ನಿನಗೆ ಸ್ವರ್ಗವು ಬೇಕಾಗಿ ನರಕವು ಬೇಡವಾದರೆ ಶುಕ್ಲ ಕೃಷ್ಣ ಪಕ್ಷಗಳೆರಡರ ಏಕಾದಶಿಗಳಲ್ಲಿಯೂ ಊಟ ಮಾಡಬೇಡ.

೧೬. ಭೀಮಸೇನನು ಹೇಳಿದನು– ಎಲೈ ಪಿತಾಮಹನೆ! ನಿನ್ನೆದುರಿಗೆ ನಿಶ್ಚಯವಾಗಿಯೂ ಹೇಳುತ್ತೇನೆ. ನನಗೆ ಒಂದು ಹೊತ್ತು ಊಟಮಾಡಿಕೊಂಡಿರುವುದಕ್ಕೆ ಆಗುವುದಿಲ್ಲ ಉಪವಾಸ ಮಾಡುವುದೆಲ್ಲಿ ಆದೀತು ?

ವೃಕೋ ನಾಮ ಚ ಯೋ ವಹ್ನಿಃ ಸ ಸದಾ ಜಠರೇ ಮಮ ।
ಅತಿವೇಳಂ ಯದಾಶ್ನಾಮಿ ತದಾ ಸಮುಪಶಾಮ್ಯತಿ ॥ ೧೭ ॥

ಏಕಂ ಶಕ್ನೋಮ್ಯಹಂ ಕರ್ತುಮುಪವಾಸಂ ಮಹಾಮುನೇ ।
ಯೇನೈವ ಪ್ರಾಪ್ಯತೇ ಸ್ವರ್ಗಃ ತತ್ಕರ್ತಾಸ್ಮಿ ಯಥಾತಥಂ ॥
ತದೇಕಂ ವದ ನಿಶ್ಚಿತ್ಯ ಯೇನ ಶ್ರೇಯೋಽಹಮಾಪ್ನುಯಾಂ ॥ ೧೮ ॥

॥ ವ್ಯಾಸ ಉವಾಚ ॥

ವೃಷಸ್ಥೇ ಮಿಥುನಸ್ಥೇ ವಾ ಯದಾ ಚೈಕಾದಶೀ ಭವೇತ್ ।
ಜ್ಯೇಷ್ಠಮಾಸೇ ಪ್ರಯತ್ನೇನ ಸೋಪೋಷ್ಯೋದಕವರ್ಜಿತಂ ॥ ೧೯ ॥

ಗಂಡೂಷಾಚಮನಂ ವಾರಿ ವರ್ಜಯಿತ್ವೋದಕಂ ಬುಧಃ ।
ಉಪಭುಂಜೀತ ನೈವೇಹ ವ್ರತಭಂಗೋಽನ್ಯಥಾ ಭವೇತ್ ॥ ೨೦ ॥

ಉದಯಾದುದಯಂ ಯಾವದ್ವರ್ಜಯಿತ್ವೋದಕಂ ನರಃ ।
ಅಯತ್ನಾತ್ಸಮವಾಪ್ನೋತಿ ದ್ವಾದಶದ್ವಾದಶೀಫಲಂ ॥ ೨೧ ॥

---

೧೭. ನನ್ನ ಹೊಟ್ಟೆಯಲ್ಲಿ ವೃಕವೆಂಬ ಬೆಂಕಿಯು ಸದಾ ಉರಿಯುತ್ತಾ ಇರುವುದು. ನಾನು ಬಹುವಾಗಿ ತಿಂದರೆ ಅದು ಆಗ ಶಾಂತವಾಗುತ್ತದೆ.

೧೮. ಸ್ವರ್ಗವು ಖಂಡಿತವಾಗಿ ಬರುವ ಯಾವುದಾದರೂ ಒಂದು ಏಕಾದಶಿಯನ್ನು ಹೇಳು ಅದೊಂದರಲ್ಲಿ ಉಪವಾಸ ಮಾಡುತ್ತೇನೆ. ಅದನ್ನು ನಿಶ್ಚಯಿಸಿ ಹೇಳು.

೧೯. ವ್ಯಾಸನು ಹೇಳಿದನು–ವೃಷಭ ಮಾಸವಾಗಲೀ ಮಿಥುನ ಮಾಸವಾಗಲೀ ಇದ್ದು ಜ್ಯೈಷ್ಠಮಾಸದಲ್ಲಿ ಏಕಾದಶಿ ಒಂದಲ್ಲಿ ಆ ಏಕಾದಶಿಯಲ್ಲಿ ನೀರನ್ನೂ ಸಹ ಕುಡಿಯದಂತೆ ಉಪವಾಸಮಾಡು.

೨೦. ಬಾಯಿ ಮುಕ್ಕುಳಿಸುವುದು ಆಚಮನ ಮಾಡುವುದು ಇವನ್ನು ಬಿಟ್ಟು ನೀರನ್ನೂ ಸ್ವಲ್ಪವೂ ಕುಡಿಯಕೂಡದು. ಹಾಗೆ ಮಾಡಿದರೆ ವ್ರತಭಂಗವಾಗುತ್ತದೆ.

೨೧. ಸೂರ್ಯೋದಯದಿಂದ ಮತ್ತೊಂದು ಸೂರ್ಯೋದಯದವರೆಗೂ ನೀರನ್ನೂ ಕೂಡ ಕುಡಿಯದಿದ್ದರೆ ಇದರಿಂದ ಸುಲಭವಾಗಿಯೇ ಹನ್ನೆರಡು ದ್ವಾದಶಿಗಳ ಫಲವನ್ನೂ ಹೊಂದುತ್ತಾನೆ

ತತಃ ಪ್ರಭಾತೇ ವಿಮಲೇ ದ್ವಾದಶ್ಯಾಂ ಸ್ನಾನಮಾಚರೇತ್ ।
ಜಲಂ ಸುವರ್ಣಂ ದತ್ವಾ ಚ ದ್ವಿಜಾತಿಭ್ಯೋ ಯಥಾವಿಧಿ ॥ ೨೨ ॥

ಭುಂಜೀತ ಕೃತಕೃತ್ಯಸ್ತು ಬ್ರಾಹ್ಮಣೈಸ್ಸಹಿತೋ ವಶೀ ।
ಏವಂ ಕೃತೇ ತು ಯತ್ಪುಣ್ಯಂ ಭೀಮಸೇನ ಶೃಣುಷ್ವ ತತ್ ॥ ೨೩ ॥

ಸಂವತ್ಸರೇ ತು ಯಾಶ್ಚೈವ ಏಕಾದಶ್ಯೋ ಭವಂತಿ ಹಿ ।
ತಾಸಾಂ ಫಲಮವಾಪ್ನೋತಿ ಹ್ಯತ್ರ ಮೇ ನಾಸ್ತಿ ಸಂಶಯಃ ॥ ೨೪ ॥

ಇತಿ ಮಾಂ ಕೇಶವಃ ಪ್ರಾಹ ಶಂಖಚಕ್ರಗದಾಧರಃ ।
ಪುಮಾನ್ಸರ್ವಂ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜೇತ್ ॥ ೨೫ ॥

ಏಕಾದಶ್ಯಾಂ ನಿರಾಹಾರಸ್ತತಃ ಪಾಪಾತ್ಪ್ರಮುಚ್ಯತೇ ।
ದ್ರವ್ಯಶುದ್ಧಿಃ ಕಲೌ ನಾಸ್ತಿ ಸಂಸ್ಕಾರಃ ಸ್ಮಾರ್ತ ಏವ ಚ ॥ ೨೬ ॥

ವೈದಿಕಸ್ತು ಕುತಶ್ಚಾಪಿ ಪ್ರಾಪ್ತೇ ದುಷ್ಟೇ ಕಲೌ ಯುಗೇ ।
ಕಿಂ ತು ತೇ ಬಹುನೋಕ್ತೇನ ವಾಯುಪುತ್ರ ಪುನಃ ಪುನಃ ॥ ೨೭ ॥

---

೨೨–೨೪. ಅನಂತರ ಮಾರನೆಯದಿವಸ ಬೆಳಿಗಾಗಲು ದ್ವಾದಶಿಯುದಿನ ಸ್ನಾನಮಾಡಬೇಕು. ಆದಿನ ನೀರನ್ನೂ ದಕ್ಷಿಣೆಯನ್ನೂ ಬ್ರಾಹ್ಮಣರಿಗೆ ದಾನ ಮಾಡಿ ಭೋಜನಮಾಡಿಸಿ ನಂತರ ತಾನೂ ಊಟಮಾಡಿ ಕೃತಕೃತ್ಯನಾಗಬೇಕು. ಹೀಗೆ ಮಾಡಿದರೆ ಬರುವ ಪುಣ್ಯವನ್ನು ಎಲೈ ಭೀಮಸೇನನೆ! ಕೇಳು. ಆ ವರ್ಷದಲ್ಲಿ ಎಷ್ಟು ಏಕಾದಶಿಗಳು ಬರುತ್ತವೆಯೋ ಅವುಗಳ ಫಲವನ್ನೆಲ್ಲಾ ಹೊಂದು ತ್ತಾನೆ. ಇದರಲ್ಲಿ ಸಂಶಯವೇ ಇಲ್ಲವು.

೨೫. ಶಂಖ ಚಕ್ರ ಗದಾಧರನಾದ ಕೇಶವನು ಹೀಗೆಂದು ನನಗೆ ಹೇಳಿರು ವನು. ಮನುಷ್ಯನು ಎಲ್ಲವನ್ನೂ ಬಿಟ್ಟು ನನ್ನನ್ನೇ ಶರಣು ಹೊಂದಬೇಕು.

೨೬–೩೩. ಹೀಗೆ ಏಕಾದಶಿಯದಿವಸ ನಿರಾಹಾರವಾಗಿದ್ದರೆ ಪಾಪದಿಂದ ಪಾರಾಗುತ್ತಾನೆ. ಕಲಿಯುಗದಲ್ಲಿ ದ್ರವ್ಯಗಳಲ್ಲಿ ಶುದ್ಧಿಯಿಲ್ಲವು. ಸಂಸ್ಕಾರಗಳು ಸ್ಮೃತಿಯಂತೆ ನಡೆಯುತ್ತವೆ. ಈ ದುಷ್ಟ ಕಲಿಯುಗವು ಬಂದರೆ ವೈದಿಕ ಸಂಸ್ಕಾ ರಗಳು ಅಪರೂಪವಾಗಿ ಅಲ್ಲಲ್ಲಿ ನಡೆಯುತ್ತವೆ. ಎಲೈ ವಾಯುಪುತ್ರನೆ! ಬಹಳ ಮಾತಿನಿಂದೇನು? ಎರಡು ಪಕ್ಷಗಳಲ್ಲಿಯೂ ಬರುವ ಏಕಾದಶಿಯದಿವಸ

ಏಕಾದಶ್ಯಾಂ ನ ಭುಂಜೀತ ಪಕ್ಷಯೋರುಭಯೋರಪಿ ।
ಏಕಾದಶ್ಯಾಂ ಸಿತೇ ಪಕ್ಷೇ ಜ್ಯೇಷ್ಠೇಮಾಸ್ಯುದಕಂ ವಿನಾ ॥ ೨೮ ॥

ಪುಣ್ಯಂ ಫಲಮಾಪ್ನೋತಿ ತಚ್ಛೃಣುಷ್ವ ವೃಕೋದರ ।
ಸಂವತ್ಸರೇ ತು ಯಾಃ ಪ್ರೋಕ್ತಾಃ ಶುಕ್ಲಾಃ ಕೃಷ್ಣಾ ವೃಕೋದರ ॥ ೨೯ ॥

ಉಪೋಷಿತಾ ಹಿ ಸರ್ವಾಸ್ಯಾಃ ಏಕಾದಶ್ಯೋ ನ ಸಂಶಯಃ ।
ಧನಧಾನ್ಯಪ್ರದಾ ಪುಣ್ಯಾ ಪುತ್ರಾರೋಗ್ಯಶುಭಪ್ರದಾ ॥ ೩೦ ॥

ಉಪೋಷಿತಾ ನರವ್ಯಾಘ್ರ ಇತಿ ಸತ್ಯಂ ಬ್ರವೀಮಿತೇ ।
ಯಮದೂತಾ ಮಹಾಕಾಯಾಃ ಕರಾಳಾಃ ಕೃಷ್ಣರೂಪಿಣಃ ॥ ೩೧ ॥

ದಂಡಪಾಶಧರಾ ರೌದ್ರಾ ನೋಪಸರ್ಪಂತಿ ತಂ ನರಂ ।
ಪೀತಾಂಬರಧರಾಃ ಸೌಮ್ಯಾಶ್ಚಕ್ರಹಸ್ತಾ ಮನೋಜವಾಃ ॥ ೩೨ ॥

ಅಂತಕಾಲೇ ನಯಂತ್ಯೇತಂ ವೈಷ್ಣವಂ ವೈಷ್ಣವೀಂ ಪುರೀಂ ।
ತಸ್ಮಾತ್ಸರ್ವಪ್ರಯತ್ನೇನ ಉಪೋಷ್ಯೋದಕವರ್ಜಿತಾ ॥ ೩೩ ॥

---

ಊಟ ಮಾಡಬಾರದು. ಜ್ಯೇಷ್ಠಮಾಸದ ಶುಕ್ಲಪಕ್ಷದಲ್ಲಿ ಬರುವ ಏಕಾದಶಿಯದಿನ ನೀರನ್ನು ಕುಡಿಯದೆ ಉಪವಾಸ ಮಾಡಿದರೆ ಬರುವ ಪುಣ್ಯಫಲವನ್ನು ಹೇಳುತ್ತೇನೆ. ಕೇಳು. ಹಾಗೆ ಮಾಡಿದರೆ ವರ್ಷದಲ್ಲಿ ಬರುವ ಶುಕ್ಲ ಕೃಷ್ಣ ಪಕ್ಷಗಳ ಏಕಾದಶಿಗಳೆಲ್ಲ ದರಲ್ಲಿಯೂ ಉಪವಾಸ ಮಾಡಿದಂತಾಗುತ್ತದೆ. ಇದರಲ್ಲಿ ಸಂಶಯವಿಲ್ಲ. ಹೀಗೆ ಉಪವಾಸ ಮಾಡಿದರೆ ಧನಧಾನ್ಯಗಳೆಲ್ಲವೂ ಬರುತ್ತವೆ. ಪುಣ್ಯವೂ ಬರುತ್ತದೆ. ಮಕ್ಕಳು ಆರೋಗ್ಯ ಎಲ್ಲವೂ ಉಂಟಾಗುತ್ತವೆ. ಇದು ಸತ್ಯವು. ಭಯಂಕರವಾದ ದೇಹವೂ ಕೆಂಪು ಬಣ್ಣವೂ ಉಳ್ಳ ಯಮದೂತರು ದಂಡ ಪಾಶಗಳನ್ನು ಧರಿಸಿದ ವರಾಗಿ ಅವರ ಹತ್ತಿರ ಬರುವುದೇ ಇಲ್ಲ. ಪೀತಾಂಬರವನ್ನು ಧರಿಸಿದ ಸೌಮ್ಯವಾದ ಆಕಾರವುಳ್ಳ ಚಕ್ರವನ್ನು ಕೈಯಲ್ಲಿ ಹಿಡಿದಿರುವ ವಿಷ್ಣುಭಕ್ತರಾದ ಭಟರು ಇವನನ್ನು ಕೊನೆಗಾಲದಲ್ಲಿ ಕರೆದುಕೊಂಡು ಹೋಗುವರು. ಆದುದರಿಂದ ಎಲ್ಲಾ ಪ್ರಯತ್ನ ವನ್ನೂ ಪಟ್ಟು ಈ ಏಕಾದಶಿಯಲ್ಲಿ ನೀರನ್ನು ಕುಡಿಯದೆ ಉಪವಾಸ ಮಾಡಬೇಕು.

ಜಲಧೇನುಂ ತದಾ ದತ್ವಾ ಸರ್ವಪಾಪೈಃ ಪ್ರಮುಚ್ಯತೇ ।
ತತಸ್ತ್ವಮಪಿ ಭೂಪಾಲ ಸೋಪವಾಸೋಽರ್ಚನಂ ಹರೇಃ ॥ ೩೪ ॥

ಕುರು ಸರ್ವಪ್ರಯತ್ನೇನ ಸರ್ವಪಾಪಪ್ರಶಾಂತಯೇ ।
ಸ್ವಪ್ನೇ ನ ಮೇಽಪರಾಧೋಽಸ್ತಿ ದಂತರಾಗತಯಾಪಿ ವಾ ॥ ೩೫ ॥

ಭೋಕ್ಷ್ಯೇ ಪರೇಹ್ನಿ ದೇವೇಶ ಹ್ಯಶನಂ ವಾಸರಾದ್ಧರೇಃ ।
ಇತ್ಯುಚ್ಚಾರ್ಯ ತತೋ ಮಂತ್ರಮುಪವಾಸಪರೋ ಭವೇತ್ ॥ ೩೬ ॥

ಸರ್ವಪಾಪವಿನಾಶಾಯ ಶ್ರದ್ಧಾದಮಸಮನ್ವಿತಃ ।
ಮೇರುಮಂದರಮಾತ್ರಾಘಂ ಸ್ತ್ರಿಯಾ ಪುಂಸಾ ಚ ಯತ್ಕೃತಂ ॥ ೩೭ ॥

ಸರ್ವಂ ತದ್ಭಸ್ಮತಾಂ ಯಾತಿ ಏಕಾದಶ್ಯಾಃ ಪ್ರಭಾವತಃ ।
ನ ಶಕ್ನುವಂತಿ ಯೇ ದಾತುಂ ಜಲಧೇನುಂ ನರಾಧಿಪ ॥ ೩೮ ॥

ಸಕಾಂಚನಃ ಪ್ರದಾತವ್ಯೋ ಘಟಕೋ ವಸ್ತ್ರಸಂಯುತಃ ।
ತೋಯಸ್ಯ ನಿಯಮಂ ಯೋಽಸ್ಯಾಂ ಕುರುತೇ ವೈ ಸ ಪುಣ್ಯಭಾಕ್ ॥ ೩೯ ॥

---

೩೪-೩೬. ಆಗ ಜಲಧೇನುವನ್ನು ಕೊಟ್ಟರೆ ಪಾಪವೆಲ್ಲವೂ ನಾಶವಾಗುತ್ತದೆ. ಆದುದರಿಂದ ಎಲೈ ಭೀಮಸೇನನೆ! ಆದಿನ ನೀನು ಉಪವಾಸವಿದ್ದು ಹರಿಯ ಅರ್ಚನೆಯನ್ನು ಮಾಡಿದರೆ ಪಾಪವೆಲ್ಲವೂ ಹೋಗುತ್ತದೆ. "ಅಕಸ್ಮಾತ್ತಾಗಿ ನಿದ್ದೆ ಬಂದರೆ ನನ್ನ ಅಪರಾಧವಿಲ್ಲ. ಹಲ್ಲು ಮುಂತಾದುವುಗಳನ್ನು ಉಜ್ಜಿಕೊಳ್ಳುವುದ ರಿಂದಲೂ ನನ್ನ ಅಪರಾಧವಿಲ್ಲ. ಉಪವಾಸದ ಅನಂತರ ಮಾರನೆಯದಿವಸ ಊಟಮಾಡುತ್ತೇನೆ" ಎಂದು ಹೇಳಿ ಉಪವಾಸ ಮಾಡಬೇಕು.

೩೭-೩೯. ಶ್ರದ್ಧೆಯಿಂದಲೂ ಇದ್ರಿಯ ನಿಗ್ರಹದಿಂದಲೂ ಮಾಡಿದರೆ ಹೆಂಗಸಾಗಲೀ ಗಂಡಸಾಗಲೀ ಮಾಡಿದ ಮೇರು ಮಂದರಗಳಷ್ಟು ದೊಡ್ಡದೂ ಆದ ಎಲ್ಲಾ ಪಾಪಗಳೂ ಈ ಏಕಾದಶಿಯ ಪ್ರಭಾವದಿಂದ ಬೂದಿಯಾಗುತ್ತವೆ. ಜಲ ಧೇನುವನ್ನು ಕೊಡಲು ಶಕ್ತಿಯಿಲ್ಲದವರು ನೀರನ್ನು ಬಿಂದಿಗೆಗಾಗಲೀ ಮಡಕೆ ಗಾಗಲೀ ತುಂಬಿ ಬಟ್ಟೆಯನ್ನೂ ದಕ್ಷಿಣೆಯನ್ನೂ ಇಟ್ಟು ದಾನ ಮಾಡಬೇಕು. ಈ ಏಕಾದಶಿಯಲ್ಲಿ ನೀರನ್ನು ಕುಡಿಯದೆ ನಿಯಮದಿಂದಿರುವವನೇ ಪುಣ್ಯಭಾಗಿಯು.

ಫಲಂ ಕೋಟಿಸುವರ್ಣಸ್ಯ ಯಾಮೇ ಯಾಮೇ ಶ್ರುತಂ ನೃಪ ।
ಸ್ನಾನಂ ದಾನಂ ಜಪೋ ಹೋಮೋ ಯದಸ್ಯಾಂ ಕುರುತೇ ನರಃ ॥ ೪೦ ॥

ತತ್ಸರ್ವಂ ಚಾಕ್ಷಯಂ ಪ್ರಾಪ್ತಮೇತತ್ಕೃಷ್ಣಪ್ರಭಾಷಿತಂ ।
ಕಿಂ ಚಾಪರೇಣ ಧರ್ಮೇಣ ನಿರ್ಜಲೈಕಾದಶೀಂ ವಿನಾ ॥ ೪೧ ॥

ಉಪೋಷ್ಯ ಸಮ್ಯಗ್ವಿಧಿವತ್ ವೈಷ್ಣವಂ ಪದಮಾಪ್ನುಯಾತ್ ।
ಸುವರ್ಣಮನ್ನಂ ವಾಸೋ ವಾ ಯದಸ್ಯಾಂ ಸಂಪ್ರದೀಯತೇ ॥ ೪೨ ॥

ತಚ್ಚೈವ ಕುರುಶಾರ್ದೂಲ ಸರ್ವಂ ಚಾಪ್ಯಕ್ಷಯಂ ಭವೇತ್ ।
ಏಕಾದಶ್ಯಾಂ ದಿನೇ ಯೋನ್ನಂ ಭುಂಕ್ತೇ ಪಾಪಂ ಭುನಕ್ತಿ ಸಃ ॥ ೪೩ ॥

ಇಹ ಲೋಕೇ ಚ ಚಾಂಡಾಲೋ ಮೃತಃ ಪ್ರಾಪ್ನೋತಿ ದುರ್ಗತಿಂ ।
ಯೇ ಚ ದಾಸ್ಯಂತಿ ದಾನಾನಿ ದ್ವಾದಶ್ಯಾಂ ಸಮುಪೋಷಿತಾಃ ॥ ೪೪ ॥

---

೪೦–೪೧ ಯಾಮ ಯಾಮದಲ್ಲಿಯೂ ಈ ರೀತಿಯಿದ್ದರೆ ಕೋಟಿ ಸುವರ್ಣಗಳ ದಾನವನ್ನು ಮಾಡಿದ ಫಲವುಂಟು. ಈ ಏಕಾದಶಿಯ ದಿವಸ, ಸ್ನಾನ, ದಾನ, ಜಪ, ಹೋಮ ಮತ್ತೆ ಯಾವುದನ್ನು ಮಾಡುತ್ತಾನೆಯೋ ಅವೆಲ್ಲವೂ ಕೂಡ ಅಕ್ಷಯವಾಗುತ್ತವೆ. ಎಂದು ಶ್ರೀ ಕೃಷ್ಣನೇ ಹೇಳಿರುವನು ಈ ಏಕಾದಶಿಗೆ ನಿರ್ಜಲೈಕಾದಶಿ ಎಂದು ಹೆಸರು. ಇದನ್ನು ಬಿಟ್ಟರೆ ಮಿಕ್ಕ ಧರ್ಮಗಳಿಂದಾಗಲೀ ವ್ರತಗಳಿಂದಾಗಲೀ ಪ್ರಯೋಜನವೇ ಇಲ್ಲ.

೪೨–೪೭. ಈ ರೀತಿ ಉಪವಾಸ ಮಾಡಿದರೆ ವಿಷ್ಣುವಿನ ಸ್ಥಾನವನ್ನು ಹೊಂದುತ್ತಾನೆ. ಚಿನ್ನ, ಅನ್ನ, ಬಟ್ಟೆ, ಯಾವುದನ್ನು ಈ ಏಕಾದಶಿಯ ದಿವಸ ಕೊಡುತ್ತಾನೆಯೋ ಅದೆಲ್ಲವೂ ಅಕ್ಷಯವಾಗುತ್ತದೆ. ಏಕಾದಶಿಯ ದಿವಸ ಅನ್ನವನ್ನು ತಿನ್ನುವವನು ಪಾಪವನ್ನು ತಿನ್ನುತ್ತಾನೆ. ಅಲ್ಲದೆ ಈ ಲೋಕದಲ್ಲಿ ಚಂಡಾಲನಾಗಿ ಹುಟ್ಟಿ ಪರಲೋಕದಲ್ಲಿ ನರಕವನ್ನು ಹೊಂದುತ್ತಾನೆ. ಹೀಗೆ ಜ್ಯೇಷ್ಠ ಶುಕ್ಲ ಏಕಾದಶಿಯ ದಿನ ಉಪವಾಸವಿದ್ದು ದ್ವಾದಶಿಯ ದಿವಸ ದಾನಗಳನ್ನು

ಜ್ಯೇಷ್ಠಮಾಸೇ ಸಿತೇ ಪಕ್ಷೇ ಪ್ರಾಪ್ಸ್ಯಂತಿ ಪರಮಂ ಪದಂ ।
ಬ್ರಹ್ಮಹಾ ಮದ್ಯಪಸ್ಸ್ತೇನೋ ಗುರುದ್ವೇಷೀ ಸದಾನೃತೀ ॥ ೪೫ ॥

ಮುಚ್ಯಂತೇ ಪಾತಕೈಸ್ಸರ್ವೈರ್ದ್ವಾದಶೀ ಯೈರುಪೋಷಿತಾ ।
ವಿಶೇಷಂ ಶೃಣು ಕೌನ್ತೇಯ ನಿರ್ಜಲೈಕಾದಶೀದಿನೇ ॥ ೪೬ ॥

ಯತ್ಕರ್ತವ್ಯಂ ನರೈಸ್ತ್ರೀಭಿರ್ದಾನಂ ಶ್ರದ್ಧಾಸಮನ್ವಿತೈಃ ।
ಜಲಶಾಯೀ ಚ ಸಂಪೂಜ್ಯೋ ಧೇನುರ್ದೇಯಾ ತಥಾನ್ಮಯೀ ॥ ೪೭ ॥

ಪ್ರತ್ಯಕ್ಷಾ ವಾ ನರಶ್ರೇಷ್ಠ ಘೃತಧೇನುಸ್ತಥಾಪಿ ವಾ ।
ದಕ್ಷಿಣಾಭಿಸ್ಸುಪುಷ್ಟಾಭಿರ್ಮಿಷ್ಟಾನ್ನೈಶ್ಚ ಪೃಥಗ್ವಿಧೈಃ ॥ ೪೮ ॥

ತೋಷಣೀಯಾಃ ಪ್ರಯತ್ನೇನ ದ್ವಿಜಾ ಧರ್ಮಭೃತಾಂ ವರ ।
ತುಷ್ಟಾ ಭವಂತಿ ವೈ ವಿಪ್ರಾಃ ತೈಸ್ತುಷ್ಟೈರ್ಮೋಕ್ಷದೋ ಹರಿಃ ॥ ೪೯ ॥

---

ಮಾಡಿದರೆ ಸ್ವರ್ಗವನ್ನು ಹೊಂದುತ್ತಾರೆ. ಈ ರೀತಿಯಲ್ಲಿ ಆ ಏಕಾದಶಿಯದಿನ ಉಪವಾಸ ಮಾಡಿದರೆ ಬ್ರಹ್ಮಹತ್ಯೆ ಮದ್ಯಪಾನ ಕಳ್ಳತನ ಗುರುದ್ವೇಷ ಸುಳ್ಳು ಹೇಳುವುದು. ಈ ಎಲ್ಲಾ ಪಾಪಗಳೂ ಹೋಗುತ್ತವೆ. ಎಲೈ ಭೀಮನೆ! ಇದರಲ್ಲಿ ವಿಶೇಷವನ್ನು ಕೇಳು. ಈ ನಿರ್ಜಲೈಕಾದಶಿಯ ದಿವಸ, ಹೆಂಗಸರಾಗಲಿ, ಗಂಡಸರಾಗಲಿ, ಶ್ರದ್ಧೆಯಿಂದ ಉಪವಾಸ ಮಾಡಿ ವಿಷ್ಣುವನ್ನು ಪೂಜಿಸಿ ಜಲಧೇನುವನ್ನು ದಾನ ಮಾಡಬೇಕು.

೪೮-೪೯. ಪ್ರತ್ಯಕ್ಷವಾದ ಗೋವನ್ನೂ ದಾನಮಾಡಬಹುದು. ಘೃತಧೇನುವನ್ನು ಆದರೂ ಕೊಡಬಹುದು. ಒಳ್ಳೆಯ ರುಚಿಕರವಾದ ಅನ್ನಗಳಿಂದ ಬ್ರಾಹ್ಮಣರನ್ನು ತೃಪ್ತಿಪಡಿಸಿ ದಕ್ಷಿಣೆಯನ್ನು ಕೊಡಬೇಕು. ಆ ವಿಪ್ರರು ತುಷ್ಟರಾದರೆ ಹರಿಯು ಮೋಕ್ಷವನ್ನು ಕೊಡುತ್ತಾನೆ.

ಆತ್ಮದ್ರೋಹಕೃತಸ್ತೇ ಹಿ ಯೈರೇಷಾ ನ ಹ್ಯುಪೋಷಿತಾ ।
ಪಾಪಾತ್ಮಾನೋ ದುರಾಚಾರಾ ಮುಷ್ಟಾಸ್ತೇ ನಾತ್ರ ಸಂಶಯಃ ॥ ೫೦ ॥

ಕುಲಾನಾಂ ಶತಮಾಗಾಮಿ ಹ್ಯತೀತಾನಾಂ ತಥಾ ಶತಂ ।
ಆತ್ಮನಾ ಸಹ ತೈರ್ನೀತಂ ವಾಸುದೇವಸ್ಯ ಮಂದಿರಂ ॥ ೫೧ ॥

ಶಾನ್ತೈರ್ದಾನ್ತೈರ್ದಾನಪರೈರರ್ಚಯದ್ಭಿಸ್ತಥಾ ಹರಿಂ ।
ಕುರ್ವದ್ಭಿರ್ಜಾಗರಂ ರಾತ್ರೌ ಯೈರೇಷಾ ಸಮುಪೋಷಿತಾ ॥ ೫೨ ॥

ಅನ್ನಂ ವಸ್ತ್ರಂ ತಥಾ ಗಾವೋ ಜಲಂ ಶಯ್ಯಾಸನಂ ಶುಭಂ ।
ಕಮಂಡಲುಸ್ತಥಾ ಛತ್ರಂ ದಾತವ್ಯಂ ನಿರ್ಜಲಾದಿನೇ ॥ ೫೩ ॥

---

೫೦. ಯಾರು ಈ ಏಕಾದಶಿಯ ದಿವಸ ಉಪವಾಸಮಾಡುವುದಿಲ್ಲವೋ ಅವರು ಆತ್ಮದ್ರೋಹಮಾಡಿಕೊಂಡಂತಾಗುವುದು. ಅವರು ಪಾಪಿಗಳು. ದುರಾಚಾರಿಗಳು. ಅವರು ಪದಾರ್ಥಗಳನ್ನು ಕಳೆದುಕೊಂಡವರೂ ಮೋಸಹೋದವರೂ ಆಗುತ್ತಾರೆ. ಇದರಲ್ಲಿ ಸಂಶಯವಿಲ್ಲ.

೫೧. ಹೀಗೆ ಉಪವಾಸಮಾಡಿದವನು ತನ್ನ ಮುಂದಿನ ನೂರುತಲೆಗಳನ್ನೂ ತನ್ನ ಹಿಂದಿನ ನೂರುತಲೆಗಳನ್ನೂ ತನ್ನೊಡನೆ ವೈಕುಂಠಕ್ಕೆ ಒಯ್ಯುತ್ತಾನೆ.

೫೨. ಶಾನ್ತರಾಗಿಯೂ ಇಂದ್ರಿಯ ನಿಗ್ರಹಿಗಳಾಗಿಯೂ ಇದ್ದು ಹರಿಯನ್ನು ಅರ್ಚಿಸಿ ರಾತ್ರಿಯಲ್ಲಿ ಜಾಗರಣೆಮಾಡುತ್ತ ಉಪವಾಸವಿದ್ದರೆ ಅವರು ಹಿಂದೆ ಹೇಳಿದವರನ್ನು ಕರೆದುಕೊಂಡು ವೈಕುಂಠಕ್ಕೆ ಹೋಗುತ್ತಾರೆ.

೫೩. ನಿರ್ಜಲೈಕಾದಶಿಯ ದಿನದಲ್ಲಿ ಉಪವಾಸವಿದ್ದು ಮರುದಿನ ದ್ವಾದಶಿಯಲ್ಲಿ ಅನ್ನ ವಸ್ತ್ರ ಗೋವು ನೀರು ಹಾಸಿಗೆ ಆಸನ ಕಮಂಡಲು ಛತ್ರಿ ಮುಂತಾದ ದಾನಗಳನ್ನು ಮಾಡಬೇಕು.

ಉಪಾನಹೌ ಯೋ ದದಾತಿ ಪಾತ್ರಭೂತೇ ದ್ವಿಜೋತ್ತಮೇ ।
ಸ ಸೌವರ್ಣೇನ ಯಾನೇನ ಸ್ವರ್ಗಲೋಕೇ ಮಹೀಯತೇ ॥ ೫೪ ॥

ಯಶ್ಚೇಮಂ ಶೃಣುಯಾದ್ಭಕ್ತ್ಯಾ ಯಶ್ಚಾಪಿ ಪರಿಕೀರ್ತಯೇತ್ ।
ಉಭೌ ತೌ ಸ್ವರ್ಗಮಾಪ್ನುತೌ ನಾತ್ರ ಕಾರ್ಯಾ ವಿಚಾರಣಾ ॥ ೫೫ ॥

ಯತ್ಫಲಂ ಚ ಸಿನೀವಾಲ್ಯಾಂ ರಾಹುಗ್ರಸ್ತೇ ದಿವಾಕರೇ ।
ಕೃತ್ವಾ ಶ್ರಾದ್ಧಂ ಲಭೇನ್ಮರ್ತ್ಯಃ ತದಸ್ಯಾಃ ಶ್ರವಣಾದಪಿ ॥ ೫೬ ॥

ನಿಯಮಶ್ಚ ಪ್ರಕರ್ತವ್ಯೋ ದಂತಧಾವನಪೂರ್ವಕಂ ।
ಏಕಾದಶ್ಯಾಂ ನಿರಾಹಾರೋ ವರ್ಜಯಿಷ್ಯಾಮಿ ವೈ ಜಲಂ ॥ ೫೭ ॥

ಕೇಶವಪ್ರೀಣನಾರ್ಥಾಯ ಅನ್ಯದಾಚಮನಾದೃತೇ ।
ದ್ವಾದಶ್ಯಾಂ ದೇವದೇವೇಶಃ ಪೂಜನೀಯಸ್ತ್ರಿವಿಕ್ರಮಃ ॥ ೫೮ ॥

---

೫೪. ಯಾವನು ಯೋಗ್ಯನಾದ ಬ್ರಾಹ್ಮಣನಿಗೆ ಕೆರಗಳನ್ನು ಕೊಡುತ್ತಾನೆಯೋ ಅವನು ಚಿನ್ನದ ಯಾನದಲ್ಲಿ ಸ್ವರ್ಗದಲ್ಲಿ ಸುಖಿಸುತ್ತಾನೆ.

೫೫. ಯಾವನು ಇದನ್ನು ಹೇಳುತ್ತಾನೆಯೋ ಅವನೂ ಯಾವನು ಕೇಳುತ್ತಾನೆಯೋ ಅವನೂ ಈ ಇಬ್ಬರೂ ಸ್ವರ್ಗವನ್ನು ಹೊಂದುತ್ತಾರೆ. ಇದರಲ್ಲಿ ಸಂಶಯವು ಬೇಡ.

೫೬. ಅಮಾವಾಸ್ಯೆಯಲ್ಲಿಯೂ ಸೂರ್ಯಗ್ರಹಣದಲ್ಲಿಯೂ ಮನುಷ್ಯನು ಶ್ರಾದ್ಧಮಾಡಿದರೆ ಯಾವಫಲವು ಬರುತ್ತದೆಯೋ ಆ ಫಲವು ನಿರ್ಜಲೈಕಾದಶಿಯ ವಿಷಯವನ್ನು ಕೇಳಿದರೆ ಬರುತ್ತದೆ.

೫೭-೫೯. ಹಲ್ಲನ್ನುಜ್ಜಿಕೊಂಡು ಮುಖವನ್ನು ತೊಳೆದುಕೊಂಡು ನಿಯಮವನ್ನು ಮಾಡಿಕೊಳ್ಳಬೇಕು. "ಏಕಾದಶಿಯದಿನ ಆಚಮನದ ನೀರನ್ನು ಹೊರತಾಗಿ ಬೇರೆ ನೀರನ್ನು ಕುಡಿಯುವುದಿಲ್ಲ. ಇದರಿಂದ ಕೇಶವನು ಪ್ರೀತಿಯನ್ನು ಹೊಂದಲಿ" ಎಂದು ಹೇಳಬೇಕು. ದ್ವಾದಶಿಯ ದಿವಸ ದೇವದೇವನಾದ ವಿಷ್ಣುವನ್ನು

ಗಂಧೈರ್ಧೂಪೈಸ್ತಥಾಪುಷ್ಪೈರ್ವಾಸೋಭಿಃ ಪ್ರಿಯದರ್ಶನೈಃ ।
ಪೂಜಯಿತ್ವಾ ವಿಧಾನೇನ ಮಂತ್ರಮೇತಮುದೀರಯೇತ್ ॥ ೫೯ ॥

ದೇವದೇವ ಹೃಷೀಕೇಶ ಸಂಸಾರಾರ್ಣವತಾರಕ ।
ಉದಕುಂಭಪ್ರದಾನೇನ ನಯ ಮಾಂ ಪರಮಾಂ ಗತಿಂ ॥ ೬೦ ॥

ಜೇಷ್ಠೇ ಮಾಸಿ ತು ವೈ ಭೀಮ ಯಾ ಶುಕ್ಲೈಕಾದಶೀ ಶುಭಾ ।
ನಿರ್ಜಲಂ ಸಮುಪೋಷ್ಯಾತ್ರ ಜಲಕುಂಭಾನ್ಸಶರ್ಕರಾನ್ ॥ ೬೧ ॥

ಪ್ರದಾಯ ವಿಪ್ರಮುಖ್ಯೇಭ್ಯೋ ಮೋದತೇ ವಿಷ್ಣುಸನ್ನಿಧೌ ।
ತತಃ ಕುಂಭಾಃ ಪ್ರದಾತವ್ಯಾಂ ಬ್ರಾಹ್ಮಣಾನಾಂ ಚ ಭಕ್ತಿತಃ ॥ ೬೨ ॥

ಭೋಜಯಿತ್ವಾ ತತೋ ವಿಪ್ರಾನ್ ಸ್ವಯಂ ಭುಂಜೀತ ತತ್ಪರಃ ।
ಏವಂ ಯಃ ಕುರುತೇ ಪೂರ್ಣಾಂ ದ್ವಾದಶೀಂ ಪಾಪನಾಶಿನೀಂ ॥ ೬೩ ॥

---

ನಿಯಮದಿಂದಲೂ ಗಂಧ ಧೂಪ ದೀಪ ಹೂವು ಬಟ್ಟೆ ನೈವೇದ್ಯ ಮುಂತಾದುವು ಗಳಿಂದಲೂ ಕ್ರಮವಾಗಿ ಪೂಜಿಸಿ ಮುಂದಿನ ಮಂತ್ರವನ್ನು ಹೇಳಬೇಕು.

೬೦. ದೇವ ದೇವನೆ! ಹೃಷಿಕೇಶನೆ! ಸಂಸಾರವೆಂಬ ಸಮುದ್ರವನ್ನು ದಾಟಿಸುವವನೆ! ಈ ಉದಕುಂಭದಾನದ ಪ್ರಭಾವದಿಂದ ನನಗೆ ಸದ್ಗತಿಯನ್ನು ಕೊಡು.

೬೧-೬೩. ಎಲೈ ಭೀಮನೆ! ಜ್ಯೇಷ್ಠಶುಕ್ಲ ಏಕಾದಶಿಯದಿನ ನೀರನ್ನೂ ಸಹ ಕುಡಿಯದೆ ಉಪವಾಸವಿದ್ದು ನೀರುತುಂಬಿದ ಪಾತ್ರೆಯನ್ನೂ ಸಕ್ಕರೆಯನ್ನೂ (ಪಾನಕವನ್ನೂ) ಬ್ರಾಹ್ಮರಿಗೆ ಕೊಟ್ಟರೆ ವಿಷ್ಣುವಿನ ಬಳಿ ಸುಖಿಸುತ್ತಾನೆ. ಆದುದ ರಿಂದಲೇ ಬ್ರಾಹ್ಮಣರಿಗೆ ಉದಕುಂಭದಾನವನ್ನು ಮಾಡಬೇಕು. ಅನಂತರ ಅವ ರಿಗೆ ಊಟಮಾಡಿಸಿ ಆಮೇಲೆ ತಾನು ಊಟಮಾಡಬೇಕು. ಈರೀತಿಯಾಗಿ ಯಾರು ಏಕಾದಶಿಯನ್ನು ಮಾಡಿ ದ್ವಾದಶಿಯದಿವಸ ಪಾರಣೆ ಮಾಡುತ್ತಾರೆಯೋ ಅವರು ಪಾಪಗಳನ್ನು ಕಳೆದುಕೊಂಡು ಮುಕ್ತಿಯನ್ನು ಹೊಂದುತ್ತಾರೆ.

**ಸರ್ವಪಾಪವಿನಿರ್ಮುಕ್ತಃ ಪದಂ ಗಚ್ಛತ್ಯನಾಮಯಂ ।**
**ತತಃಪ್ರಭೃತಿ ಭೀಮೇನ ಕೃತಾ ಹ್ಯೇಕಾದಶೀ ಶುಭಾ ॥**
**ಪಾಂಡವದ್ವಾದಶೀ ನಾಮ್ನಾ ಲೋಕೇ ಖ್ಯಾತಾ ಬಭೂವ ಹ || ೬೪ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಪತಿ ನಾರದ ಸಂವಾದಾಂತರ್ಗತ ಕೃಷ್ಣ ಯುಧಿಷ್ಠಿರ ಸಂವಾದೇ ಜ್ಯೇಷ್ಠ ಶುಕ್ಲ ನಿರ್ಜಲೈಕಾದಶೀ ಮಾಹಾತ್ಮ್ಯಂ ನಾಮ ತ್ರಿಪಂಚಾಶತ್ತಮೋಽಧ್ಯಾಯಸ್ಸಮಾಪ್ತಃ**

---

೬೪. ಅದು ಮೊದಲುಗೊಂಡು ಆ ಏಕಾದಶಿಯದಿವಸ ಭೀಮನು ಉಪವಾಸವಿದ್ದು ದ್ವಾದಶಿಯದಿನ ಪಾರಣೆಮಾಡುತ್ತ ಬಂದನು. ಆಮುಪೆಂದ ಆ ದ್ವಾದಶಿಗೆ ಪಾಂಡವದ್ವಾದಶಿಯೆಂದು ಹೆಸರು ಬಂದಿತು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಪತಿ ನಾರದರ ಸಂವಾದಾಂತರ್ಗತವಾದ ಕೃಷ್ಣ ಯುಧಿಷ್ಠಿರರ ಸಂವಾದದಲ್ಲಿ ಜ್ಯೇಷ್ಠ ಶುದ್ಧ ನಿರ್ಜಲೈಕಾದಶಿಯ ಮಹಿಮೆ ಎಂಬ ಐವತ್ತಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಚತುಷ್ಪಂಚಾಶತ್ತಮೋಽಧ್ಯಾಯಃ ॥



॥ ಯುಧಿಷ್ಠಿರ ಉವಾಚ ॥

ಆಷಾಢಕೃಷ್ಣಪಕ್ಷೇ ತು ಕಿನ್ನಾಮ್ನ್ಯೇಕಾದಶೀ ಭವೇತ್ ।
ಕಥಯಸ್ವ ಪ್ರಸಾದೇನ ವಾಸುದೇವ ಮಮಾಗ್ರತಃ ॥ ೧ ॥

॥ ಕೃಷ್ಣ ಉವಾಚ ॥

ವ್ರತಾನಾಮುತ್ತಮಂ ರಾಜನ್ ಕಥಯಾಮಿ ತವಾಗ್ರತಃ ।
ಸರ್ವಪಾಪಕ್ಷಯಕರಂ ಸರ್ವಮುಕ್ತಿಪ್ರದಾಯಕಂ ॥ ೨ ॥

ಆಷಾಢಸ್ಯಾಽಸಿತೇ ಪಕ್ಷೇ ಯೋಗಿನೀ ನಾಮ ನಾಮತಃ ।
ಏಕಾದಶೀ ನೃಪಶ್ರೇಷ್ಠ ಮಹಾಪಾತಕನಾಶಿನೀ ॥ ೩ ॥

---

## ಐವತ್ತನಾಲ್ಕನೆಯ ಅಧ್ಯಾಯವು



೧. ಯುಧಿಷ್ಠಿರನು ಹೇಳಿದನು–ಎಲೈ ವಾಸುದೇವನೆ! ಆಷಾಢಕೃಷ್ಣ ಪಕ್ಷದಲ್ಲಿ ಬರುವ ಏಕಾದಶಿಯ ಹೆಸರೇನು? ದಯವಿಟ್ಟು ತಿಳಿಸು.

೨. ಕೃಷ್ಣನು ಹೇಳಿದನು–ಎಲೈ ರಾಜನೆ! ವ್ರತಗಳಲ್ಲೆಲ್ಲಾ ಉತ್ತಮವಾದ ವ್ರತವನ್ನು ಹೇಳುತ್ತೇನೆ. ಅದು ಸರ್ವಪಾಪಗಳನ್ನೂ ನಾಶಮಾಡುತ್ತದೆ. ಮುಕ್ತಿಯನ್ನೂ ಕೊಡುತ್ತದೆ.

೩. ಆಷಾಢಮಾಸದ ಕೃಷ್ಣಪಕ್ಷದಲ್ಲಿ ಬರುವ ಏಕಾದಶಿಗೆ ಯೋಗಿನೀ ಏಕಾದಶಿಯೆಂದು ಹೆಸರು. ಮಹಾಪಾಪಗಳನ್ನೂ ನಾಶಮಾಡುತ್ತದೆ.

ಸಂಸಾರಾರ್ಣವಮಗ್ನಾನಾಂ ಪೋತಭೂತಾ ಸನಾತನೀ ।
ಜಗತ್ರಯೇ ಸಾರಭೂತಾ ಯೋಗಿನೀವ್ರತಕಾರಿಣಾಂ ॥ ೪ ॥

ಕಥಯಾಮಿ ತವಾಗ್ರೇಹಂ ಕಥಾಂ ಪೌರಾಣಿಕೀಂ ಶುಭಾಂ ।
ಅಲಕಾಯಾಂ ರಾಜರಾಜಃ ಶಿವಭಕ್ತಿಪರಾಯಣಃ ॥ ೫ ॥

ತಸ್ಯಾಸೀತ್ಪುಷ್ಪವಟುಕೋ ಹೇಮಮಾಲೀತಿ ನಾಮತಃ ।
ತಸ್ಯ ಪತ್ನೀ ಸುರೂಪಾ ಚ ವಿಶಾಲಾಕ್ಷೀತಿ ನಾಮತಃ ॥ ೬ ॥

ಸ ತಸ್ಯಾಂ ಚಾಽಽಸಕ್ತಮನಾಃ ಕಾಮಪಾಶವಶಂ ಗತಃ ।
ಮಾನಸಾತ್ಪುಷ್ಪನಿಚಯಮಾನೀಯ ಸ್ವಗೃಹೇ ಸ್ಥಿತಃ ॥ ೭ ॥

ಪತ್ನೀಪ್ರೇಮರಸಾಸಕ್ತೋ ನ ಕುಬೇರಾಲಯಂ ಗತಃ ।
ಕುಬೇರೋ ದೇವಸದನೇ ಕರೋತಿ ಶಿವಪೂಜನಂ ॥ ೮ ॥

---

೪. ಈ ಯೋಗಿನೀ ಏಕಾದಶಿಯು ಸಂಸಾರಸಾಗರದಲ್ಲಿ ಮುಳುಗಿದವರಿಗೆ ದೋಣಿಯರೂಪವಲ್ಲಿರುವುದು. ಪ್ರಪಂಚವಲ್ಲೆಲ್ಲಾ ಸಾರವಾದುದು.

೫. ನಿನಗೊಂದು ಹಿಂದಿನ ಕಥೆಯನ್ನು ಹೇಳುತ್ತೇನೆ. ಅಲಕಾಪಟ್ಟಣದಲ್ಲಿ ಶಿವಭಕ್ತಿಯಿಂದ ಕೂಡಿದ ಕುಬೇರನಿರುವನು.

೬. ಆ ಕುಬೇರನಿಗೆ ಹೇಮಮಾಲೀ ಎಂಬ ಹೂತರುವವನಿದ್ದನು. ಅವನಿಗೆ ವಿಶಾಲಾಕ್ಷಿ ಎಂಬ ಹೆಂಡತಿಯಿದ್ದಳು. ಅವಳು ಬಹುಸುಂದರಿಯು.

೭. ಆತನು ಹೆಂಡತಿಯಲ್ಲಿ ಮನಸ್ಸುಳ್ಳವನಾಗಿ ಕಾಮಬಾಧೆಗೊಳಗಾಗಿ ಮಾನಸಸರೋವರದಿಂದ ಹೂವನ್ನು ತಂದಿದ್ದರೂ ಹೆಂಡತಿಯೊಡನೆ ಮನೆಯಲ್ಲಿಯೇ ಇದ್ದುಬಿಟ್ಟನು.

೮–೧೦. ಹೆಂಡತಿಯಲ್ಲಿ ಆಸಕ್ತನಾದ ಆ ಹೇಮಮಾಲಿಯು ಕುಬೇರನ ಮನೆಗೆ ಹೋಗಲೇ ಇಲ್ಲ. ಕುಬೇರನು ದೇವರ ಮನೆಯಲ್ಲಿ ದೇವರ ಪೂಜೆಯನ್ನು

**ಮಧ್ಯಾಹ್ನ ಸಮಯೇ ರಾಜನ್ ಪುಷ್ಪಾಗಮಸಮೀಕ್ಷಕೈಃ ।**
**ಹೇಮಮಾಲೀ ಸ್ವಭವನೇ ರಮತೇ ಕಾಂತಯಾ ಸಹ ॥ ೯ ॥**

**ಕಸ್ಮಾನ್ನಾಯಾತಿ ಭೋ ಯಕ್ಷಾ ಹೇಮಮಾಲೀ ದುರಾತ್ಮವಾನ್ ।**
**ನಿಶ್ಚಯಂ ಕ್ರಿಯತಾಮಸ್ಯ ಇತ್ಯುವಾಚ ಪುನಃ ಪುನಃ ॥ ೧೦ ॥**

**॥ ಯಕ್ಷಾ ಊಚುಃ ॥**

**ವನಿತಾಕಾಮುಕೋ ಗೇಹೇ ರಮತೇ ಸ್ವೇಚ್ಛಯಾ ನೃಪ ॥ ೧೧ ॥**

**॥ ಶ್ರೀಕೃಷ್ಣ ಉವಾಚ ॥**

**ತೇಷಾಂ ವಾಕ್ಯಂ ಸಮಾಕರ್ಣ್ಯ ಕುಬೇರಃ ಕೋಪಪೂರಿತಃ ।**
**ಆಹ್ವಯಾಮಾಸ ತಂ ತೂರ್ಣಂ ವಟುಕಂ ಹೇಮಮಾಲಿನಂ ॥ ೧೨ ॥**

**ಜ್ಞಾತ್ವಾ ಕಾಲಾತ್ಯಯಂ ಸೋಽಪಿ ಭಯವ್ಯಾಕುಲಲೋಚನಃ ।**
**ಅಸ್ನಾತ ಏವ ಆಗತ್ಯ ಕುಬೇರಸ್ಯಾಗ್ರತಃ ಸ್ಥಿತಃ ॥ ೧೩ ॥**

---

ಮಾಡುತ್ತಾ ಮಧ್ಯಾಹ್ನ ಸಮಯದಲ್ಲಿ ಹೂವನ್ನು ತರುವನೆಂದು ಕಾದುಕೊಂಡು ಇದ್ದನು. ಇತ್ತ ಹೇಮಮಾಲಿಯು ತನ್ನ ಹೆಂಡತಿಯೊಡನೆ ರಮಿಸುತ್ತ ಮನೆಯಲ್ಲಿಯೇ ಇದ್ದುಬಿಟ್ಟನು. ಆಗ ಪೂಜೆಯ ಕಾಲವು ಮೀರುತ್ತ ಬರಲು ಯಕ್ಷರಾಜನಾದ ಕುಬೇರನಿಗೆ ಕೋಪಬಂದು ಇಂತೆಂದನು. ಎಲೈ ಯಕ್ಷರಿರಾ ! ಹೇಮಮಾಲಿಯು ಏಕೆ ಬರಲಿಲ್ಲ ? ಅವನು ಬರುವನೇ ? ಇಲ್ಲವೆ ? ಎಂದು ನಿಶ್ಚಯವನ್ನು ಮಾಡಿರೆಂದು ಪದೇ ಪದೇ ಹೇಳುತ್ತಿದ್ದನು.

೧೧. ಯಕ್ಷರು ಹೇಳಿದರು- ಎಲೈ ದೊರೆಯೇ ! ಅವನು ಹೆಂಡತಿಯಲ್ಲಿ ಆಸೆಗೊಂಡವನಾಗಿ ಮನೆಯಲ್ಲಿ ಸಂತೋಷದಿಂದ ರಮಿಸುತ್ತಿದ್ದಾನೆ.

೧೨. ಶ್ರೀಕೃಷ್ಣನು ಹೇಳಿದನು– ಕುಬೇರನು ಆ ಯಕ್ಷರ ಮಾತನ್ನು ಕೇಳಿ ಕೋಪಗೊಂಡು ಆ ಹೇಮಮಾಲಿಯನ್ನು ಕರೆಸಿದನು.

೧೩- ಆ ಹೇಮಮಾಲಿಯೂ ಕೂಡ ಹೊತ್ತಾದುದನ್ನು ತಿಳಿದು ಭಯಗೊಂಡವನಾಗಿ ಸ್ನಾನಮಾಡಿ ಶುಚಿಯಾಗದೇನೆ ಹೋಗಿ ಕುಬೇರನ ಎದುರಿನಲ್ಲಿ ನಿಂತನು.

ತಂ ದೃಷ್ಟ್ವಾ ಧನದಃ ಕ್ರುದ್ಧಃ ಕ್ರೋಧಸಂರಕ್ತಲೋಚನಃ ।
ಪ್ರತ್ಯುವಾಚ ರುಷಾವಿಷ್ಟಃ ಕೋಪಪ್ರಸ್ಫುರಿತಾಧರಃ ॥ ೧೪ ॥

॥ ಧನದ ಉವಾಚ ॥

ಆಃ ಪಾಪ ದುಷ್ಟ ದುರ್ವೃತ್ತ ಕೃತವಾ ದೇವಹೇಳನಂ ।
ಅಷ್ಟಾದಶಕುಷ್ಠಚಿತ್ಸ್ಕೋ ವಿಯುಕ್ತಃ ಕಾಂತಯಾ ತಯಾ ।
ಅಸ್ಮಾತ್ ಸ್ಥಾನಾದಪಧ್ವಸ್ತೋ ಗಚ್ಛಸ್ವ ಪ್ರಮುಥಾಧಮ ॥ ೧೫ ॥

॥ ಕೃಷ್ಣ ಉವಾಚ ॥

ಇತ್ಯುಕ್ತೇ ವಚನೇ ತಸ್ಯ ತಸ್ಮಾತ್ ಸ್ಥಾನಾತ್ ಪಪಾತ ಸಃ ।
ಮಹಾದುಃಖಾಭಿಭೂತಶ್ಚ ಕುಷ್ಠೈಃ ಪೀಡಿತವಿಗ್ರಹಃ ॥ ೧೬ ॥

ನ ಸುಖಂ ದಿವಸೇ ತಸ್ಯ ನ ನಿದ್ರಾಂ ಲಭತೇ ನಿಶಿ ।
ಛಾಯಾಯಾಂ ಪೀಡಿತತನುರ್ನಿದಾಘೇತ್ಯಂತಪೀಡಿತಃ ॥ ೧೭ ॥

---

೧೪. ಕುಬೇರನು ಅವನನ್ನು ನೋಡಿ ಕೋಪದಿಂದ ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು ತುಟಿಗಳನ್ನು ನಡುಗಿಸುತ್ತಾ ಇಂತೆಂದನು.

೧೫. ಕುಬೇರನು ಹೇಳಿದನು– ಎಲೆಲವೋ ಪಾಪಿಯೇ ! ಕೆಟ್ಟ ನಡತೆಯವನೇ ! ದೇವರಿಗೆ ತಿರಸ್ಕಾರಮಾಡಿದೆ. ಆದುದರಿಂದ ಹದಿನೆಂಟು ಬಗೆಯ ಕುಷ್ಠ ರೋಗಗಳನ್ನು ಹೊಂದಿ ಹೆಂಡತಿಯಿಂದ ಅಗಲಿ ಈ ಅಲಕೆಯಲ್ಲಿ ಇರದೆ ನಾಶವಾಗಿ ಹೋಗು.

೧೬. ಕುಬೇರನು ಹೀಗೆನ್ನಲು ಕುಷ್ಠಗಳಿಂದ ಕೂಡಿ ಬಹು ದುಃಖಪಡುತ್ತಾ ಆ ಜಾಗದಿಂದ ಬಿಟ್ಟು ಹೋದನು.

೧೭. ಹಗಲಿನಲ್ಲಿ ಅವನಿಗೆ ಸುಖವಿಲ್ಲ. ರಾತ್ರಿಯಲ್ಲಿ ನಿದ್ದೆಯಿಲ್ಲ. ನೆರಳಿನಲ್ಲಿದ್ದರೆ ಛಳಿ ಹೆಚ್ಚು. ಬಿಸಿಲಿನಲ್ಲಿದ್ದರೆ ಸೆಕೆ ಹೆಚ್ಚು. ಈ ರೀತಿಯಾಗಿ ತೊಂದರೆ ಪಡುತ್ತಿದ್ದನು.

ಶಿವಪೂಜಾಪ್ರಭಾವೇಣ ಸ್ಮೃತಿಸ್ತಸ್ಯ ನ ಲುಪ್ಯತೇ ।
ಪಾತಕೇನಾಭಿಭೂತೋಽಪಿ ಪೂರ್ವಕರ್ಮ ಸ್ಮರತ್ಯಸೌ ॥ ೧೮ ॥

ಭ್ರಮಮಾಣಸ್ತತೋ ಗಚ್ಛನ್ ಹೇಮಾದ್ರಿಂ ಪರ್ವತೋತ್ತಮಂ ।
ತತ್ರಾಪಶ್ಯನ್ಮುನಿವರಂ ಮಾರ್ಕಂಡೇಯಂ ತಪೋನಿಧಿಂ ॥ ೧೯ ॥

ಯಸ್ಯಾಯುರ್ವಿದ್ಯತೇ ರಾಜನ್ ಬ್ರಹ್ಮಣೋ ವಯಸಾ ಸಮಂ ।
ವವಂದೇ ಚರಣೌ ತಸ್ಯ ದೂರತಃ ಪಾಪಕರ್ಮಕೃತ್ ॥ ೨೦ ॥

ಮಾರ್ಕಂಡೇಯೋ ಮುನಿವರೋ ದೃಷ್ಟ್ವಾ ತಂ ಕಂಪಿತಂ ತಥಾ ।
ಪರೋಪಕರಣಾರ್ಥಾಯ ಸಮಾಹೂಯೇದಮಬ್ರವೀತ್ ॥ ೨೧ ॥

॥ ಮಾರ್ಕಂಡೇಯ ಉವಾಚ ॥

ಕಸ್ಮಾತ್ಕುಷ್ಠಾಭಿಭೂತಸ್ತ್ವಂ ಕುತೋ ನಿಂದ್ಯತರೋ ಹ್ಯಸಿ ॥ ೨೨ ॥

---

೧೮. ಶಿವಪೂಜೆಯ ಮಹಿಮೆಯಿಂದ ಹಿಂದಿನ ಜ್ಞಾನವು ಅವನಿಗೆ ನಾಶವಾಗಿರಲಿಲ್ಲ. ಪಾಪಿಯಾದರೂ ಪೂರ್ವ ಕಥೆಯೆಲ್ಲವನ್ನೂ ಜ್ಞಾಪಿಸಿಕೊಳ್ಳುತ್ತಿದ್ದನು.

೧೯. ಹೀಗೆಯೇ ತೊಂದರೆಪಡುತ್ತ ಸುತ್ತುತ್ತ ಸುತ್ತುತ್ತ ಹಿಮವತ್ಪರ್ವತಕ್ಕೆ ಹೋದನು. ಅಲ್ಲಿ ತಪೋನಿಧಿಯಾದ ಮಾರ್ಕಂಡೇಯನನ್ನು ನೋಡಿದನು.

೨೦. ಆ ಮಾರ್ಕಂಡೇಯನಿಗೆ ಬ್ರಹ್ಮನಿಗಿರುವಷ್ಟು ಆಯುಸ್ಸು ಇರುವುದು. ಅವನ ಬಳಿಗೆ ಹೋಗಿ ಈ ಪಾಪಿಯು ದೂರದಿಂದಲೇ ನಮಸ್ಕರಿಸಿದನು.

೨೧. ಮಾರ್ಕಂಡೇಯನು ಅವನು ಆ ರೀತಿಯಾಗಿ ತೊಂದರೆಪಡುತ್ತಿರುವುದನ್ನು ನೋಡಿದನು. ಆಗ ಪರೋಪಕಾರ ಬುದ್ಧಿಯಿಂದ ಅವನನ್ನು ಕರೆದು ಇಂತೆಂದನು.

೨೨ ಮಾರ್ಕಂಡೇಯನು ಹೇಳಿದನು–ಅಯ್ಯಾ ನಿನಗೇಕೆ ಈ ಕುಷ್ಠವು ಬಂದಿತು ? ಈ ರೀತಿ ನಿಂದ್ಯನಾಗಲು ಕಾರಣವೇನು ?

॥ ಶ್ರೀಕೃಷ್ಣ ಉವಾಚ ॥

ಇತ್ಯುಕ್ತಸ್ಸ ಪ್ರತ್ಯುವಾಚ ಮಾರ್ಕಂಡೇಯಂ ಮಹಾಮುನಿಂ ॥ ೨೩ ॥

॥ ಯಕ್ಷ ಉವಾಚ ॥

ರಾಜರಾಜಸ್ಯಾನುಚರೋ ಹೇಮಮಾಲೀತಿ ನಾಮತಃ ।
ಮಾನಸಾತ್ಪದ್ಮನಿಚಯಮಾನೀಯ ಪ್ರತ್ಯಹಂ ಮುನೇ ॥ ೨೪ ॥

ಶಿವಪೂಜನವೇಳಾಯಾಂ ಕುಬೇರಾಯ ಸಮರ್ಪಯೇ ।
ಏಕಸ್ಮಿನ್ ದಿವಸೇ ಚೈವ ಕಾಲಶ್ಚಾವಿದಿತೋ ಮಯಾ ॥ ೨೫ ॥

ಪತ್ನೀಸೌಖ್ಯಪ್ರಸಕ್ತೇನ ಶೋಕವ್ಯಾಕುಲಚೇತಸಾ ।
ತತಃ ಕ್ರುದ್ಧೇನ ಶಪ್ತೋಽಸ್ಮಿ ರಾಜರಾಜೇನ ವೈ ಮುನೇ ॥ ೨೬ ॥

ಕುಷ್ಠಾಭಿಭೂತಸ್ಸಂಜಾತೋ ವಿಯುಕ್ತಃ ಕಾನ್ತಯಾ ತಯಾ ।
ಅಧುನಾ ತವ ಸಾನ್ನಿಧ್ಯೇ ಪ್ರಾಪ್ತೋಽಸ್ಮಿ ಶುಭಕರ್ಮಣಾ ॥ ೨೭ ॥

ಸತಾಂ ಸ್ವಭಾವತಶ್ಚಿತ್ತಂ ಪರೋಪಕರಣೇ ಕ್ಷಮಂ ।
ಇತಿ ಜ್ಞಾತ್ವಾ ಮುನಿಶ್ರೇಷ್ಠ ಮಾಂ ಪ್ರಶಾಧಿ ಕೃತಾಗಸಂ ॥ ೨೮ ॥

---

೨೩. ಶ್ರೀ ಕೃಷ್ಣನು ಹೇಳಿದನು–ಮಾರ್ಕಂಡೇಯನು ಇಂತೆಂದು ಕೇಳಲು ಹೇಮಮಾಲಿಯು ಇಂತೆಂದನು.

೨೪–೨೭. ಎಲೈ ಋಷಿಯೆ! ನಾನು ಕುಬೇರನ ಆಳು. ನನ್ನ ಹೆಸರು ಹೇಮಮಾಲಿ. ನಾನು ದಿನವೂ ಮಾನಸ ಸರೋವರದಿಂದ ಕಮಲಗಳನ್ನು ತಂದು ಕುಬೇರನಿಗೆ ಪೂಜೆಯವೇಳೆಗೆ ಕೊಡುತ್ತಿದ್ದೆನು. ಒಂದುದಿನ ಹೆಂಡತಿಯೊಡನೆ ರಮಿಸುತ್ತ ಅದರ ವಿಷಯದಲ್ಲಿಯೇ ಆಸಕ್ತನಾಗಿದ್ದುದರಿಂದ ಹೊತ್ತೇ ಗೊತ್ತಾಗಲಿಲ್ಲ. ಆಗ ಕುಬೇರನು ಕೋಪಗೊಂಡು ಶಪಿಸಿದನು. ಆ ಶಾಪದಿಂದ ಕುಷ್ಠರೋಗವುಂಟಾಗಿ ತೊಂದರೆಪಡುತ್ತ ಹೆಂಡತಿಯಿಂದಲೂ ಅಗಲಿರುವೆನು. ಯಾವುದೋ ಪುಣ್ಯವಶದಿಂದ ಈಗ ನಿನ್ನ ಬಳಿಗೆ ಬಂದಿದ್ದೇನೆ.

೨೮. ಸತ್ಪುರುಷರ ಮನಸ್ಸು ಯಾವಾಗಲೂ ಪರೋಪಕಾರದಲ್ಲಿ ತೊಡಗಿರುವುದು. ಆದುದರಿಂದ ಸತ್ಪುರುಷರಾದ ತಾವು ಪಾಪಿಯಾದ ನಾನು ಏನು ಮಾಡಿದರೆ ಸೌಖ್ಯವಾಗುತ್ತದೆಂಬುದನ್ನು ಅಪ್ಪಣೆ ಮಾಡಬೇಕು.

|| ಮಾರ್ಕಂಡೇಯ ಉವಾಚ ||

ತ್ವಯಾ ಸತ್ಯಮಿಹಪ್ರೋಕ್ತಂ ನಾಸತ್ಯಂ ಭಾಷಿತಂ ಯತಃ ।
ಅತೋ ವ್ರತೋಪದೇಶಂ ತೇ ಕಥಯಾಮಿ ಶುಭಪ್ರದಂ || ೨೯ ||

ಆಷಾಢೇ ಕೃಷ್ಣಪಕ್ಷೇ ತು ಯೋಗಿನೀವ್ರತಮಾಚರ ।
ಅಸ್ಯ ವ್ರತಸ್ಯ ಪುಣ್ಯೇನ ಕುಷ್ಠಂ ಯಾಸ್ಯತಿ ವೈ ಧ್ರುವಂ || ೩೦ ||

|| ಶ್ರೀಕೃಷ್ಣ ಉವಾಚ ||

ಇತಿ ವಾಕ್ಯಮೃಷೇಶ್ಶ್ರುತ್ವಾ ದಂಡವತ್ಪತಿತೋ ಭುವಿ ।
ಉತ್ಥಾಪಿತಸ್ಸ ಮುನಿನಾ ಬಭೂವಾತೀವ ಹರ್ಷಿತಃ || ೩೧ ||

ಮಾರ್ಕಂಡೇಯೋಪದೇಶೇನ ವ್ರತಂ ತೇನ ಕೃತಂ ಯಥಾ ।
ಅಷ್ಟಾದಶೈವ ಕುಷ್ಠಾನಿ ಗತಾನಿ ತಸ್ಯ ಸರ್ವಶಃ || ೩೨ ||

ಮುನೇರ್ವಚನತಸ್ಸಮ್ಯಗ್ವ್ರತೇ ಚೀರ್ಣೇऽಭವತ್ಸುಖೀ ।
ಈದೃಗ್ವಿಧಂ ನೃಪ ಶ್ರೇಷ್ಠಂ ಕಥಿತಂ ಯೋಗಿನೀ ವ್ರತಂ || ೩೩ ||

---

೨೯. ಮಾರ್ಕಂಡೇಯನು ಹೇಳಿದನು–ಎಲೈ ಹೇಮಮಾಲಿಯೇ ! ನೀನು ಸತ್ಯವನ್ನೇ ನುಡಿದೆ. ಸುಳ್ಳನ್ನಾಡಲಿಲ್ಲ. ಆದುದರಿಂದ ನಿನಗೊಂದು ಒಳ್ಳೆಯ ವ್ರತವನ್ನು ಉಪದೇಶಿಸುತ್ತೇನೆ.

೩೦. ಆಷಾಢ ಕೃಷ್ಣ ಪಕ್ಷದಲ್ಲಿ ಯೋಗಿನೀ ವ್ರತವನ್ನು ಮಾಡು ಈ ವ್ರತದ ಪುಣ್ಯದಿಂದ ನಿನ್ನ ಕುಷ್ಠರೋಗವು ಹೋಗುತ್ತದೆ. ನಿಶ್ಚಯವು.

೩೧. ಶ್ರೀ ಕೃಷ್ಣನು ಹೇಳಿದನು–ಋಷಿಯ ಈ ಮಾತನ್ನು ಕೇಳಿ ಆತನಿಗೆ ಉದ್ದಕ್ಕೆ ಮಲಗಿ ನಮಸ್ಕರಿಸಿದನು. ಆ ಋಷಿಯು ಏಳೆಂದು ಎಬ್ಬಿಸಿದನು. ಇದರಿಂದ ಹೇಮಮಾಲಿಗೆ ಬಹು ಸಂತೋಷವಾಯಿತು.

೩೨. ಮಾರ್ಕಂಡೇಯನ ಉಪದೇಶದಂತೆ ಅವನು ಆ ವ್ರತವನ್ನು ಮಾಡಿದನು. ಅದರಿಂದ ಹದಿನೆಂಟು ಬಗೆಯ ಕುಷ್ಠ ರೋಗಗಳೂ ನಾಶವಾದುವು.

೩೩. ಮುನಿಯ ಮಾತಿನಂತೆ ಈ ಯೋಗಿನೀ ವ್ರತವನ್ನು ಮಾಡಲು ರೋಗವೆಲ್ಲವೂ ಹೋಗಿ ಸುಖಿಯಾದನು. ಎಲೈ ದೊರೆಯೇ ! ಈ ಯೋಗಿನೀ ವ್ರತವು ಈ ರೀತಿಯಾದ ಮಹಿಮೆಯುಳ್ಳದ್ದು.

**ಅಷ್ಟಾಶೀತಿಸಹಸ್ರಾಣಿ ದ್ವಿಜಾನ್ಭೋಜಯತೇ ತು ಯಃ।**
**ತತ್ಸಮಂ ಫಲಮಾಪ್ನೋತಿ ಯೋಗಿನೀವ್ರತಕೃನ್ನರಃ ॥ ೩೪ ॥**

**ಮಹಾಪಾಪಪ್ರಶಮನೀ ಮಹಾಪುಣ್ಯಫಲಪ್ರದಾ ।**
**ಪಠನಾಚ್ಛ್ರವಣಾನ್ಮರ್ತ್ಯಃ ಸರ್ವಪಾಪೈಃ ಪ್ರಮುಚ್ಯತೇ ॥ ೩೫ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಪತಿ ನಾರದ ಸಂವಾದಾನ್ತರ್ಗತ ಕೃಷ್ಣ ಯುಧಿಷ್ಠಿರ ಸಂವಾದೇ ಆಷಾಢ ಕೃಷ್ಣ ಯೋಗಿನ್ಯೇಕಾದಶೀ ಮಾಹಾತ್ಮ್ಯಂ ನಾಮ ಚತುಷ್ಪಂಚಾಶತ್ತಮೋಽಧ್ಯಾಯಸ್ಸಮಾಪ್ತಃ**

---

೩೪. ಈ ಯೋಗಿನೀ ವ್ರತವನ್ನು ಮಾಡಿದವನು ಎಂಭತ್ತೆಂಟುಸಾವಿರ ಬ್ರಾಹ್ಮಣರನ್ನು ಭೋಜನ ಮಾಡಿಸಿದ ಫಲವನ್ನು ಹೊಂದುತ್ತಾನೆ.

೩೫. ಈ ಯೋಗಿನೀವ್ರತವು ಮಹಾ ಪಾಪಗಳನ್ನು ನಾಶಮಾಡುತ್ತದೆ. ಪುಣ್ಯವನ್ನು ಕೊಡುತ್ತದೆ. ಇದನ್ನು ಕೇಳಿದವರೂ ಓದಿದವರೂ ಎಲ್ಲಾ ಪಾಪ ಗಳಿಂದಲೂ ಮುಕ್ತರಾಗುತ್ತಾರೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಪತಿ ನಾರದರ ಸಂವಾದಾಂತರ್ಗತವಾದ ಕೃಷ್ಣ ಯುಧಿಷ್ಠಿರರ ಸಂವಾದದಲ್ಲಿ ಆಷಾಢ ಕೃಷ್ಣ ಯೋಗಿನ್ಯೇಕಾದಶೀ ಮಹಿಮೆ ಎಂಬ ಐವತ್ತನಾಲ್ಕನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ಪಂಚಪಂಚಾಶತ್ತಮೋಽಧ್ಯಾಯಃ ||



|| ಯುಧಿಷ್ಠಿರ ಉವಾಚ ||

ಆಷಾಢಸ್ಯ ಸಿತೇ ಪಕ್ಷೇ ಕಾ ಚ ಏಕಾದಶೀ ಭವೇತ್ ।
ಕಿನ್ನಾಮಕೋ ವಿಧಿಸ್ತಸ್ಯಾ ಏತದ್ವಿಸ್ತರತೋ ವದ || ೧ ||

|| ಶ್ರೀಕೃಷ್ಣ ಉವಾಚ ||

ಕಥಯಾಮಿ ಮಹಾಪುಣ್ಯಾಂ ಸ್ವರ್ಗಮೋಕ್ಷಪ್ರದಾಯಿನೀಂ ।
ಶಯನೀಂ ನಾಮ ನಾಮ್ನಾ ತು ಸರ್ವಪಾಪಹರಾಂ ಪರಾಂ || ೨ ||

---

## ಐವತ್ತೈದನೆಯ ಅಧ್ಯಾಯವು



೧. ಯುಧಿಷ್ಠಿರನು ಹೇಳಿದನು– ಆಷಾಢಮಾಸದ ಶುಕ್ಲಪಕ್ಷದಲ್ಲಿ ಯಾವ ಏಕಾದಶಿಯು ಬರುತ್ತದೆ. ಅದರ ಹೆಸರೇನು ? ಅದಕ್ಕೆ ವಿಧಿಯೇನು ? ವಿಸ್ತಾರವಾಗಿ ಹೇಳು.

೨. ಶ್ರೀಕೃಷ್ಣನು ಹೇಳಿದನು– ಅದು ಸ್ವರ್ಗಮೋಕ್ಷಗಳನ್ನು ಕೊಡುತ್ತದೆ. ಮಹಾಪುಣ್ಯವಾದುದು. ಅದರ ಹೆಸರು ಶಯನೈಕಾದಶಿಯೆಂದು. ಪಾಪ ಹಾರಕವಾದುದು.

ಯಸ್ಯಾಃ ಶ್ರವಣಮಾತ್ರೇಣ ವಾಜಪೇಯಫಲಂ ಲಭೇತ್ ।
ಸತ್ಯಂ ಸತ್ಯಂ ಮಯಾ ಪ್ರೋಕ್ತಂ ನಾತಃ ಪರತರಂ ನೃಣಾಂ ॥ ೩ ॥

ಪಾಪಿನಾಂ ಪಾಪನಾಶಾಯ ಸೃಷ್ಟಂ ಧಾತ್ರಾ ಮಹೋತ್ತಮಂ ।
ಅತಃ ಪರಾ ನ ರಾಜೇಂದ್ರ ವರ್ತತೇ ಮೋಕ್ಷದಾ ಪರಾ ॥ ೪ ॥

ಏತಸ್ಮಾತ್ಕಾರಣಾತ್ ರಾಜ್ಞ ಶ್ರೂಯತಾಂ ಗತಿರುತ್ತಮಾ ।
ಭವೇನ್ನರಾಣಾಂ ಶ್ರೋತ್ರ್ಯಾಣಾಂ ಕಥಾಯಾಶ್ಶ್ರವಣಾದಪಿ ॥ ೫ ॥

ತೇ ಸದಾ ವೈಷ್ಣವಾ ರಾಜ್ಞ ಮಮ ಭಕ್ತಿಪರಾಯಣಾಃ ।
ಆಷಾಢೇ ವಾಮನಶ್ಚೈವ ಪೂಜ್ಯತೇ ಪರಮೇಶ್ವರಃ । ॥ ೬ ॥

ವಾಮನಃ ಪೂಜಿತೋ ಯೇನ ಕಮಲೈಃ ಕಮಲೇಕ್ಷಣಃ ।
ಆಷಾಢಸ್ಯ ಸಿತೇ ಪಕ್ಷೇ ಶಯನ್ಯಾಶ್ಚ ದಿನೇ ತಥಾ ॥ ೭ ॥

---

೩. ಈ ಏಕಾದಶಿಯ ವಿಷಯವನ್ನು ಕೇಳಿದರೇನೇ ವಾಜಪೇಯ ಯಾಗದ ಫಲವು ಬರುತ್ತದೆ. ನಾನು ಹೇಳಿದುದು ಸತ್ಯವು. ಇದಕ್ಕಿಂತಲೂ ಉತ್ತಮವಾದುದು ಮತ್ತೊಂದಿಲ್ಲ.

೪. ಪಾಪಿಗಳ ಪಾಪದ ನಾಶಕ್ಕೋಸ್ಕರವೇ ಬ್ರಹ್ಮನು ಇದನ್ನು ಸೃಷ್ಟಿಸಿದ್ದಾನೆ. ಆದುದರಿಂದ ಮೋಕ್ಷವನ್ನು ಕೊಡುವಂತಹುದು ಇದಕ್ಕಿಂತಲೂ ಮತ್ತೊಂದಿಲ್ಲ.

೫. ಆ ಕಾರಣದಿಂದಲೇ ಇದನ್ನು ಕೇಳಿದವರಿಗೂ ಮಾಡಿದವರಿಗೂ ಉತ್ತಮವಾದ ಗತಿಯು ಬರುತ್ತದೆ.

೬. ಆ ಏಕಾದಶಿಯನ್ನು ಮಾಡುವವರು ವೈಷ್ಣವರು, ವಿಷ್ಣುಭಕ್ತಿಪರಾಯಣರು. ಆಷಾಢದಲ್ಲಿ ವಾಮನನೆಂಬ ದೇವರನ್ನು ಪೂಜಿಸಬೇಕು.

೭–೮. ಆಷಾಢಮಾಸದ ಶುಕ್ಲಪಕ್ಷದ ಕಾಮಿಕಾ ಏಕಾದಶಿಯ ದಿನ ವಾಮನ ದೇವರನ್ನು ಯಾವನು ಪೂಜಿಸುವನೋ ಅವನು ಮೂರು ಲೋಕವನ್ನೂ

ತೇನಾರ್ಚಿತಂ ಜಗತ್ಸರ್ವಂ ತ್ರಯೋ ದೇವಾಸ್ಸನಾತನಾಃ ।
ಕೃತಾ ಚ್ಚೈಕಾದಶೀ ಯೇನ ಹರಿವಾಸರಮುತ್ತಮಂ ॥ ೮ ॥

॥ ಯುಧಿಷ್ಠಿರ ಉವಾಚ ॥

ಸಂಶಯೋಽಸ್ತಿ ಮಹಾನ್ಮೇಽತ್ರ ಶ್ರೂಯತಾಂ ಪುರುಷೋತ್ತಮ ।
ಕಥಂ ಸುಪ್ತೋಽಸಿ ದೇವೇಶ ಕಥಂ ಚ ಬಲಿಮಾಶ್ರಿತಃ ॥ ೯ ॥

ಕಥಂ ಭೂಮೌ ಚ ಸರ್ವೇಶ ಕಿಂ ಕುರ್ವಂತಿ ಜನಾಃ ಪರೇ ।
ಏತದ್ವದ ಮಹಾಪ್ರಾಜ್ಞ ಸಂಶಯೋಽಸ್ತಿ ಮಹಾನ್ಮಮ ॥ ೧೦ ॥

॥ ಶ್ರೀಕೃಷ್ಣ ಉವಾಚ ॥

ಶ್ರೂಯತಾಂ ರಾಜಶಾರ್ದೂಲ ಕಥಾ ಪಾಪಪ್ರಣಾಶಿನೀ ।
ಯಸ್ಯಾಶ್ಶ್ರವಣಮಾತ್ರೇಣ ಸರ್ವಪಾಪಕ್ಷಯೋ ಭವೇತ್ ॥ ೧೧ ॥

ಬಲಿರ್ನೈ ದಾನವಃ ಪೂರ್ವಮಾಸೀತ್ತ್ರೇತಾಯುಗೇ ನೃಪ ।
ಪೂಜಯಂಶ್ಚೈವ ಮಾಂ ನಿತ್ಯಂ ಮದ್ಭಕ್ತೋ ಮತ್ಪರಾಯಣಃ ॥ ೧೨ ॥

---

ಬ್ರಹ್ಮ ವಿಷ್ಣು ಶಿವರನ್ನೂ ಪೂಜಿಸಿದಂತಾಗುತ್ತದೆ. ಆದಿನ ಏಕಾದಶಿಯ ಉಪವಾಸಮಾಡಿಕೊಂಡು ಜಾಗರಣೆಗಳನ್ನು ಮಾಡಿ ಪೂಜಿಸಬೇಕು.

೯–೧೦. ಯುಧಿಷ್ಠಿರನು ಹೇಳಿದನು– ಎಲೈ ಪುರುಷೋತ್ತಮನೇ! ನನಗೆ ಈ ವಿಷಯದಲ್ಲಿ ಬಹುವಾದ ಸಂಶಯವಿದೆ. ನೀನು ಮಲಗಿರುವುದು ಹೇಗೆ? ಬಲಿಯೆಂಬ ದಾನವನ ಬಳಿ ಇರುತ್ತೇನೆಂಬುದು ಹೇಗೆ? ಭೂಮಿಯಲ್ಲಿ ಹೇಗೆ ಇರುತ್ತೀಯೆ? ಆಗ ಜನಗಳೆಲ್ಲರೂ ಏನುಮಾಡುತ್ತಾರೆ? ಇದೇ ನನ್ನ ಸಂಶಯವು. ಇದಕ್ಕೆ ಸಮಾಧಾನವನ್ನು ಹೇಳು.

೧೧. ಶ್ರೀ ಕೃಷ್ಣನು ಹೇಳಿದನು– ಎಲೈ ಯುಧಿಷ್ಠಿರನೇ! ಒಂದು ಕಥೆಯನ್ನು ಹೇಳುತ್ತೇನೆ ಕೇಳು. ಅದು ಪಾಪವನ್ನು ನಾಶಮಾಡುತ್ತದೆ. ಅದನ್ನು ಕೇಳಿದೊಡನೆಯೇ ಎಂತಹ ಪಾಪಗಳಿದ್ದರೂ ನಾಶವಾಗುತ್ತವೆ.

೧೨. ಪೂರ್ವದಲ್ಲಿ ತ್ರೇತಾಯುಗದಲ್ಲಿ ಬಲಿಯೆಂಬ ದಾನವನಿದ್ದನು. ಅವನು ದಿನವೂ ನನ್ನನ್ನು ಪೂಜಿಸುತ್ತ ನನ್ನಲ್ಲಿಯೇ ಭಕ್ತಿಯುಳ್ಳವನಾಗಿದ್ದನು.

ಯಜ್ಞೈಸ್ತು ವಿಧಿವದ್ದೈತ್ಯೋ ಯಜತೇ ಮಾಂ ಸನಾತನಂ ।
ಭಕ್ತ್ಯಾ ಚ ಪರಯಾ ರಾಜನ್ ಯಜ್ಞಕೃದ್ವ್ರತಕೃತ್ತಥಾ ॥ ೧೩ ॥

ಪರಂ ವಿಚಾರ್ಯ ಬಹುಧಾ ಮಘೋನಂ ಚೈವ ಸೂಕ್ತಿಭಿಃ ।
ಗುರುಣಾ ದೇವತೈಸ್ಸಾರ್ಧಂ ಬಹುಧಾ ಪೂಜಿತೋಪ್ಯಹಂ ॥ ೧೪ ॥

ತತೋ ವಾಮನರೂಪೇಣ ಅವತಾರೇ ಚ ಪಂಚಮೇ ।
ಅತ್ಯುಗ್ರರೂಪೇಣ ತದಾ ಸರ್ವಬ್ರಹ್ಮಾಂಡರೂಪಿಣಾ ॥ ೧೫ ॥

ವಾಕ್‌ಛಲೇನ ಜಿತೋಃ ದಾತಾ ಸತ್ಯಮಾಶ್ರಿತ್ಯ ಸಂಸ್ಥಿತಃ ।
ಶುಕ್ರಸ್ತಂ ವಾರಯಾಮಾಸ ಯನ್ನಾರಾಯಣ ಇತ್ಯಹಂ ॥ ೧೬ ॥

ಯಾಚಿತಾ ವಸುಧಾ ರಾಜನ್ ಸಾರ್ಧತ್ರಯಪದಾ ಮಯಾ ।
ಸಂಕಲ್ಪೋದಕಮಾತ್ರೇ ತು ಕರೇ ತೇನೈವ ಚಾರ್ಪಿತೇ ॥ ೧೭ ॥

---

೧೩. ಅವನು ಅನೇಕವಾದ ಯಜ್ಞಗಳಿಂದ ನನ್ನನ್ನು ಸಂತೋಷಪಡಿಸುತ್ತ ಇದ್ದನು. ಉತ್ತಮವಾದ ಭಕ್ತಿಯಿಂದ ಯಜ್ಞಗಳನ್ನು ಮಾಡುವುದಲ್ಲದೆ ವ್ರತಗಳನ್ನೂ ಮಾಡುತ್ತಿದ್ದನು.

೧೪. ಅನಂತರ ಇಂದ್ರನು ಬೃಹಸ್ಪತಿಯೊಡನೆಯೂ ದೇವತೆಗಳೊಡನೆಯೂ ಯೋಚನೆಮಾಡಿ ಅನೇಕ ಒಳ್ಳೆಯ ರೀತಿಯಿಂದ ನನ್ನನ್ನು ಪೂಜಿಸಿದನು.

೧೫-೧೬. ಅನಂತರ ವಾಮನಾವತಾರವೆಂಬ ಐದನೆಯ ಅವತಾರವನ್ನು ಮಾಡಿದೆನು. ಅದು ಬ್ರಹ್ಮಾಂಡ ರೂಪವಾದ ಉಗ್ರಾವತಾರವು. ಆಗ ಮೋಸದ ಮಾತಿನಿಂದ ಸತ್ಯವಂತನಾದ ಬಲಿಯನ್ನು ಜಯಿಸಿದೆನು. ಆಗ ಶುಕ್ರಾಚಾರ್ಯನು ಇವನು ನಾರಾಯಣನು ಇವನ ಮಾತಿಗೆ ಮರಳಾಗಬೇಡವೆಂದು ಬಲಿಗೆ ಹೇಳಿದನು.

೧೭-೨೧. ಆಗ ನಾನು ಮೂರೂವರೆ ಹೆಜ್ಜೆ ಭೂಮಿಯನ್ನು ಕೇಳಿಕೊಂಡೆನು. ಆ ಬಲಿಯು ಸಂಕಲ್ಪಮಾಡಿ ನೀರಿನೊಡನೆ ದಾನಮಾಡಿ ನನ್ನ ಕೈಗೆ

ರೂಪವಿನ್ಯಾದೃಗ್ವಿಧಂ ರಾಜನ್ ತದಾ ಶೃಣು ಮಯಾ ಕೃತಂ ।
ಭೂರ್ಲೋಕೇ ಚರಣೌ ನ್ಯಸ್ಯ ಭುವರ್ಲೋಕೇ ತು ಜಾನುನೀ ॥ ೧೮ ॥

ಸ್ವರ್ಲೋಕೇ ತು ಕಟಿಂ ನ್ಯಸ್ಯ ಮಹರ್ಲೋಕೇ ತಥೋದರಂ ।
ಜನೋಲೋಕೇ ಚ ಹೃದಯಂ ತಪೋಲೋಕೇ ತು ಕಂಠಕಂ ॥ ೧೯ ॥

ಸತ್ಯಲೋಕೇ ಮುಖಂ ಸ್ಥಾಪ್ಯ ಮಸ್ತಕಂ ಚ ತದೂರ್ಧ್ವಕಂ ।
ಚಂದ್ರಸೂರ್ಯಗ್ರಹಾಶ್ಚೈವ ನಕ್ಷತ್ರಾಣಿ ತಥೈವ ಚ ॥ ೨೦ ॥

ದೇವಾಸ್ಸೇಂದ್ರಾಶ್ಚ ನಾಗಾಶ್ಚ ಯಕ್ಷಗಂಧರ್ವಕಿನ್ನರಾಃ ।
ಸ್ತುವಂತೋ ವೇದಸಂಭೂತೈಃ ಸೂಕ್ತೈಶ್ಚ ವಿವಿಧೈಸ್ತಥಾ ॥ ೨೧ ॥

ಕರೇ ಗೃಹೀತ್ವಾ ಚ ಬಲಿಂ ತ್ರಿಪದೈಃ ಪೂರಿತಾ ಮಹೀ ।
ಅರ್ಧಂ ಚ ತಸ್ಯ ಪೃಷ್ಠೇ ಚ ಪದಂ ನ್ಯಸ್ತಂ ಮಯಾ ತದಾ ॥ ೨೨ ॥

ಗತೋ ರಸಾತಲಂ ರಾಜನ್ ದಾನವೋ ಮಮ ಪೂಜಕಃ ।
ಕ್ಷಿಪ್ತೋಽಧೋ ದಾನವಶ್ಚೈಷಃ ಕಿಮಕುರ್ವನ್ ತತಃ ಪರಂ ॥ ೨೩ ॥

---

ಹಾಕಲು ನಾನು ಮಾಡಿದ ಅವತಾರವನ್ನು ಹೇಳುತ್ತೇನೆ. ಕೇಳು. ಭೂಲೋಕದಲ್ಲಿ ಹೆಜ್ಜೆಗಳನ್ನೂ, ಭುವರ್ಲೋಕದಲ್ಲಿ ಮಂಡಿಗಳನ್ನೂ, ಸ್ವರ್ಲೋಕದಲ್ಲಿ ಸೊಂಟವನ್ನೂ, ಮಹರ್ಲೋಕದಲ್ಲಿ ಹೊಟ್ಟೆಯನ್ನೂ, ಜನೋಲೋಕದಲ್ಲಿ ಎದೆಯನ್ನೂ, ತಪೋಲೋಕದಲ್ಲಿ ಕತ್ತನ್ನೂ, ಸತ್ಯಲೋಕದಲ್ಲಿ ಮುಖವನ್ನೂ, ಅದರ ಮೇಲಿನ ಲೋಕದಲ್ಲಿ ತಲೆಯನ್ನೂ ಇಟ್ಟೆನು. ಚಂದ್ರ, ಸೂರ್ಯ, ನಕ್ಷತ್ರಗಳು, ದೇವತೆಗಳು, ಇಂದ್ರನು, ನಾಗರು, ಯಕ್ಷರು, ಗಂಧರ್ವರು, ಕಿನ್ನರರು ಇವರೆಲ್ಲರೂ ಆಗ ವೇದದ ಋಕ್ಕುಗಳಿಂದ ನನ್ನನ್ನು ಸ್ತೋತ್ರ ಮಾಡಿದರು.

೨೨-೨೬. ಆಗ ಬಲಿಯನ್ನು ಕೈಯ್ಯಲ್ಲಿ ಹಿಡಿದುಕೊಂಡು ಮೂರು ಕಾಲುಗಳಿಂದ ಭೂಮಿಯನ್ನು ಅಳೆದೆನು. ಆಗ ಅರ್ಧಕಾಲನ್ನು ಅವನ ಬೆನ್ನಿನಮೇಲಿಟ್ಟೆನು. ಆ ನನ್ನ ಭಕ್ತನಾದ ಬಲಿಯು ರಸಾತಳಕ್ಕೆ ಹೋದನು. ಆಗ ಆ ದಾನವನನ್ನು ಪಾತಾಳಕ್ಕೆ ತುಳಿದೆನು. ಅನಂತರ ಆ ಬಲಿಯು ವಿನಯದಿಂದ ತಲೆ

ವಿನಯೇನಾನತೋಽಸೌ ವೈ ಸುಪ್ರಸನ್ನೋ ಜನಾರ್ದನಃ ।
ಆಷಾಢಶುಕ್ಲಪಕ್ಷೇ ತು ಕಾಮಿಕಾ ಹರಿವಾಸರೇ ॥ ೨೪ ॥

ತಸ್ಯಾಮೇಕಾ ಚ ಮೂರ್ತಿರ್ಮೇ ಬಲಿಮಾಶ್ರಿತ್ಯ ತಿಷ್ಠತಿ ।
ದ್ವಿತೀಯಾ ಶೇಷಪೃಷ್ಠೇ ವೈ ಕ್ಷೀರಸಾಗರಮಧ್ಯತಃ ॥ ೨೫ ॥

ಸ್ವಪಿತ್ಯೇವ ಮಹಾರಾಜಾ ಯಾವದಾಗಾಮಿಕಾರ್ತಿಕೀ ।
ತಾವದ್ಭವೇತ್ಸುಧರ್ಮಾತ್ಮಾ ಸರ್ವಧರ್ಮೋತ್ತಮೋತ್ತಮಂ ॥ ೨೬ ॥

ವ್ರತಂ ಚ ಕುರುತೇ ಮರ್ತ್ಯಃ ಸ ಯಾತಿ ಪರಮಾಂ ಗತಿಂ ।
ಏತಸ್ಮಾತ್ಕಾರಣಾದ್ರಾಜನ್ ಕರ್ತವ್ಯಾ ಚ ಪ್ರಯತ್ನತಃ ॥ ೨೭ ॥

ನಾತಃ ಪರತರಾ ಕಾಚಿತ್ ಪವಿತ್ರಾ ಪಾಪನಾಶಿನೀ ।
ಯಸ್ಯಾಂ ಸ್ವಪಿತಿ ದೇವೇಶಃ ಶಂಖಚಕ್ರಗದಾಧರಃ ॥ ೨೮ ॥

ತಸ್ಯಾಂ ಚ ಪೂಜಯೇದ್ದೇವಂ ಶಂಖಚಕ್ರಗದಾಧರಂ ।
ರಾತ್ರೌ ಜಾಗರಣಂ ಕೃತ್ವಾ ಭಕ್ತ್ಯಾ ಚೈವ ವಿಶೇಷತಃ ॥ ೨೯ ॥

---

ಬಾಗಲು ನಾನು ಅವನಿಗೆ ಪ್ರಸನ್ನನಾದೆನು. ಆಷಾಢ ಶುಕ್ಲಪಕ್ಷದಲ್ಲಿ ಕಾಮಿಕಾ ಅಥವಾ ಶಯನೈಕಾದಶಿಯು ಬರುವುದು. ಆದಿನ ನನ್ನ ಒಂದು ಮೂರ್ತಿಯು ಬಲಿಯ ಹತ್ತಿರವಿರುತ್ತದೆ. ಎರಡನೆಯ ಮೂರ್ತಿಯು ಕ್ಷೀರಸಾಗರ ಮಧ್ಯದಲ್ಲಿ ಶೇಷನ ಹಾಸಿಗೆಯಮೇಲೆ ಮಲಗಿರುವುದು. ಈ ರೀತಿ ಎರಡು ಮೂರ್ತಿಗಳೂ ಕಾರ್ತಿಕ ಮಾಸದವರೆಗೆ ಮಲಗಿರುತ್ತವೆ. ಅದುವರೆಗೂ ಬೇಕಾದ ವ್ರತವನ್ನು ಆಚರಿಸಿ ಮನುಷ್ಯನು ಧರ್ಮಗಳನ್ನು ಸಂಪಾದಿಸಬಹುದು.

೨೭. ಆಗ ವ್ರತಗಳನ್ನು ಮಾಡಿದ ಮನುಷ್ಯನು ಉತ್ತಮಗತಿಯನ್ನು ಹೊಂದುತ್ತಾನೆ. ಆದುದರಿಂದಲೇ ಈ ಕಾಲದಲ್ಲಿ ವ್ರತಗಳನ್ನು ಪ್ರಯತ್ನಪಟ್ಟು ಮಾಡಬೇಕು.

೨೮. ಶಂಖ ಚಕ್ರ ಗದಾಧರನಾದ ಸ್ವಾಮಿಯು ಮಲಗಿರುವ ಈ ದಿನಗಳಿಗಿಂತ ಪಾಪನಾಶಕವಾದ ಬೇರೆ ದಿನಗಳಿಲ್ಲವು. ಇದೇ ಪಾಪಹರವು.

೨೯. ಆ ಕಾಮಿಕೈಕಾದಶಿಯಲ್ಲಿ ಶಂಖ ಚಕ್ರ ಗದಾಧರನಾದ ಸ್ವಾಮಿಯನ್ನು ಪೂಜಿಸಿ ರಾತ್ರಿಯಲ್ಲಿ ಭಕ್ತಿಯಿಂದ ಜಾಗರಣೆ ಮಾಡಬೇಕು.

ತಸ್ಯ ಪುಣ್ಯಸ್ಯ ಸಂಖ್ಯಾಂ ನ ಕರ್ತುಂ ಶಕ್ತಶ್ಚತುರ್ಮುಖಃ ।
ಏವಂ ಯಃ ಕುರುತೇ ರಾಜನ್ನೇಕಾದಶ್ಯಾ ವ್ರತೋತ್ತಮಂ ॥ ೩೦ ॥

ಸರ್ವಪಾಪಹರಂ ಚೈವ ಭುಕ್ತಿಮುಕ್ತಿಪ್ರದಾಯಕಂ ।
ಸ ಚ ಲೋಕೇ ಮಮ ಸದಾ ಶ್ವಪಚೋಽಪಿ ಪ್ರಿಯಂಕರಃ ॥ ೩೧ ॥

ದೀಪದಾನೇನ ಪಾಲಾಶಪತ್ರೇ ಭುಕ್ತ್ವಾ ವ್ರತೇನ ಚ ।
ಚಾತುರ್ಮಾಸ್ಯಂ ನಯಂತೀಹ ತೇ ನರಾ ಮಮ ವಲ್ಲಭಾಃ ॥ ೩೨ ॥

ಚಾತುರ್ಮಾಸ್ಯೇ ಹರೌ ಸುಪ್ತೇ ಭೂಮಿಶಾಯೀ ಭವೇನ್ನರಃ ।
ಶ್ರಾವಣೇ ವರ್ಜಯೇಚ್ಛಾಕಂ ದಧಿ ಭಾದ್ರಪದೇ ತಥಾ ॥ ೩೩ ॥

ದುಗ್ಧಮಾಶ್ವಯುಜೇ ತ್ಯಾಜ್ಯಂ ಕಾರ್ತಿಕೇ ದ್ವಿದಳಂ ತ್ಯಜೇತ್ ।
ಅಥವಾ ಬ್ರಹ್ಮಚರ್ಯಸ್ಥಃ ಸ ಯಾತಿ ಪರಮಾಂ ಗತಿಂ ॥ ೩೪ ॥

---

೩೦-೩೧. ಆದಿನ ವ್ರತಮಾಡಿದ ಪುಣ್ಯವನ್ನು ಎಣಿಸಲು ಚತುರ್ಮುಖನಾದ ಬ್ರಹ್ಮನಿಂದಲೂ ಸಾಧ್ಯವಿಲ್ಲ. ಈ ರೀತಿಯಾಗಿ ಉತ್ತಮವಾದ ಏಕಾದಶಿ ವ್ರತವನ್ನು ಮಾಡುವವನು ಪಾಪಗಳನ್ನು ನಾಶಮಾಡಿಕೊಳ್ಳುತ್ತಾನೆ. ಅದಲ್ಲದೆ ಇಹದಲ್ಲಿ ಭುಕ್ತಿಯೂ ಪರದಲ್ಲಿ ಮುಕ್ತಿಯೂ ಸಿಕ್ಕುತ್ತವೆ. ಲೋಕದಲ್ಲಿ ಅವನು ಚಂಡಾಲನಾದರೂ ನನಗೆ ಪ್ರಿಯನು.

೩೨. ದೀಪದಾನ ಮಾಡುತ್ತಾ ಮುತ್ತುಗದೆಲೆಯಲ್ಲಿ ಊಟಮಾಡುತ್ತಾ ಯಾವನು ಚಾತುರ್ಮಾಸಗಳನ್ನು ಕಳೆಯುತ್ತಾನೆಯೋ ಅವನು ನನಗೆ ಪ್ರೀತಿ ಪಾತ್ರನು.

೩೩-೩೪. ಹರಿಯು ಮಲಗಿದ ಚಾತುರ್ಮಾಸ್ಯದಲ್ಲಿ ಮನುಷ್ಯನು ನೆಲದ ಮೇಲೆ ಮಲಗಬೇಕು. ಶ್ರಾವಣದಲ್ಲಿ ಕಾಯಿಪಲ್ಯಗಳನ್ನೂ ಭಾದ್ರಪದದಲ್ಲಿ ಮೊಸರನ್ನೂ ಆಶ್ವಯುಜದಲ್ಲಿ ಹಾಲನ್ನೂ ಕಾರ್ತಿಕದಲ್ಲಿ ದ್ವಿದಳಧಾನ್ಯಗಳನ್ನೂ ಬಿಡಬೇಕು. ಅದಿಲ್ಲದಿದ್ದರೆ ನಾಲ್ಕು ತಿಂಗಳೆಲ್ಲಿಯೂ ಬ್ರಹ್ಮಚಾರಿಯಾಗಿರಬೇಕು. ಅಂಥವರು ಮುಕ್ತಿಯನ್ನು ಹೊಂದುತ್ತಾರೆ.

ಏಕಾದಶ್ಯಾ ವ್ರತೇನೈವ ಪುಮಾನ್ ಪಾಪೈರ್ವಿಮುಚ್ಯತೇ ।
ಕರ್ತವ್ಯಾ ಸರ್ವದಾ ರಾಜನ್ ವಿಸ್ಮರ್ತವ್ಯಾ ನ ಕರ್ಹಿಚಿತ್ ॥ ೩೫ ॥

ಶಯನೀಬೋಧಿನೀಮಧ್ಯೇ ಯಾ ಕೃಷ್ಣೈಕಾದಶೀ ಭವೇತ್ ।
ಸೈವೋಪೋಷ್ಯಾ ಗೃಹಸ್ಥಸ್ಯ ನಾನ್ಯಾ ಕೃಷ್ಣಾ ಕದಾಚನ ॥ ೩೬ ॥

ಶೃಣುಯಾಚ್ಚೈವ ಭೋ ರಾಜನ್ ಕಥಾಂ ಪಾಪಹರಾಂ ಪರಾಂ ।
ಅಶ್ವಮೇಧಸ್ಯ ಯಜ್ಞಸ್ಯ ಫಲಂ ಪ್ರಾಪ್ನೋತಿ ಮಾನವಃ ॥ ೩೭ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಪತಿ
ನಾರದ ಸಂವಾದಾಂತರ್ಗತ ಕೃಷ್ಣ ಯುಧಿಷ್ಠಿರ ಸಂವಾದೇ
ಆಷಾಢ ಶುಕ್ಲ ಶಯನ್ಯೈಕಾದಶೀ ಮಾಹಾತ್ಮ್ಯಂ ನಾಮ
ಪಂಚಪಂಚಾಶತ್ತಮೋಽಧ್ಯಾಯಸ್ಸಮಾಪ್ತಃ

---

೩೫. ಏಕಾದಶಿಯ ವ್ರತದಿಂದ ಮನುಷ್ಯನ ಪಾಪಗಳೆಲ್ಲವೂ ಹೋಗುತ್ತವೆ. ಆ ಏಕಾದಶಿಯನ್ನು ಯಾವಾಗಲೂ ಮಾಡಬೇಕು. ಮರೆಯಬಾರದು.

೩೬. ಗೃಹಸ್ಥನಾದವನು ಶಯನ್ಯೈಕಾದಶಿ ಬೋಧನ್ಯೈಕಾದಶಿಗಳ ಮಧ್ಯದಲ್ಲಿ ಬರುವ ಕೃಷ್ಣೈಕಾದಶಿಗಳಲ್ಲಿಯೂ ಉಪವಾಸಮಾಡಬೇಕು. ಇತರ ಕಾಲದ ಕೃಷ್ಣೈಕಾದಶಿಗಳಲ್ಲಿ ಉಪವಾಸ ಮಾಡಬಾರದು.

೩೭. ಪಾಪಹಾರಕವಾದ ಈ ಕಥೆಯನ್ನು ಕೇಳಿದವನು ಅಶ್ವಮೇಧಯಜ್ಞದ ಫಲವನ್ನು ಹೊಂದುತ್ತಾನೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಪತಿ
ನಾರದರ ಸಂವಾದಾಂತರ್ಗತವಾದ ಕೃಷ್ಣ ಯುಧಿಷ್ಠಿರರ ಸಂವಾದದಲ್ಲಿ
ಆಷಾಢ ಶುಕ್ಲ ಶಯನ್ಯೈಕಾದಶಿಯ ಮಹಿಮೆ ಎಂಬ
ಐವತ್ತೈದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-x-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಷಟ್‌ಪಂಚಾಶತ್ತಮೋಽಧ್ಯಾಯಃ ॥



॥ ಯುಧಿಷ್ಠಿರ ಉವಾಚ ॥

ಶ್ರಾವಣಸ್ಯಾಸಿತೇ ಪಕ್ಷೇ ಕಿನ್ನಾಮ್ನ್ಯೇಕಾದಶೀ ಭವೇತ್ ।
ತಸ್ಮೇ ಕಥಯ ಗೋವಿಂದ ವಾಸುದೇವ ನಮೋಽಸ್ತು ತೇ ॥ ೧ ॥

॥ ಶ್ರೀಕೃಷ್ಣ ಉವಾಚ ॥

ಶೃಣು ರಾಜರ್ಷ ಪ್ರವಕ್ಷ್ಯಾಮಿ ಆಖ್ಯಾನಂ ಪಾಪನಾಶನಂ ।
ಯತ್ ಪ್ರೋಕ್ತಂ ಬ್ರಹ್ಮಣಾ ಪೂರ್ವಂ ಪೃಚ್ಛತೇ ನಾರದಾಯ ವೈ ॥ ೨ ॥

---

## ಐವತ್ತಾರನೆಯ ಅಧ್ಯಾಯವು



೧. ಯುಧಿಷ್ಠಿರನು ಹೇಳಿದನು–ಎಲೈ ಗೋವಿಂದನೆ! ಶ್ರಾವಣಮಾಸದ ಕೃಷ್ಣಪಕ್ಷದಲ್ಲಿ ಬರುವ ಏಕಾದಶಿಗೆ ಏನೆಂದು ಹೆಸರು? ಅದನ್ನು ನನಗೆ ಹೇಳು. ಎಲೈ ವಾಸುದೇವನೆ! ನಿನಗೆ ನಮಸ್ಕಾರವು.

೨. ಕೃಷ್ಣನು ಹೇಳಿದನು–ಎಲೈ ರಾಜನೆ! ಬ್ರಹ್ಮನು ಪೂರ್ವದಲ್ಲಿ ನಾರದನಿಗೆ ಹೇಳಿದ ಒಂದು ಪಾಪನಾಶಕವಾದ ಕಥೆಯನ್ನು ಹೇಳುತ್ತೇನೆ. ಕೇಳು.

॥ ನಾರದ ಉವಾಚ ॥

ಭಗವನ್ ಶ್ರೋತುಮಿಚ್ಛಾಮಿ ತ್ವತ್ತೋಽಹಂ ಕಮಲಾಸನ ।
ಶ್ರಾವಣಸ್ಯಾಸಿತೇ ಪಕ್ಷೇ ಕಿನ್ನಾಮ್ನ್ಯೇಕಾದಶೀ ಭವೇತ್ ॥
ಕೋ ದೇವಃ ಕೋ ವಿಧಿಃ ತಸ್ಯಾಃ ಕಿಂ ಪುಣ್ಯಂ ಕಥಯ ಪ್ರಭೋ ॥ ೩ ॥

॥ ಬ್ರಹ್ಮೋವಾಚ ॥

ಶೃಣು ನಾರದ ತೇ ವಕ್ಷ್ಯೇ ಲೋಕಾನಾಂ ಹಿತಕಾಮ್ಯಯಾ ।
ಶ್ರಾವಣ್ಯೈಕಾದಶೀ ಕೃಷ್ಣಾ ಕಾಮಿಕಾ ನಾಮ ನಾಮತಃ ॥ ೪ ॥

ಯಸ್ಯಾಃ ಸ್ಮರಣಮಾತ್ರೇಣ ವಾಜಪೇಯಫಲಂ ಲಭೇತ್ ।
ಯಸ್ಯಾಂ ಜಾಗರ್ತಿ ದೇವೇಶಶ್ಶಂಖಚಕ್ರಗದಾಧರಃ ॥ ೫ ॥

ಶ್ರೀಧಶಾಖ್ಯಂ ಹರಿಂ ವಿಷ್ಣುಂ ಮಾಧವಂ ಮದುಸೂದನಂ ।
ಪೂಜಯೇದ್ಧ್ಯಾಯತೇ ಯೋ ವೈ ತಸ್ಯ ಪುಣ್ಯಫಲಂ ಶೃಣು ॥ ೬ ॥

---

೩. ನಾರದನು ಹೇಳಿದನು–ಎಲೈ ಬ್ರಹ್ಮನೆ! ನಿನ್ನಿಂದ ಒಂದು ವಿಷಯವನ್ನು ಕೇಳಬೇಕೆಂದಿರುವೆನು. ಶ್ರಾವಣದ ಕೃಷ್ಣಪಕ್ಷದಲ್ಲಿ ಬರುವ ಏಕಾವಶಿಯು ಹೆಸರೇನು? ಅದರಲ್ಲಿ ದೇವರಾವುದು? ವಿಧಿಯೇನು? ಅದರಿಂದ ಬರುವ ಪುಣ್ಯವೇನು? ಹೇಳು.

೪ ಬ್ರಹ್ಮನು ಹೇಳಿದನು–ಎಲೈ ನಾರದನೆ! ಲೋಕದ ಹಿತದ ರೀತಿಯಿಂದ ನಿನಗೆ ಹೇಳುತ್ತೇನೆ. ಕೇಳು. ಶ್ರಾವಣ ಕೃಷ್ಣೈಕಾದಶಿಗೆ ಕಾಮಿಕಾ ಏಕಾದಶಿಯೆಂದು ಹೆಸರು.

೫-೬. ಆ ಏಕಾದಶಿಯ ಸ್ಮರಣೆಯಿಂದಲೇ ವಾಜಪೇಯ ಯಾಗದ ಫಲವು ಬರುತ್ತದೆ. ಆ ಏಕಾದಶಿಯಲ್ಲಿ ಶಂಖ ಚಕ್ರ ಗದಾಧರನಾದ ವಿಷ್ಣುವು ಎಚ್ಚರದಿಂದಿರುವನು. ಶ್ರೀಧರನೂ ವಿಷ್ಣುವೂ ಮಾಧವನೂ ಮಧುಸೂದನನೂ ಆದ ಸ್ವಾಮಿಯನ್ನು ಆದಿನ ಪೂಜೆಮಾಡಿ ಧ್ಯಾನಿಸಿದರೆ ಅವನ ಪುಣ್ಯಫಲವನ್ನು ಹೇಳುತ್ತೇನೆ. ಕೇಳು.

**ನ ಗಂಗಾಯಾಂ ನ ಕಾಶ್ಯಾಂ ಚ ನೈಮಿಷೇ ನ ಚ ಪುಷ್ಕರೇ ।**
**ಯತ್ಫಲಂ ಸಮವಾಪ್ನೋತಿ ತತ್ಫಲಂ ಕೃಷ್ಣಪೂಜನಾತ್ ॥ ೭ ॥**

**ಗೋದಾವರ್ಯಾಂ ಗುರೌ ಸಿಂಹೇ ವ್ಯತೀಪಾತೇ ಚ ದಂಡಕೇ ।**
**ಯತ್ಫಲಂ ಸಮವಾಪ್ನೋತಿ ತತ್ಫಲಂ ಕೃಷ್ಣಪೂಜನಾತ್ ॥ ೮ ॥**

**ಸಸಾಗರವನೋಪೇತಾಂ ಯೋ ದದಾತಿ ವಸುಂಧರಾಂ ।**
**ಕಾಮಿಕಾವ್ರತಕಾರೀ ಚ ಉಭೌ ಸಮಫಲೌ ಸ್ಮೃತೌ ॥ ೯ ॥**

**ಪ್ರಸೂಯಮಾನಾಂ ಯೋ ಧೇನುಂ ದದ್ಯಾತ್ಸೋಪಸ್ಕರಾಂ ನರಃ ।**
**ತತ್ಫಲಂ ಸಮವಾಪ್ನೋತಿ ಕಾಮಿಕಾವ್ರತಕಾರಕಃ ॥ ೧೦ ॥**

**ಶ್ರಾವಣೇ ಶ್ರೀಧರಂ ದೇವಂ ಪೂಜಯೇದ್ಯೋ ನರೋತ್ತಮ ।**
**ತೇನೈವ ಪೂಜಿತಾ ದೇವಾ ಗಂಧರ್ವೋರಗಪನ್ನಗಾಃ ॥ ೧೧ ॥**

---

೭. ಗಂಗೆಯಲ್ಲಾಗಲೀ ಕಾಶಿಯಲ್ಲಾಗಲಿ ನೈಮಿಷದಲ್ಲಾಗಲಿ ಪುಷ್ಕರದಲ್ಲಾಗಲಿ ಆ ಫಲವು ಬರುವುದಿಲ್ಲ. ಅಂತಹ ಪುಣ್ಯವನ್ನು ಆ ಏಕಾದಶಿಯ ದಿವಸ ಕೃಷ್ಣಪೂಜೆಯನ್ನು ಮಾಡಿದರೆ ಬರುತ್ತದೆ.

೮. ಗುರುವು ಸಿಂಹರಾಶಿಯನ್ನು ಹೊಂದಿರುವಾಗ ಗೋದಾವರಿಯಲ್ಲಿಯೂ ವ್ಯತೀಪಾತದಲ್ಲಿ ದಂಡಕವನದಲ್ಲಿಯೂ ಸ್ನಾನಮಾಡಿದರೆ ಬರುವ ಪುಣ್ಯವನ್ನು ಈ ಶ್ರಾವಣ ಕೃಷ್ಣ ಏಕಾದಶಿಯನ್ನು ಆಚರಿಸುವುದರಿಂದ ಬರುತ್ತದೆ.

೯. ಸಮುದ್ರದೊಡನೆ ಕೂಡಿದ ಭೂಮಿಯನ್ನು ದಾನಮಾಡಿದರೆ ಯಾವ ಪುಣ್ಯವು ಬರುತ್ತದೆಯೊ ಆ ಪುಣ್ಯವೂ ಕಾಮಿಕಾವ್ರತವನ್ನು ಮಾಡಿದವನ ಪುಣ್ಯವೂ ಸಮವೆಂದು ಹೇಳಿದೆ.

೧೦. ಯಾವನು ಕರುಹಾಕುತ್ತಿರುವ ಹಸುವನ್ನು ಅದಕ್ಕೆ ಬೇಕಾದ ಸಾಮುಗ್ರಿಗಳೊಡನೆ ದಾನಕೊಡುತ್ತಾನೆಯೋ ಆ ಫಲವನ್ನು ಈ ಕಾಮಿಕೈಕಾದಶಿ ವ್ರತವನ್ನು ಮಾಡಿವನು ಹೊಂದುತ್ತಾನೆ.

೧೧. ಶ್ರಾವಣದಲ್ಲಿ ಶ್ರೀಧರನನ್ನು ಪೂಜಿಸಿದವನು ದೇವತೆಗಳನ್ನೂ ಗಂಧರ್ವರನ್ನೂ ಉರಗರನ್ನೂ ಪನ್ನಗರನ್ನೂ ಪೂಜಿಸಿದಂತಾಗುತ್ತಾನೆ.

ತಸ್ಮಾತ್ಸರ್ವಪ್ರಯತ್ನೇನ ಕಾಮಿಕಾದಿವಸೇ ಹರಿಃ ।
ಪೂಜನೀಯೋ ಯಥಾಶಕ್ತಿ ಮಾನುಷ್ಯೈಃ ಪಾಪಭೀರುಭಿಃ ॥ ೧೨ ॥

ಯೇ ಸಂಸಾರಾರ್ಣವೇ ಮಗ್ನಾಃ ಪಾಪಪಂಕಸಮಾಕುಲೇ ।
ತೇಷಾಮುದ್ಧಾರಣಾರ್ಥಾಯ ಕಾಮಿಕಾವ್ರತಮುತ್ತಮಂ ॥ ೧೩ ॥

ನಾತಃ ಪರತರಾ ಕಾಚಿತ್ ಪವಿತ್ರಾ ಪಾಪಹಾರಿಣೀ ।
ಏವಂ ನಾರದ ಜಾನೀಹಿ ಸ್ವಯಮಾಹ ಪರೋ ಹರಿಃ ॥ ೧೪ ॥

ಅಧ್ಯಾತ್ಮವಿದ್ಯಾನಿರತೈರ್ಯತ್ಫಲಂ ಪ್ರಾಪ್ಯತೇ ನರೈಃ ।
ತತೋ ಬಹುತರಂ ವಿದ್ಧಿ ಕಾಮಿಕಾವ್ರತಸೇವಿನಾಂ ॥ ೧೫ ॥

ರಾತ್ರೌ ಜಾಗರಣಂ ಕೃತ್ವಾ ಕಾಮಿಕಾವ್ರತಕೃನ್ನರಃ ।
ನ ಪಶ್ಯತಿ ಯಮಂ ರೌದ್ರಂ ನೈವ ಗಚ್ಛತಿ ದುರ್ಗತಿಂ ॥ ೧೬ ॥

---

೧೨. ಆದುದರಿಂದ ಪಾಪಕ್ಕೆ ಹೆದರಿರುವವರು ಕಾಮಿಕೈಕಾದಶಿಯ ದಿವಸ ದಲ್ಲಿ ಸರ್ವಪ್ರಯತ್ನದಿಂದಲೂ ಶ್ರೀ ವಿಷ್ಣುವನ್ನು ಪೂಜಿಸಬೇಕು.

೧೩. ಪಾಪಕರ್ಮಗಳಿಂದಲೇ ಕೂಡಿರುವ ಈ ಸಂಸಾರವೆಂಬ ಸಮುದ್ರ ದಲ್ಲಿ ಮುಳುಗಿರುವವರನ್ನು ಉದ್ಧಾರಮಾಡುವುದಕ್ಕೋಸ್ಕರವೇ ಈ ಕಾಮಿಕೈಕಾ ದಶಿಯ ವ್ರತವು ಹುಟ್ಟಿರುವುದು.

೧೪. ಈ ಕಾಮಿಕಾ ಏಕಾದಶಿಯ ವ್ರತಕ್ಕಿಂತಲೂ ಪವಿತ್ರವೂ ಪಾಪಹಾರ ಕವೂ ಆದುದು ಮತ್ತೊಂದಿಲ್ಲ. ಎಂಬದಾಗಿ ಎಲೈ ನಾರದನೇ! ತಿಳಿದುಕೋ. ಹೀಗೆಂದು ಹರಿಯೇ ಹೇಳಿದ್ದಾನೆ.

೧೫. ವೇದಾಂತವಿದ್ಯೆಯನ್ನು ಓದಿ ಅದರಲ್ಲಿ ಅನುಷ್ಠಾನಮಾಡುವವರಿಗೆ ಯಾವ ಫಲವು ಬರುತ್ತದೆಯೋ ಅದಕ್ಕಿಂತಲೂ ಹೆಚ್ಚಾದ ಫಲವು ಈ ಕಾಮಿಕೈಕಾ ದಶಿಯ ವ್ರತಗಳಿಗೆ ಬರುತ್ತದೆ.

೧೬. ಈ ಕಾಮಿಕೈಕಾದಶಿಯ ವ್ರತವನ್ನು ಮಾಡುವವನು ರಾತ್ರಿಯಲ್ಲಿ ಜಾಗರಣೆಯನ್ನು ಮಾಡಿದರೆ ಅವನು ಯಮನನು ನೋಡುವುದೂ ಇಲ್ಲ. ನರಕ ವನ್ನು ಹೊಂದುವುದೂ ಇಲ್ಲ.

ನ ಪಶ್ಯತಿ ಕುಯೋನಿಂ ಚ ಕಾಮಿಕಾವ್ರತಸೇವನಾತ್ ।
ಕಾಮಿಕಾಯಾ ವ್ರತೇ ಚೀರ್ಣೇ ಕೈವಲ್ಯಂ ಯೋಗಿನೋ ಗತಾಃ ॥ ೧೭ ॥

ತಸ್ಮಾತ್ಸರ್ವಪ್ರಯತ್ನೇನ ಕರ್ತವ್ಯಾ ನಿಯತಾತ್ಮಭಿಃ ।
ತುಳಸೀಪ್ರಭವೈಃ ಪುತ್ರೈಃ ಯೋ ನರಃ ಪೂಜಯೇದ್ಧರಿಂ ॥ ೧೮ ॥

ನ ಸ ಲಿಪ್ಯತಿ ಪಾಪೇನ ಪದ್ಮಪತ್ರಮಿವಾಂಭಸಾ ।
ಸುವರ್ಣಭಾರಮೇಕಂ ತು ರಜತಂ ಚ ಚತುರ್ಗುಣಂ ॥ ೧೯ ॥

ತತ್ಫಲಂ ಸಮವಾಪ್ನೋತಿ ತುಳಸೀದಳಪೂಜನಾತ್ ।
ರಕ್ತಮೌಕ್ತಿಕವೈಡೂರ್ಯಪ್ರವಾಳಾದಿಭಿರರ್ಚಿತಃ ॥ ೨೦ ॥

ನ ತುಷ್ಯತಿ ತಥಾ ವಿಷ್ಣುಸ್ತುಲಸೀದಳತೋ ಯಥಾ ।
ತುಲಸೀ ಮಂಜರೀಭಿರ್ಯಃ ಪೂಜಿತೋ ಯೇನ ಕೇಶವಃ ।
ಆಜನ್ಮ ಪಾತಕಂ ತಸ್ಯ ನಿಶ್ಚಯಾದ್ಯಾತಿ ಸಂಕ್ಷಯಂ ॥ ೨೧ ॥

---

೧೭. ಅಂತಹವನು ಕೆಟ್ಟಜನ್ಮದಲ್ಲಿಯೂ ಹುಟ್ಟುವುದಿಲ್ಲ. ಈ ಕಾಮಿಕಾ ವ್ರತವನ್ನು ಆಚರಿಸಿಯೇ ಯೋಗಿಗಳು ಕೈವಲ್ಯವನ್ನು ಹೊಂದಿರುವುದು.

೧೮. ಆದುದರಿಂದ ಇಂದ್ರಿಯನಿಗ್ರಹ ಮಾಡಿಕೊಂಡು ಆ ಏಕಾದಶಿಯ ದಿವಸ ತುಳಸಿಯ ದಳಗಳಿಂದ ಹರಿಯನ್ನು ಪೂಜಿಸಬೇಕು. ಅಂತಹವನು ಪದ್ಮದ ಎಲೆಯು ನೀರಿನಿಂದ ಅಂಟಿಕೊಳ್ಳದಿರುವಂತೆ ಪಾಪಗಳಿಂದಲೇ ಪೀಡಿತನಾಗುವುಲ್ಲ.

೧೯. ಒಂದುಮಣ ಚಿನ್ನವನ್ನು ದಾನಮಾಡಿದರಾಗಲೀ ನಾಲ್ಕುಮಣ ಬೆಳ್ಳಿಯನ್ನು ದಾನಮಾಡಿದರಾಗಲೀ ವಿಷ್ಣುವಿಗೆ ತುಳಸಿಯ ಪೂಜೆಯನ್ನು ಮಾಡಿದಷ್ಟು ಪುಣ್ಯವನ್ನು ಮನುಜನು ಹೊಂದುವುದಿಲ್ಲ.

೨೦. ತುಳಸಿಯ ದಳದಿಂದ ವಿಷ್ಣುವು ಸಂತೋಷಪಡುವಂತೆ ಹವಳ ಮುತ್ತು ವೈಡೂರ್ಯ ವಜ್ರ ಕೆಂಪುಗಳಾವುದರಿಂದ ಪೂಜೆಮಾಡಿದರೂ ಸಂತೋಷಪಡುವುದಿಲ್ಲ.

೨೧. ಯಾವನು ತುಳಸಿಯ ಮಂಜರಿಗಳಿಂದ ಕೇಶವನನ್ನು ಪೂಜಿಸುವನೋ ಅವನು ಜನ್ಮಜನ್ಮಾಂತರಗಳಿಂದ ಮಾಡಿದ ಪಾಪಗಳನ್ನು ಕಳೆದುಕೊಳ್ಳುತ್ತಾನೆ. ಇದು ನಿಶ್ಚವು.

ಯಾ ದೃಷ್ಟಾ ನಿಖಿಲಾಘಸಂಘಶಮನೀ ಸ್ಪೃಷ್ಟಾ ವಪುಷ್ಪಾವನೀ ।
ರೋಗಾಣಾಮಭಿವಂದಿತಾ ನಿರಸನೀ ಸಿಕ್ತಾಂತಕತ್ರಾಸಿನೀ ।
ಪ್ರತ್ಯಾಸಕ್ತಿ ವಿಧಾಯಿನೀ ಭಗವತಃ ಕೃಷ್ಣಸ್ಯ ಸಂರೋಪಿತಾ ।
ನ್ಯಸ್ತಾ ತಚ್ಚರಣೇ ವಿಮುಕ್ತಿ ಫಲದಾ ತಸ್ಯೈ ತುಲಸ್ಯೈ ನಮಃ || ೨೨ ||

ದೀಪಂ ದದಾತಿ ಯೋ ಮರ್ತ್ಯೋ ದಿವಾ ರಾತ್ರೌ ಹರೇರ್ದಿನೇ ।
ತಸ್ಯ ಪುಣ್ಯಸ್ಯ ಸಂಖ್ಯಾಂ ತು ಚಿತ್ರಗುಪ್ತೋ ನ ವೇತ್ಯಲಂ || ೨೩ ||

ಕೃಷ್ಣಾಗ್ರೇ ದೀಪಕೋ ಯಸ್ಯ ಜ್ವಲತ್ಯೇಕಾದಶೀದಿನೇ ।
ಪಿತರಸ್ತಸ್ಯ ತೃಪ್ಯಂತಿ ಹ್ಯಮೃತೇನ ದಿವಿ ಸ್ಥಿತಾಃ || ೨೪ ||

ಘೃತೇನ ದೀಪಂ ಪ್ರಜ್ವಾಲ್ಯ ತಿಲತೈಲೇನ ವಾ ಪುನಃ ।
ಪ್ರಯಾತಿ ಸೂರ್ಯಲೋಕಂ ಚ ದೀಪಕೋಟಿಶತಾರ್ಚಿತಃ || ೨೫ ||

---

೨೨. ಈ ತುಳಸಿಯನ್ನು ನೋಡಿದರೇನೇ ಎಲ್ಲಾ ಪಾಪಗಳೂ ಹೋಗುತ್ತವೆ. ಮುಟ್ಟಿದರೆ ದೇಹವನ್ನು ಪಾವನಮಾಡುತ್ತದೆ. ನಮಸ್ಕರಿಸಿದರೆ ರೋಗಗಳು ಹೋಗುತ್ತವೆ. ಅದಕ್ಕೆ ನೀರನ್ನು ಹಾಕಿದರೆ ಯಮನು ಹೆದರಿಕೊಳ್ಳುತ್ತಾನೆ. ಬೆಳೆಸಿದರೆ ಭಗವಂತನ ಸಮೀಪವನ್ನು ಹೊಂದಿಸುತ್ತದೆ. ಆ ವಿಷ್ಣುವಿನ ಪಾದಗಳಲ್ಲಿಟ್ಟರೆ ಮನುಷ್ಯನಿಗೆ ಮುಕ್ತಿಯನ್ನು ಕೊಡುತ್ತದೆ. ಅಂತಹ ತುಳಸಿಗೆ ನಮಸ್ಕಾರವು.

೨೩. ಹರಿವಾಸರದ ದಿನದಲ್ಲಿ ಕೃಷ್ಣನ ಎದುರಿನಲ್ಲಿ ಹಗಲೂ ರಾತ್ರಿಯೂ ದೀಪವನ್ನು ಹಚ್ಚಿದ್ದರೆ ಬರುವ ಪುಣ್ಯವನ್ನು ಚಿತ್ರಗುಪ್ತನೂ ಲೆಕ್ಕಮಾಡಲಾರನು.

೨೪. ಏಕಾದಶಿಯ ದಿವಸದಲ್ಲಿ ಕೃಷ್ಣನ ಎದುರಿಗೆ ದೀಪವಿದ್ದರೆ ಹಚ್ಚಿದವನ ಪಿತೃಗಳು ತೃಪ್ತರಾಗಿ ಸ್ವರ್ಗವನ್ನು ಹೊಂದುತ್ತಾರೆ.

೨೫. ತುಪ್ಪದಿಂದಲಾಗಲೀ ಎಣ್ಣೆಯಿಂದಾಗಲೀ ವಿಷ್ಣುವಿನ ಎದುರಿಗೆ ದೀಪವನ್ನು ಹಚ್ಚಿದರೆ ಅವನು ಅನೇಕ ದೀಪಗಳಿಂದ ಗೌರವಿಸಲ್ಪಟ್ಟು ಸೂರ್ಯಲೋಕಕ್ಕೆ ಹೋಗುತ್ತಾನೆ.

|| ಶ್ರೀ ಕೃಷ್ಣ ಉವಾಚ ||

ಅಯಂ ತವಾಗ್ರೇ ಕಥಿತಃ ಕಾಮಿಕಾಮಹಿಮಾ ಮಯಾ ।
ಅತೋ ನರೈಃ ಪ್ರಕರ್ತವ್ಯಾ ಸರ್ವಪಾತಕಹಾರಿಣೀ || ೨೬ ||

ಬ್ರಹ್ಮಹತ್ಯಾಪಹರಣೀ ಭ್ರೂಣಹತ್ಯಾವಿನಾಶಿನೀ ।
ತ್ರಿದಿವಸ್ಥಾನದಾತ್ರೀ ಚ ಮಹಾಪುಣ್ಯಫಲಪ್ರದಾ || ೨೭ ||

ಶ್ರುತ್ವಾ ಮಾಹಾತ್ಮ್ಯಮೇತಸ್ಯಾ ನರಶ್ಶ್ರದ್ಧಾಸಮನ್ವಿತಃ ।
ವಿಷ್ಣುಲೋಕಮವಾಪ್ನೋತಿ ಸರ್ವಪಾಪೈಃ ಪ್ರಮುಚ್ಯತೇ || ೨೮ ||

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಪತಿ ನಾರದ ಸಂವಾದಾನ್ತರ್ಗತ ಕೃಷ್ಣ ಯುಧಿಷ್ಠಿರ ಸಂವಾದೇ ಶ್ರಾವಣ ಕೃಷ್ಣ ಕಾಮಿಕೈಕಾದಶೀ ಮಾಹಾತ್ಮ್ಯಂ ನಾಮ ಷಟ್‌ಪಂಚಾಶತ್ತಮೋಽಧ್ಯಾಯಸ್ಸಮಾಪ್ತಃ

---

೨೬. ಕೃಷ್ಣನು ಹೇಳಿದನು– ಈ ಕಾಮಿಕೈಕಾದಶಿಯ ಮಹಿಮೆಯನ್ನು ನಿನ್ನೆದುರಿಗೆ ಹೇಳಿದ್ದೇನೆ. ಆದುದರಿಂದ ಈ ವ್ರತವನ್ನು ಮಾಡಬೇಕು. ಪಾಪಗಳೆಲ್ಲವೂ ಹೋಗುತ್ತವೆ.

೨೭. ಈ ಏಕಾದಶಿಯು ಬ್ರಹ್ಮಹತ್ಯೆಯನ್ನೂ ಭ್ರೂಣಹತ್ಯೆಯನ್ನೂ ನಾಶ ಮಾಡುತ್ತದೆ. ಮತ್ತು ಮಹಾಪುಣ್ಯವನ್ನು ಕೊಟ್ಟು ಸ್ವರ್ಗವನ್ನು ಸೇಸೆಸುತ್ತದೆ.

೨೮. ಯಾವನು ಶ್ರದ್ಧೆಯಿಂದ ಈ ಏಕಾದಶಿಯ ಮಹಿಮೆಯನ್ನು ತಿಳಿಯುತ್ತಾನೆಯೋ ಅವನು ಸರ್ವಪಾಪಗಳನ್ನೂ ಕಳೆದುಕೊಂಡು ವಿಷ್ಣುಲೋಕದಲ್ಲಿ ಸುಖಿಸುತ್ತಾನೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಪತಿ ನಾರದರ ಸಂವಾದಾಂತರ್ಗತವಾದ ಕೃಷ್ಣ ಯುಧಿಷ್ಠಿರರ ಸಂವಾದದಲ್ಲಿ ಶ್ರಾವಣ ಕೃಷ್ಣ ಕಾಮಿಕೈಕಾದಶೀ ಮಹಿಮೆ ಎಂಬ ಐವತ್ತಾರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-x-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಸಪ್ತಪಂಚಾಶತ್ತಮೋಽಧ್ಯಾಯಃ ॥



॥ ಯುಧಿಷ್ಠಿರ ಉವಾಚ ॥

ಶ್ರಾವಣಸ್ಯ ಸಿತೇ ಪಕ್ಷೇ ಕಿನ್ನಾಮ್ನ್ಯೇಕಾದಶೀ ಭವೇತ್ ।
ಕಥಯಸ್ವ ಪ್ರಸಾದೇನ ಮಮಾಗ್ರೇ ಮಧುಸೂದನ ॥ ೧ ॥

॥ ಶ್ರೀ ಕೃಷ್ಣ ಉವಾಚ ॥

ಶೃಣುಷ್ವಾವಹಿತೋ ರಾಜನ್ ಕಥಾಂ ಪಾಪಹರಾಂ ಪರಾಂ ।
ಯಸ್ಯಾಃ ಶ್ರವಣಮಾತ್ರೇಣ ವಾಜಪೇಯಫಲಂ ಲಭೇತ್ ॥ ೨ ॥

ದ್ವಾಪರಸ್ಯ ಯುಗಸ್ಯಾದೌ ಪುರಾ ಮಾಹಿಷ್ಮತೀಪುರೇ ।
ರಾಜಾ ಮಹೀಜಿದಾಖ್ಯಾತೋ ರಾಜ್ಯಂ ಪಾಲಯತಿ ಸ್ವಕಂ ॥ ೩ ॥

---

## ಐವತ್ತೇಳನೆಯ ಅಧ್ಯಾಯವು



೧. ಯುಧಿಷ್ಠಿರನು ಹೇಳಿದನು– ಶ್ರಾವಣಮಾಸದ ಶುದ್ಧದಲ್ಲಿ ಬರುವ ಏಕಾದಶಿಯ ಹೆಸರೇನು ? ಅದನ್ನು ದಯವಿಟ್ಟು ನನ್ನೆದುರಿಗೆ ಹೇಳು.

೨. ಶ್ರೀ ಕೃಷ್ಣನು ಹೇಳಿದನು–ಅದನ್ನು ಹೇಳುತ್ತೇನೆ. ಕೇಳು. ಅದು ಪಾಪಹರವಾದುದು. ಅದನ್ನು ಕೇಳುವುದರಿಂದಲೇ ವಾಜಪೇಯ ಫಲವು ಬರುತ್ತದೆ

೩. ದ್ವಾಪರಯುಗದ ಆದಿಯಲ್ಲಿ ಪೂರ್ವದಲ್ಲಿ ಮಾಹಿಷ್ಮತಿ ಎಂಬ ಊರಿದ್ದಿತು. ಅದರಲ್ಲಿ ಮಹೀಜಿತ್ತೆಂಬ ರಾಜನು ರಾಜ್ಯವಾಳುತ್ತಿದ್ದನು.

ಪುತ್ರಹೀನಸ್ಯ ತಸ್ಯೈವ ನ ತದ್ರಾಜ್ಯಂ ಸುಖಪ್ರದಂ ।
ಅಪುತ್ರಸ್ಯ ಸುಖಂ ನಾಸ್ತಿ ಇಹಲೋಕೇ ಪರತ್ರ ಚ ॥ ೪ ॥

ಚಿಂತಯಾನಸ್ಯ ತಸ್ಯೈವಂ ಕಾಲೋ ಬಹುತರೋ ಗತಃ ।
ನ ಪ್ರಾಪ್ತಶ್ಚ ಸುತೋ ರಾಜ್ಞಾ ಸರ್ವಸೌಖ್ಯಪ್ರದೋ ನೃಣಾಂ ॥ ೫ ॥

ದೃಷ್ಟ್ವಾತ್ಮಾನಂ ಪ್ರವಯಸಂ ರಾಜಾ ಚಿಂತಾಪರೋಽಭವತ್ ।
ತದಾಗತಃ ಪ್ರಜಾಮಧ್ಯೇ ಚೇದಂ ವಚನಮಬ್ರವೀತ್ ॥ ೬ ॥

॥ ರಾಜೋವಾಚ ॥

ಇಹ ಜನ್ಮನಿ ಭೋ ಲೋಕಾ ನ ಮಯಾ ಪಾತಕಂ ಕೃತಂ ।
ಅನ್ಯಾಯೋಪಾರ್ಜಿತಂ ವಿತ್ತಂ ಕ್ಷಿಪ್ತಂ ಕೋಶೇ ಮಯಾ ನ ಹಿ ॥ ೭ ॥

ಬ್ರಹ್ಮಸ್ವಂ ದೇವ ದ್ರವಿಣಂ ನ ಗೃಹೀತಂ ಮಯಾ ಕ್ವಚಿತ್ ।
ಪುತ್ರವತ್ಪಾಲಿತೋ ಲೋಕೋ ಧರ್ಮೇಣ ವಿಜಿತಾ ಮಹೀ ॥ ೮ ॥

ದುಷ್ಟೇಷು ಪತಿತೋ ದಂಡೋ ಬಂಧುಪುತ್ರೋಪಮೇಷ್ವತಿ ।
ಶಿಷ್ಟಾಸ್ತು ಪೂಜಿತಾ ನಿತ್ಯಂ ನ ದ್ವೇಷ್ಯಾಶ್ಚ ಮಯಾ ಜನಾಃ ॥ ೯ ॥

---

೪-೫. ಮಕ್ಕಳಿಲ್ಲದುದರಿಂದ ಅವನಿಗೆ ರಾಜ್ಯವು ಸುಖಿಸಲಿಲ್ಲ. ಮಕ್ಕಳು ಇಲ್ಲದವನಿಗೆ ಈಲೋಕ ಪರಲೋಕಗಳಲ್ಲಿ ಸುಖವಿಲ್ಲ. ಹೀಗೆಂದು ಯೋಚಿಸುತ್ತ ಇರುವಷ್ಟರಲ್ಲಿಯೇ ಅವನಿಗೆ ಕಾಲವು ಬಹುವಾಗಿ ಕಳೆದುಹೋಯಿತು. ಕೊನೆಗೂ ಸರ್ವ ಸೌಖ್ಯವನ್ನೂ ಕೊಡುವ ಮಗುವು ರಾಜನಿಗೆ ಉಂಟಾಗಲೇ ಇಲ್ಲ.

೬. ರಾಜನು ತನಗೆ ವಯಸ್ಸಾದುದನ್ನು ತಿಳಿದು ಬಹು ಚಿಂತೆಗೊಳಗಾಗಿ ಸಭೆಯನ್ನು ಸೇರಿಸಿ ಅಲ್ಲಿ ಇಂತೆಂದನು.

೭-೯. ರಾಜನು ಹೇಳಿದನು– ಎಲೈ ಜನರಿರಾ ! ಈ ಜನ್ಮದಲ್ಲಿ ನಾನು ಪಾಪವನ್ನು ಮಾಡಿಲ್ಲ. ಅನ್ಯಾಯದಿಂದ ಹಣವನ್ನು ಸಂಪಾದಿಸಿ ಕೋಶಕ್ಕೆ ಹಾಕಿಲ್ಲ. ಬ್ರಾಹ್ಮಣರ ಸ್ವತ್ತು, ದೇವರ ಸ್ವತ್ತುಗಳನ್ನು ಅಪಹರಿಸಿಲ್ಲ. ಪ್ರಜೆಗಳನ್ನು ಮಕ್ಕಳಂತೆ ಕಾಪಾಡಿದ್ದೇನೆ. ಧರ್ಮದಿಂದ ಭೂಮಿಯನ್ನು ಜಯಿಸಿದ್ದೇನೆ. ದುಷ್ಟರನ್ನು ಅವರು ಬಂಧುಗಳಾಗಲೀ ಮಕ್ಕಳಿಗೆ ಸಮವಾದವರಾಗಲಿ ನೋಡದೆ ಶಿಕ್ಷಿಸಿದ್ದೇನೆ. ಯೋಗ್ಯರನ್ನು ಗೌರವಿಸುತ್ತಿದ್ದೇನೆ. ಯಾರನ್ನೂ ದ್ವೇಷಿಸುತ್ತಿಲ್ಲ.

ಇತ್ಯೇವಂ ಬ್ರುವತೋ ಮಾರ್ಗಂ ಧರ್ಮಯುಕ್ತಂ ದ್ವಿಜೋತ್ತಮಾಃ ।
ಕಸ್ಮಾನ್ಮಮ ಗೃಹೇ ಪುತ್ರೋ ನ ಜಾತಸ್ತದ್ವಿಮೃಶ್ಯತಾಂ ॥ ೧೦ ॥

॥ ಶ್ರೀ ಕೃಷ್ಣ ಉವಾಚ ॥

ಇತಿ ವಾಕ್ಯಂ ದ್ವಿಜಾಶ್ಶ್ರುತ್ವಾ ಸಪ್ರಜಾಸ್ಸಪುರೋಹಿತಾಃ ।
ಮಂತ್ರಯಿತ್ವಾ ನೃಪಹಿತಂ ಜಗ್ಮುಸ್ತೇ ಗಹನಂ ವನಂ ॥ ೧೧ ॥

ಇತಸ್ತತಶ್ಚ ಪಶ್ಯಂತಃ ಆಶ್ರಮಾನ್ ಋಷಿಸೇವಿತಾನ್ ।
ನೃಪತೇರ್ಹಿತಮಿಚ್ಛಂತೋ ದದೃಶುರ್ಮುನಿಸತ್ತಮಂ ॥ ೧೨ ॥

ತಪ್ಯಮಾನಂ ತಪೋ ಘೋರಂ ನಿರಾಲಂಬಂ ನಿರಾಮಯಂ ।
ನಿರಾಹಾರಂ ಜಿತಾತ್ಮಾನಂ ಜಿತಕ್ರೋಧಂ ಸನಾತನಂ ॥ ೧೩ ॥

ಲೋಮಶಂ ಧರ್ಮತತ್ವಜ್ಞಂ ಸರ್ವಶಾಸ್ತ್ರ ವಿಶಾರದಂ ।
ದೀರ್ಘಾಯುಷಂ ಮಹಾತ್ಮಾನಂ ಸಕೇಶಂ ಬ್ರಹ್ಮಸಮ್ಮಿತಂ ॥ ೧೪ ॥

---

೧೦. ಈರೀತಿಯಲ್ಲಿದ್ದರೂ ನನಗೇಕೆ ಮಕ್ಕಳಾಗಲಿಲ್ಲ ? ಎಲೈ ಬ್ರಾಹ್ಮಣರಿರಾ ! ನನಗೆ ಅದಕ್ಕೆ ಒಂದು ಮಾರ್ಗವನ್ನು ವಿಮರ್ಶಿಸಿ ಹೇಳಿರಿ.

೧೧. ಶ್ರೀಕೃಷ್ಣನು ಹೇಳಿದನು– ಆಗ ಬ್ರಾಹ್ಮಣರು ಅವನು ಹೇಳಿದುದನ್ನು ಕೇಳಿ ಪ್ರಜೆಗಳೂ, ಪುರೋಹಿತರೂ ಸೇರಿ ರಾಜನಿಗೆ ಅನುಕೂಲವಾಗುವಿಕೆಯನ್ನು ಯೋಚಿಸಿ ಎಲ್ಲರೂ ಕಾಡಿಗೆ ಹೋದರು.

೧೨. ಇತ್ತತ್ತ ಹುಡುಕುತ್ತ ಋಷಿಗಳ ಆಶ್ರಮಗಳನ್ನು ಹುಡುಕಿ ಕೊನೆಗೆ ಒಂದು ಋಷಿಯ ಆಶ್ರಮನ್ನು ನೋಡಿದರು.

೧೩–೧೪. ಅಲ್ಲಿ ಒಬ್ಬ ಋಷಿಯು ತಪಸ್ಸುಮಾಡುತ್ತಿದ್ದುದನ್ನು ಕಂಡರು. ಅವನು ಘೋರವಾಗಿ ತಪಸ್ಸುಮಾಡುತ್ತಿದ್ದನು. ಅವನ ದೇಹವಲ್ಲಿ ನಿಲ್ಲುವುದಕ್ಕೆ ಆಗಲೀ ಕೂರುವುದಕ್ಕೇ ಆಗಲಿ ಆಧಾರವನ್ನೇ ಹೊಂದಿರಲಿಲ್ಲ. ರೋಗವಿಲ್ಲದವನು. ಆಹಾರವನ್ನು ತೆಗೆದುಕೊಳ್ಳುತ್ತಿರಲಿಲ್ಲ. ಇಂದ್ರಿಯಗಳನ್ನು ಜಯಿಸಿದ್ದನು. ಕೋಪವನ್ನು ಬಿಟ್ಟಿದ್ದನು. ಬಹು ಹಳಬನು. ಧರ್ಮವನ್ನು ಬಲ್ಲವನು. ಶಾಸ್ತ್ರಗಳನ್ನೆಲ್ಲಾ ಬಲ್ಲವನು. ದೀರ್ಘಾಯುಸ್ಸುಳ್ಳವನು. ಮಹಾಮಹಿಮನು. ಕೇಶಗಳನ್ನು ಬಹುವಾಗಿ ಬೆಳೆಸಿದ್ದನು. ಬ್ರಹ್ಮನಂತಿದ್ದನು. ದೇಹವಲ್ಲೆಲ್ಲಾ ಕೂವಲುಗಳೇ ಹೆಚ್ಚಾಗಿದ್ದುವು.

ಕಲ್ಪೇ ಕಲ್ಪೇ ಗತೇ ತಸ್ಯ ಏಕಂ ಲೋಮ ವಿಶೀರ್ಯತೇ ।
ಅತೋ ಲೋಮಶನಾಮಾನಂ ತ್ರಿಕಾಲಜ್ಞಂ ಮಹಾಮುನಿಂ ।
ತಂ ದೃಷ್ಟ್ವಾ ಹರ್ಷಿತಾಸ್ಸರ್ವ ಊಚುಸ್ತೇ ಚ ಪರಸ್ಪರಂ ॥ ೧೫ ॥

॥ ಜನಾ ಊಚುಃ ॥

ಅಸ್ಮದ್ಭಾಗ್ಯವಶಾದೇವ ಪ್ರಾಪ್ತೋಽಯಂ ಮುನಿಸತ್ತಮಃ ॥ ೧೬ ॥

॥ ಶ್ರೀ ಕೃಷ್ಣ ಉವಾಚ ॥

ತಾಂಸ್ತಥಾ ಸ ಪ್ರಜಾ ವೀಕ್ಷ್ಯ ಉವಾಚ ಋಷಿಸತ್ತಮಃ ॥ ೧೭ ॥

॥ ಲೋಮಶ ಉವಾಚ ॥

ಕಿಮರ್ಥಮಿಹ ಸಂಪ್ರಾಪ್ತಾಃ ಕಥಯಧ್ವಂ ಸ್ವಕಾರಣಂ ।
ದರ್ಶನಾದ್ಧೃಷ್ಟಮನಸಃ ಸ್ತುವಂತಶ್ಚೈವ ಮಾಂ ಕಿಮು ॥ ೧೮ ॥

ಅಸಂಶಯಂ ಕರಿಷ್ಯಾಮಿ ಭವತಾಂ ಯದ್ಧಿತಂ ಭವೇತ್ ।
ಪರೋಪಕೃತಯೇ ಜನ್ಮ ಮಾದೃಶಾನಾಂ ನ ಸಂಶಯಃ ॥ ೧೯ ॥

---

೧೫. ಒಂದೊಂದು ಕಲ್ಪವು ಕಳೆದಾಗಲೂ ಅವನ ಒಂದೊಂದು ರೋಮವು ನಾಶವಾಗುತ್ತದೆ. ಆದುದರಿಂದಲೇ ಅವನಿಗೆ ಲೋಮಶನೆಂಬ ಹೆಸರು ಬಂದಿದ್ದಿತು. ಅವನು ತ್ರಿಕಾಲಜ್ಞಾನಿಯು. ಆ ಮಹಾಮುನಿಯನ್ನು ನೋಡಿ ಎಲ್ಲರೂ ಸಂತೋಷಗೊಂಡು ಒಬ್ಬರಿಗೊಬ್ಬರು ಹೀಗೆ ಮಾತನಾಡಿಕೊಂಡರು.

೧೬. ಜನಗಳು ಹೇಳಿದರು–ನಮ್ಮ ಭಾಗ್ಯದ ವಶದಿಂದಲೇ ಈ ಋಷಿಯು ನಮಗೆ ಸಿಕ್ಕಿದ್ದಾನೆ.

೧೭. ಶ್ರೀ ಕೃಷ್ಣನು ಹೇಳಿದನು–ಆಗ ಋಷಿಯು ಆ ಪ್ರಜೆಗಳನ್ನು ನೋಡಿ ಇಂತೆಂದನು.

೧೮–೧೯. ಲೋಮಶನು ಹೇಳಿದನು– ಎಲೈ ಜನಗಳಿರಾ! ಇಲ್ಲಿಗೇಕೆ ಬಂದಿರಿ? ಕಾರಣವನ್ನು ಹೇಳಿರಿ. ನನ್ನನ್ನು ನೋಡಿದಕೂಡಲೇ ಸಂತೋಷ ಗೊಂಡಿರುವಿರಿ. ನಿಮಗೆ ಬೇಕಾದುದನ್ನುಸಂಶಯವಿಲ್ಲದೆ ಮಾಡಿಕೊಡುತ್ತೇನೆ. ನಮ್ಮಂಥವರ ಜನ್ಮವು ಪರೋಪಕಾರಕ್ಕಾಗಿಯೇ ಇರುವುದು. ಸಂಶಯವಿಲ್ಲ.

|| ಜನಾ ಊಚುಃ ||

ಶ್ರೂಯತಾಂ ಅಭಿಧಾಸ್ಯಾಮೋ ವಯಮಾಗಮಕಾರಣಂ |
ಸಂಶಯಚ್ಛೇದನಾರ್ಥಾಯ ತವ ಸಾನ್ನಿಧ್ಯಮಾಗತಾಃ || ೨೦ ||

ಪದ್ಮಯೋನೇಃ ಪರತರಾತ್ತ್ವತ್ತಃ ಶ್ರೇಷ್ಠೋ ನ ವಿದ್ಯತೇ |
ಅತಃ ಕಾರ್ಯವಶಾತ್ಪ್ರಾಪ್ತಾಃ ಸಮೀಪಂ ಭವತೋ ವಯಂ || ೨೧ ||

ಮಹೀಜಿನ್ನಾಮ ರಾಜಾಸೌ ಪುತ್ರಹೀನೋಽಸ್ತಿ ಸಾಂಪ್ರತಂ |
ವಯಂ ತಸ್ಯ ಪ್ರಜಾ ಬ್ರಹ್ಮನ್ ಪುತ್ರವತ್ಪಾಲಿತಾಸ್ತಥಾ || ೨೨ ||

ತಂ ಪುತ್ರರಹಿತಂ ದೃಷ್ಟ್ವಾ ತಸ್ಯ ದುಃಖೇನ ದುಃಖಿತಾಃ |
ತಪಃ ಕರ್ತುಮಿಹಾಯಾತಾ ಮತಿಂ ಕೃತ್ವಾ ತು ನೈಷ್ಠಿಕೀಂ || ೨೩ ||

ತಸ್ಯ ಭಾಗ್ಯೇನ ದೃಷ್ಟೋಽಸಿ ಹ್ಯಸ್ಮಾಭಿಸ್ತ್ವಂ ದ್ವಿಜೋತ್ತಮ |
ಮಹತಾಂ ದರ್ಶನೇನೈವ ಕಾರ್ಯಸಿದ್ಧಿರ್ಭವೇನ್ನೃಣಾಂ ||
ಉಪದೇಶಂ ವದ ಮುನೇ ರಾಜ್ಞಃ ಪುತ್ರೋ ಯಥಾ ಭವೇತ್ || ೨೪ ||

---

೨೦. ಜನರು ಹೇಳಿದರು– ನಾವು ಬಂದಿರುವ ಕಾರಣವನ್ನು ಹೇಳುತ್ತೇವೆ. ಕೇಳಿರಿ. ನಮಗೆ ಒಂದು ಸಂಶಯವು ಬರಲು ತಮ್ಮ ಬಳಿಗೆ ಬಂದಿದ್ದೇವೆ.

೨೧. ಉತ್ತಮನಾದ ಬ್ರಹ್ಮನೊಬ್ಬನನ್ನು ಬಿಟ್ಟರೆ ನಿನಗಿಂತಲೂ ಶ್ರೇಷ್ಠರಾದವರು ಮತ್ತೊಬ್ಬರಿಲ್ಲವು. ಆದುದರಿಂದ ಒಂದು ಕೆಲಸಕ್ಕೋಸ್ಕರ ನಿನ್ನ ಸಮೀಪಕ್ಕೆ ಬಂದಿದ್ದೇವೆ.

೨೨. ಈಗ ಮಹೀಜಿತ್ತೆಂಬ ಒಬ್ಬ ರಾಜನಿರುವನು. ಅವನಿಗೆ ಮಕ್ಕಳಿಲ್ಲವು. ನಾವು ಅವನ ಪ್ರಜೆಗಳು. ನಮ್ಮನ್ನು ಅವನು ಮಕ್ಕಳಂತೆ ಕಾಪಾಡುತ್ತಿದ್ದಾನೆ.

೨೩. ಅವನಿಗೆ ಮಕ್ಕಳಿಲ್ಲದಿರುವುದರಿಂದ ಬಹು ದುಃಖಗೊಂಡಿರುವನು. ಅವನ ದುಃಖದಿಂದ ನಮಗೂ ದುಃಖವುಂಟಾಗಿದೆ. ಅದರಿಂದ ತಪಸ್ಸನ್ನು ಮಾಡಬೇಕೆಂದು ಒಂದೇ ಬುದ್ಧಿಯನ್ನು ಇಟ್ಟುಕೊಂಡು ಇಲ್ಲಿಗೆ ಬಂದಿದ್ದೇವೆ.

೨೪. ಅವನ ಅದೃಷ್ಟ ವಿಶೇಷದಿಂದ ನಿನ್ನನ್ನು ನಾವು ನೋಡಿದೆವು. ಮಹಾತ್ಮರ ದರ್ಶನದಿಂದಲೇ ಕೆಲಸವು ಸಿದ್ಧಿಸುತ್ತದೆ. ಆದುದರಿಂದ ಆ ರಾಜನಿಗೆ ಮಕ್ಕಳಾಗುವಂತೆ ಯಾವುದಾದರೂ ಒಂದು ವಿಷಯವನ್ನು ಉಪದೇಶಿಸು.

|| ಶ್ರೀಕೃಷ್ಣ ಉವಾಚ ||

ಇತಿ ತೇಷಾಂ ವಚಶ್ಶ್ರುತ್ವಾ ಮುಹೂರ್ತಂ ಧ್ಯಾನಮಾಸ್ಥಿತಃ ।
ಪ್ರತ್ಯುವಾಚ ಮುನಿರ್ಜ್ಞಾತ್ವಾ ತಸ್ಯ ಜನ್ಮ ಪುರಾತನಂ || ೨೫ ||

|| ಲೋಮಶ ಉವಾಚ ||

ಪುರಾ ಜನ್ಮನಿ ವೈಶ್ಯೋಽಯಂ ಧನಹೀನೋ ನೃಶೋಷಕೃತ್ ।
ವಾಣಿಜ್ಯಕರ್ಮನಿರತೋ ಗ್ರಾಮಾದ್ಗ್ರಾಮಾನ್ತರಂ ಗತಃ || ೨೬ ||

ಜ್ಯೇಷ್ಠೇ ಮಾಸಿ ಸಿತೇ ಪಕ್ಷೇ ದಶಮೀದಿವಸೇ ತಥಾ ।
ಮಧ್ಯಗೇ ದ್ಯುಮಣೌ ಪ್ರಾಪ್ತೇ ಗ್ರಾಮಸೀಮ್ನಿ ಜಲಾಶಯಂ || ೨೭ ||

ಕೂಪಿಕಾಂ ಸಜಲಾಂ ದೃಷ್ಟ್ವಾ ಜಲಪಾನೇ ಮನೋ ದಧೇ ।
ಸದ್ಯಸ್ತತಸ್ಸವತ್ಸಾ ಚ ಧೇನುಸ್ತತ್ರ ಸಮಾಗತಾ || ೨೮ ||

---

೨೫. ಶ್ರೀ ಕೃಷ್ಣನು ಹೇಳಿದನು–ಹೀಗೆ ಅವರು ಹೇಳಿದ ಮಾತನ್ನು ಕೇಳಿ ಮುನಿಯು ಒಂದು ಘಳಿಗೆಯಕಾಲ ಧ್ಯಾನಸ್ಥನಾದನು. ಆಮೇಲೆ ಆ ರಾಜನ ಹಿಂದಿನ ಜನ್ಮವನ್ನು ತಿಳಿದು ಅವರನ್ನು ಕುರಿತು ಇಂತೆಂದನು.

೨೬. ಲೋಮಶನು ಹೇಳಿದನು–ಈ ರಾಜನು ಹಿಂದಿನ ಜನ್ಮದಲ್ಲಿ ವೈಶ್ಯನಾಗಿದ್ದನು. ಬಡವನಾದುದರಿಂದ ವ್ಯಾಪಾರ ಮಾಡುತ್ತಾ ಜನರಲ್ಲಿ ಹಣವನ್ನು ಎಳೆಯುತ್ತಿದ್ದನು. ಈ ರೀತಿಯಾಗಿ ವ್ಯಾಪಾರ ಮಾಡುತ್ತ ಊರಿಂದೂರಿಗೆ ಹೋಗುತ್ತಿದ್ದನು.

೨೭. ಹೀಗೆ ಸುತ್ತುತ್ತಿರುವಲ್ಲಿ ಜ್ಯೇಷ್ಠಮಾಸದ ಶುಕ್ಲಪಕ್ಷದ ದಶಮಿಯ ದಿವಸ ಮಧ್ಯಾಹ್ನದ ಸಮಯದಲ್ಲಿ ಒಂದೂರಿನ ಬಳಿಯಿರುವ ಒಂದು ನೀರಿರುವ ಬಾವಿಯ ಬಳಿಗೆ ಹೋದನು.

೨೮. ಆ ಬಾವಿಯಲ್ಲಿ ನೀರಿದ್ದುದನ್ನು ನೋಡಿ ನೀರು ಕುಡಿಯಬೇಕೆಂದು ಮನಸ್ಸು ಬಂದಿತು. ಆಗ ಅಲ್ಲಿಗೆ ಒಂದು ಹಸುವೂ ಕರುವೂ ಬಂದುವು.

ತೃಷಾತುರಾ ನಿದಾಘಾರ್ತಾ ಸಾ ತು ತಸ್ಯಾಮಪಃ ಪಪೌ ।
ಪಿಬನ್ತೀಂ ವಾರಯಿತ್ವಾ ತಾಮಸೌ ತೋಯಂ ಪಪೌ ಸ್ವಯಂ ॥ ೨೯ ॥

ಕರ್ಮಣಾ ತೇನ ಪಾಪೇನ ಪುತ್ರಹೀನೋ ನೃಪೋಭವತ್ ।
ಕಸ್ಯಾಪಿ ಜನ್ಮನಃ ಪುಣ್ಯಾತ್ ಪ್ರಾಪ್ತಂ ರಾಜ್ಯಮಕಂಟಕಂ ॥ ೩೦ ॥

॥ ಲೋಕಾ ಊಚುಃ ॥

ಪುಣ್ಯಾತ್ಪಾಪಂ ಕ್ಷಯಂ ಯಾತಿ ಪುರಾಣೇ ಶ್ರೂಯತೇ ಮುನೇ ।
ಪುಣ್ಯೋಪದೇಶಂ ಕಥಯ ಯೇನ ಪಾಪಕ್ಷಯೋ ಭವೇತ್ ॥
ತಥಾ ಭವತ್ಪ್ರಸಾದೇನ ಪುತ್ರೋ ಭವತಿ ಭೂಪತೇಃ ॥ ೩೧ ॥

॥ ಲೋಮಶ ಉವಾಚ ॥

ಶ್ರಾವಣೇ ಶುಕ್ಲಪಕ್ಷೇ ತು ಪುತ್ರದಾ ನಾಮ ವಿಶ್ರುತಾ ।
ಏಕಾದಶೀ ವಾಂಛಿತದಾ ಕುರುಧ್ವಂ ತದ್ವ್ರತಂ ಜನಾಃ ॥ ೩೨ ॥

---

೨೯. ಆ ಹಸುವು ಬಿಸಿಲಿನ ಬೇಗೆಯನ್ನು ತಡೆಯಲಾರದೆ ಬಾಯಾರಿಕೆಯಿಂದ ಆ ಕೊಳದಲ್ಲಿ ನೀರನ್ನು ಕುಡಿಯುತ್ತಿದ್ದಿತು. ನೀರು ಕುಡಿಯುತ್ತಿದ್ದ ಆ ಹಸುವನ್ನು ಓಡಿಸಿ ತಾನು ಅಲ್ಲಿ ನೀರನ್ನು ಕುಡಿದನು.

೩೦. ಆ ಕೆಲಸದ ಪಾಪದಿಂದಲೇ ಅವನು ಮಕ್ಕಳಿಲ್ಲದವನಾದನು. ಹಿಂದಿನ ಯಾವುದೋ ಒಂದು ಜನ್ಮದ ಪುಣ್ಯದ ವಶದಿಂದ ಶತ್ರುರಹಿತವಾದ ಈ ರಾಜ್ಯವನ್ನು ಹೊಂದಿರುವನು.

೩೧. ಜನರು ಹೇಳಿದರು–ಪುಣ್ಯವನ್ನು ಮಾಡಿದರೆ ಆ ಪುಣ್ಯವು ಪಾಪವನ್ನು ನಾಶಮಾಡುತ್ತದೆ. ಎಂದು ಪುರಾಣಗಳಲ್ಲಿ ಕೇಳಿದ್ದೇವೆ. ಆದುದರಿಂದ ಪಾಪಕ್ಷಯವಾಗತಕ್ಕ ಒಂದು ಪುಣ್ಯದ ಕೆಲಸವನ್ನು ಹೇಳು. ನಿನ್ನ ಅನುಗ್ರಹದಿಂದ ಅದನ್ನು ಮಾಡಿದರೆ ಆ ರಾಜನಿಗೆ ಮಕ್ಕಳಾಗಲಿ.

೩೨. ಲೋಮಶನು ಹೇಳಿದನು– ಎಲೈ ಜನಗಳಿರಾ! ಶ್ರಾವಣ ಶುಕ್ಲ ಏಕಾದಶಿಯು ಪುತ್ರದೆ ಎಂದು ಪ್ರಸಿದ್ಧವಾಗಿದೆ. ಆ ಏಕಾದಶೀ ವ್ರತವನ್ನು ಮಾಡಿ ಇಷ್ಟಾರ್ಥವನ್ನು ಪಡೆಯಿರಿ.

|| ಶ್ರೀಕೃಷ್ಣ ಉವಾಚ ||

ಇತಿ ಶ್ರುತ್ವಾ ನಮಸ್ಕೃತ್ಯ ಮುನಿಮೇತ್ಯ ಪುರಂ ವ್ರತಂ |
ಯಥಾವಿಧಿ ಯಥಾನ್ಯಾಯ್ಯಂ ಕೃತಂ ತೈರ್ಜಾಗರಾನ್ವಿತಂ || ೩೩ ||

ತಸ್ಯ ಪುಣ್ಯಂ ಸುವಿಮಲಂ ದತ್ತಂ ನೃಪತಯೇ ಜನೈಃ |
ದತ್ತೇ ಪುಣ್ಯೇಥ ಸಾ ರಾಜ್ಞೀ ಗರ್ಭಮಾಧತ್ತ ಶೋಭನಂ || ೩೪ ||

ಪ್ರಾಪ್ತೇ ಪ್ರಸವಕಾಲೇ ಸಾ ಸುಷುವೇ ಪುತ್ರಮೂರ್ಜಿತಂ |
ಶ್ರಾವಣಸ್ಯ ಸಿತೇ ಪಕ್ಷೇ ಕರ್ಕಟಸ್ಥೇ ದಿವಾಕರೇ || ೩೫ ||

ದ್ವಾದಶ್ಯಾಂ ವಾಸುದೇವಾಯ ಪವಿತ್ರಾರೋಪಣಂ ಸ್ಮೃತಂ |
ಹೇಮರೂಪ್ಯತಾಮ್ರಕ್ಷೌಮೈಃ ಸೂತ್ರೈಃ ಕೌಶೇಯಪದ್ಮಜೈಃ || ೩೬ ||

ಕುಶೈಃ ಕಾಶೈಶ್ಚ ಕಾರ್ಪಾಸೈರ್ಬ್ರಹ್ಮಣಾ ಕೀರ್ತಿತೈಶ್ಶುಭೈಃ |
ಸ್ನಾತ್ವಾ ತ್ರಿಗುಣಿತಂ ಸೂತ್ರಂ ತ್ರಿಗುಣೀಕೃತ್ಯ ಶೋಧಯೇತ್ || ೩೭ ||

---

೩೩. ಶ್ರೀ ಕೃಷ್ಣನು ಹೇಳಿದನು–ಇದನ್ನು ಕೇಳಿ ಆ ಋಷಿಗೆ ನಮಸ್ಕರಿಸಿ ಪಟ್ಟಣಕ್ಕೆ ಹೋಗಿ ಆ ವ್ರತವನ್ನು ವಿಧಿವತ್ತಾಗಿಯೂ ನ್ಯಾಯವಾಗಿಯೂ ಮಾಡಿ ಜಾಗರಣೆಯನ್ನು ಮಾಡಿದರು.

೩೪. ಜನಗಳು ತಾವು ಆ ವ್ರತವನ್ನು ಮಾಡಿ ಆ ಪುಣ್ಯವನ್ನು ರಾಜನಿಗೆ ಕೊಟ್ಟರು. ಅವರು ಪುಣ್ಯವನ್ನು ಕೊಡುತ್ತಲೂ ಆ ರಾಣಿಯು ಗರ್ಭವತಿಯಾದಳು.

೩೫–೩೭. ಆಕೆಯು ದಿವಸಗಳು ತುಂಬಿದನಂತರ ಉತ್ತಮನಾದ ಮಗನನ್ನು ಹೆತ್ತಳು. ಕರ್ಕಾಟಕದಲ್ಲಿ ಸೂರ್ಯನಿರುವಾಗ ಶ್ರಾವಣಮಾಸದ ಶುದ್ಧ ದ್ವಾದಶಿಯದಿನ ವಾಸುದೇವನಿಗೆ ಪವಿತ್ರಾರೋಪಣವೆಂಬ ಕರ್ಮವನ್ನು ಮಾಡಬೇಕು. ಚಿನ್ನ, ಬೆಳ್ಳಿ, ತಾಮ್ರ,ರೇಷ್ಮೆಮರದತೊಗಟೆ, ಕಮಲದ ದಂಟು, ಕುಶವೆಂಬ ದರ್ಭೆ, ಕಾಶವೆಂಬ ನೀರು ಹುಲ್ಲು, ಹತ್ತಿ, ಬ್ರಹ್ಮನು ಹೇಳಿರುವ ಇನ್ನಾವುದಾದರೂ ಇದ್ದರೆ ಅವುಗಳ ತಂತಿ ಅಥವಾ ನೂಲುಗಳನ್ನುಮಾಡಿ ಸ್ನಾನಮಾಡಿಕೊಂಡು ಮೊದಲು ಮೂರಾಗಿ ಸೇರಿಸಿ, ಅನಂತರ ಆ ಮೂರನ್ನೂ ಸೇರಿಸಿರುವುದನ್ನು ಮತ್ತೆ ಮೂರಾಗಿ ಸೇರಿಸಬೇಕು.

ಗೋದೋಹಾನ್ತರಿತೇ ಕಾಲೇ ಪೂರ್ವೇದ್ಯುರಧಿವಾಸನಂ ।
ಬ್ರಾಹ್ಮಣಾಂಶ್ಚ ನಮಸ್ಕೃತ್ಯ ಗುರುಪಾದೌ ಪ್ರಣಮ್ಯ ಚ    ॥ ೩೮ ॥

ಗೀತಮಂಗಳ ನಿರ್ಘೋಷೈಃ ಕುರ್ಯಾಜ್ಜಾಗರಣಂ ತತಃ ।
ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾ ಭಕ್ತ್ಯಾಶ್ಶೂದ್ರಾಸ್ತಥೈವ ಚ    ॥ ೩೯ ॥

ಸ್ವಧರ್ಮಾವಸ್ಥಿತಾಸ್ಸರ್ವೇ ಭಕ್ತ್ಯಾ ಕುರ್ಯುಃ ಪವಿತ್ರಕಂ ।
ತತಃ ಪವಿತ್ರಂ ಗುರವೇ ದದ್ಯಾದ್ವೈ ವಿಧಿಪೂರ್ವಕಂ    ॥ ೪೦ ॥

ಬ್ರಾಹ್ಮಣಾನ್ವೈಷ್ಣವಾಂಶ್ಚೈವ ಗಂಧಪುಷ್ಪಾದಿನಾರ್ಚಯೇತ್ ।
ಅತೋದೇವೇತಿಮಂತ್ರೇಣ ದ್ವಿಜೋ ವಿಷ್ಣುಂ ನಿವೇದಯೇತ್    ॥ ೪೧ ॥

ಶೂದ್ರಸ್ತು ಮೂಲಮಂತ್ರೇಣ ಯಥಾ ವಿಷ್ಣೋಸ್ತಥಾ ಶಿವೇ ।
ವರ್ಷೇ ವರ್ಷೇ ಪ್ರಕರ್ತವ್ಯಂ ಪವಿತ್ರಾರೋಪಣಂ ಹರೇಃ    ॥ ೪೨ ॥

---

೩೮–೪೦. ಏಕಾದಶಿಯ ದಿನದಲ್ಲಿ ಹಸುವನ್ನು ಕರೆಯುವ ಹೊತ್ತಿನಲ್ಲಿ ಅಧಿವಾಸನವೆಂಬ ಕರ್ಮವನ್ನು ಮಾಡಿಸಬೇಕು. ಆಗ ಬ್ರಾಹ್ಮಣರನ್ನು ನಮಸ್ಕರಿಸಿ ಗುರುವಿಗೆ ಪೂಜೆ ಮಾಡಿ ಮಂಗಳವಾದ್ಯಗಳಿಂದಲೂ ಗಾನಗಳಿಂದಲೂ ಕೂಡಿ ಕೊಂಡು ಜಾಗರಣವನ್ನು ಮಾಡಬೇಕು. ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರರು ಭಕ್ತಿಯಿಂದಲೂ ತಮ್ಮ ತಮ್ಮ ಧರ್ಮಗಳಿಂದಲೂ ಕೂಡಿದ್ದು ಭಕ್ತಿಯಿಂದ ಮೇಲೆ ಹೇಳಿದ ಪದಾರ್ಥಗಳಿಂದ ಪವಿತ್ರವನ್ನು ಮಾಡಬೇಕು. ಆ ಪವಿತ್ರವನ್ನು ಶಾಸ್ತ್ರದ ರೀತಿಯಂತೆ ಗುರುವಿಗೆ ಕೊಡಬೇಕು.

೪೧. ಆಗ ವಿಷ್ಣುಭಕ್ತರಾದ ಬ್ರಾಹ್ಮಣರನ್ನು ಹೂವು ಗಂಧಗಳಿಂದ ಪೂಜಿಸಬೇಕು. "ಅತೋದೇವ" ಎಂಬ ಮಂತ್ರದಿಂದ ಬ್ರಾಹ್ಮಣನು ವಿಷ್ಣುವಿಗೆ ಪವಿತ್ರಾರೋಪಣವನ್ನು ಮಾಡಬೇಕು.

೪೨. ಶೂದ್ರನು ಮೂಲಮಂತ್ರದಿಂದ ಪವಿತ್ರಾರೋಪಣವನ್ನು ಮಾಡಬೇಕು. ವಿಷ್ಣುವಿಗೆ ಹೇಳಿದ ವಿಷಯವೇ ಶಿವನಿಗೂ ಅನ್ವಯಿಸುತ್ತದೆ. ಈ ಪವಿತ್ರಾರೋಪಣವನ್ನು ವರ್ಷವರ್ಷವೂ ಮಾಡಬೇಕು.

ಭುಕ್ತಿಂ ಮುಕ್ತಿಂ ಚ ಇಚ್ಛದ್ಭಿಃ ಸಂಸಾರೇ ಶೋಕಸಾಗರೇ ।
ನ ಕರೋತಿ ವಿಧಾನೇನ ಪವಿತ್ರಾರೋಪಣಂ ತು ಯಃ ॥ ೪೩ ॥

ತಸ್ಯ ಸಾಂವತ್ಸರೀ ಪೂಜಾ ನಿಷ್ಫಲಾ ವೈಷ್ಣವಸ್ಯ ತು ।
ಶ್ರುತ್ವಾ ಮಾಹಾತ್ಮ್ಯಮೇತಸ್ಯಾ ನರಃ ಪಾಪಾತ್ಪ್ರಮುಚ್ಯತೇ । ॥ ೪೪ ॥

ಇಹ ಲೋಕೇ ಸುಖಂ ಪ್ರಾಪ್ಯ ಪರತ್ರ ಸ್ವರ್ಗತಿಂ ಲಭೇತ್ ॥ ೪೫ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಪತಿ
ನಾರದ ಸಂವಾದಾನ್ತರ್ಗತ ಕೃಷ್ಣ ಯುಧಿಷ್ಠಿರ ಸಂವಾದೇ
ಶ್ರಾವಣ ಶುಕ್ಲ ಪುತ್ರದೈಕಾದಶೀ ಮಾಹಾತ್ಮ್ಯಂ ನಾಮ
ಸಪ್ತಪಂಚಾಶತ್ತಮೋಽಧ್ಯಾಯಸ್ಸಮಾಪ್ತಃ

---

೪೩. ಹೀಗೆ ಪವಿತ್ರಾರೋಪಣವನ್ನು ಮಾಡಿದರೆ ಈ ಸಂಸಾರದಲ್ಲಿ ಭುಕ್ತಿಯೂ ಮುಕ್ತಿಯೂ ಸಿಕ್ಕುತ್ತವೆ. ಯಾರು ವಿಧಿವತ್ತಾಗಿ ಈ ಪವಿತ್ರಾರೋಪಣವನ್ನು ಮಾಡುವುದಿಲ್ಲವೋ ಅವರು ವರ್ಷದವರೆಗೂ ಮಾಡಿದ ಪೂಜೆಯು ವ್ಯರ್ಥವಾಗುತ್ತದೆ.

೪೪–೪೫. ಈ ಏಕಾದಶಿಯ ಮಹಿಮೆಯನ್ನು ಕೇಳಿದವನು ಪಾಪದಿಂದ ಪಾರಾಗುತ್ತಾನೆ. ಮತ್ತು ಇಹಲೋಕದಲ್ಲಿ ಸುಖವನ್ನು ಹೊಂದಿ ಪರದಲ್ಲಿ ಸ್ವರ್ಗವನ್ನೂ ಹೊಂದುತ್ತಾನೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಪತಿ
ನಾರದರ ಸಂವಾದಾನ್ತರ್ಗತವಾದ ಕೃಷ್ಣ ಯುಧಿಷ್ಠಿರರ ಸಂವಾದದಲ್ಲಿ
ಶ್ರಾವಣ ಶುಕ್ಲ ಪುತ್ರದೈಕಾದಶಿಯ ಮಹಿಮೆ ಎಂಬ
ಐವತ್ತೇಳನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ಅಷ್ಟಪಂಚಾಶತ್ತಮೋऽಧ್ಯಾಯಃ ||



|| ಯುಧಿಷ್ಠಿರ ಉವಾಚ ||

ಭಾದ್ರಸ್ಯ ಕೃಷ್ಣಪಕ್ಷೇ ತು ಕಿನ್ನಾಮ್ನ್ಯೇಕಾದಶೀ ಭವೇತ್ ।
ಏತದಿಚ್ಛಾಮ್ಯಹಂ ಶ್ರೋತುಂ ಕಥಯಸ್ವ ಜನಾರ್ದನ || ೧ ||

|| ಶ್ರೀ ಕೃಷ್ಣ ಉವಾಚ ||

ಶೃಣುಷ್ವೈಕಮನಾ ರಾಜನ್ ಕಥಯಿಷ್ಯಾಮಿ ವಿಸ್ತರಾತ್ ।
ಅಜೇತಿ ನಾಮತಃ ಪ್ರೋಕ್ತಾ ಸರ್ವಪಾಪಪ್ರಣಾಶಿನೀ || ೨ ||

ಪೂಜಯಿತ್ವಾ ಹೃಷೀಕೇಶಂ ವ್ರತಮಸ್ಯಾಃ ಕರೋತಿ ಯಃ ।
ಪಾಪಾನಿ ತಸ್ಯ ನಶ್ಯಂತಿ ವ್ರತಸ್ಯ ಶ್ರವಣಾದಪಿ || ೩ ||

---

## ಐವತ್ತೆಂಟನೆಯ ಅಧ್ಯಾಯವು



೧. ಯುಧಿಷ್ಠಿರನು ಹೇಳಿದನು–ಎಲೈ ಜನಾರ್ದನನೆ! ಭಾದ್ರಪದ ಕೃಷ್ಣ ಪಕ್ಷದ ಏಕಾದಶಿಗೆ ಹೆಸರೇನು? ಅದನ್ನು ಕೇಳಲು ಇಚ್ಛಿಸುತ್ತೇನೆ.

೨. ಶ್ರೀ ಕೃಷ್ಣನು ಹೇಳಿದನು–ಎಲೈ ರಾಜನೆ! ಒಂದೇ ಮನಸ್ಸಿನಿಂದ ಕೇಳು. ವಿಸ್ತಾರವಾಗಿ ಹೇಳುತ್ತೇನೆ. ಈ ಏಕಾದಶಿಗೆ ಅಜೆ ಎಂದು ಹೆಸರು. ಪಾಪಗಳೆಲ್ಲವನ್ನೂ ನಾಶಮಾಡುತ್ತದೆ.

೩. ಯಾವನು ಹೃಷೀಕೇಶನನ್ನು ಪೂಜಿಸಿ ಈ ವ್ರತವನ್ನು ಮಾಡುತ್ತಾನೆಯೋ ಅವನ ಪಾಪಗಳೂ ಈ ವ್ರತದ ವಿಷಯವನ್ನು ಕೇಳಿದವನ ಪಾಪಗಳೂ ನಾಶವಾಗುತ್ತವೆ.

ನಾತಃ ಪರತರಾ ರಾಜಂಲ್ಲೋಕದ್ವಯಹಿತಾಯ ವೈ ।
ಸತ್ಯಮುಕ್ತಂ ಮಯಾ ಹ್ಯೇತನ್ನಾಸತ್ಯಂ ಮಮ ಭಾಷಿತಂ ॥ ೪ ॥

ಹರಿಶ್ಚಂದ್ರ ಇತಿ ಖ್ಯಾತೋ ಬಭೂವ ನೃಪತಿಃ ಪುರಾ ।
ಚಕ್ರವರ್ತೀ ಸತ್ಯಸಂಧಃ ಸಮಸ್ತಾಯಾ ಭುವಃ ಪತಿಃ ॥ ೫ ॥

ಕಸ್ಯಾಪಿ ಕರ್ಮಣಃ ಪ್ರಾಪ್ತೌ ರಾಜ್ಯಭ್ರಷ್ಟೋ ಬಭೂವ ಸಃ ।
ವಿಕ್ರೀತೌ ವನಿತಾಪುತ್ರೌ ಸ ಚಕಾರಾತ್ಮವಿಕ್ರಯಂ ॥ ೬ ॥

ಪುಲ್ಕಸಸ್ಯ ಚ ದಾಸತ್ವಂ ಗತೋ ರಾಜಾ ಸ ಪುಣ್ಯಕೃತ್ ।
ಸತ್ಯಮಾಲಂಬ್ಯ ರಾಜೇಂದ್ರ ಮೃತಚೈಲಾಪಹಾರಕಃ ॥ ೭ ॥

ಸೋಽಭವನ್ನೃಪತಿಶ್ರೇಷ್ಠೋ ನ ಸತ್ಯಾಚ್ಚಲಿತಸ್ತಥಾ ।
ಏವಂ ಚ ತಸ್ಯ ನೃಪತೇರ್ಬಹವೋ ವತ್ಸರಾಗತಾಃ ॥ ೮ ॥

---

೪. ಎಲೈ ರಾಜನೆ! ಇದಕ್ಕಿಂತಲೂ ಉತ್ತಮವಾದುದೂ ಎರಡು ಲೋಕಗಳಿಗೂ ಹಿತವಾದುದೂ ಮತ್ತೊಂದಿಲ್ಲ. ನಾನು ಸತ್ಯವಾಗಿಹೇಳುತ್ತೇನೆ. ನನ್ನ ಮಾತು ಸುಳ್ಳಲ್ಲ.

೫. ಹಿಂದೆ ಹರಿಶ್ಚಂದ್ರನೆಂಬವನೊಬ್ಬ ರಾಜನಿದ್ದನು. ಅವನು ಚಕ್ರವರ್ತಿಯು. ಸತ್ಯವಂತನು. ಭೂಮಿಯೆಲ್ಲಕ್ಕೂ ಒಡೆಯನಾಗಿದ್ದನು.

೬. ಹಿಂದಿನ ಜನ್ಮದ ಯಾವುದೋ ಪಾಪಶೇಷದಿಂದ ಅವನು ರಾಜ್ಯವನ್ನು ಕಳೆದುಕೊಂಡನು. ಹೆಂಡತಿ ಮಕ್ಕಳನ್ನು ಮಾರಿಬಿಟ್ಟನು. ಕೊನೆಗೆ ತನ್ನನ್ನೂ ಮಾರಿಕೊಂಡನು.

೭. ಆ ಪುಣ್ಯವಂತನಾದ ರಾಜನು ಚಂಡಾಲನಿಗೆ ಆಳಾದನು. ಸತ್ಯವನ್ನು ಆಶ್ರಯಿಸಿದ್ದರೂ ಹೆಣದ ಬಟ್ಟೆಯನ್ನು ತೆಗೆದುಕೊಳ್ಳುತ್ತಿದ್ದನು.

೮. ಆದರೂ ಕೂಡ ಆ ರಾಜನು ಸತ್ಯದಿಂದ ಚಲಿಸಲೇ ಇಲ್ಲವು. ಈ ರೀತಿ ಇರುತ್ತಿರುವಂತೆಯೇ ಬಹು ಕಾಲವು ಕಳೆದುಹೋದುವು.

ತತಶ್ಚಿಂತಾಪರೋ ರಾಜಾ ಬಭೂವಾತಿಸುದುಃಖಿತಃ ।
ಕಿಂ ಕರೋಮಿ ಕ್ವ ಗಚ್ಛಾಮಿ ನಿಷ್ಕೃತಿರ್ಮೇ ಕಥಂ ಭವೇತ್ ॥ ೯ ॥

ಇತಿ ಚಿಂತಯತಸ್ತಸ್ಯ ಮಗ್ನಸ್ಯ ವೃಜಿನಾರ್ಣವೇ ।
ಆಜಗಾಮ ಮುನಿಃ ಕಶ್ಚಿತ್ ಜ್ಞಾತ್ವಾ ರಾಜಾನಮಾತುರಂ ॥ ೧೦ ॥

ಪರೋಪಕರಣಾರ್ಥಾಯ ನಿರ್ಮಿತೋ ಬ್ರಹ್ಮಣಾ ದ್ವಿಜಃ ।
ಸ ತಂ ದೃಷ್ಟ್ವಾ ದ್ವಿಜವರಂ ನನಾಮ ನೃಪಸತ್ತಮಃ ॥ ೧೧ ॥

ಕೃತಾಂಜಲಿಪುಟೋ ಭೂತ್ವಾ ಗೌತಮಸ್ಯಾಗ್ರತೋ ಸ್ಥಿತಃ ।
ಕಥಯಾಮಾಸ ವೃತ್ತಾಂತಮಾತ್ಮನೋ ದುಃಖಸಂಯುತಂ ॥ ೧೨ ॥

ಶ್ರುತ್ವಾ ನೃಪತಿವಾಕ್ಯಾನಿ ಗೌತಮೋ ವಿಸ್ಮಯಾನ್ವಿತಃ ।
ಉಪದೇಶಂ ನೃಪತಯೇ ವ್ರತಸ್ಯಾಸ್ಯ ದದೌ ಮುನಿಃ ॥ ೧೩ ॥

---

೯. ಹೀಗೆ ರಾಜನು ಯೋಚಿಸುತ್ತ ಏನು ಮಾಡಲಿ? ಎಲ್ಲಿ ಹೋಗಲಿ? ಇದಕ್ಕೆ ಬದಲು ಮಾಡುವುದು ಹೇಗೆ? ಎಂದು ದುಃಖಿಸುತ್ತಿದ್ದನು.

೧೦. ರಾಜನು ಪಾಪವೆಂಬ ಸಮುದ್ರದಲ್ಲಿ ಮುಳುಗಿ ಈರೀತಿ ಯೋಚಿಸುತ್ತಿರಲು ಒಬ್ಬ ಋಷಿಯು ಈ ರಾಜನು ಈರೀತಿ ದುಃಖಿತನಾಗಿರುವುದನ್ನು ಕಂಡು ಅಲ್ಲಿಗೆ ಬಂದನು.

೧೧. ಆ ಬ್ರಾಹ್ಮಣನು ಪರೋಪಕಾರಕ್ಕೇನೆ ಬ್ರಹ್ಮನಿಂದ ನಿರ್ಮಿತನಾದವನಂತೆ ಇದ್ದನು. ರಾಜನು ಈ ಬ್ರಾಹ್ಮಣನನ್ನು ನೋಡಿ ಅವನಿಗೆ ನಮಸ್ಕರಿಸಿದನು.

೧೨. ಆಗ ರಾಜನು ಕೈ ಮುಗಿದುಕೊಂಡು ಆ ಮುನಿಯಾದ ಗೌತಮನ ಎದುರಿಗೆ ನಿಂತುಕೊಂಡು ತನ್ನ ದುಃಖದ ವೃತ್ತಾಂತವೆಲ್ಲವನ್ನೂ ಹೇಳಿಕೊಂಡನು.

೧೩. ಈ ರಾಜನ ಮಾತನ್ನು ಕೇಳಿ ಗೌತಮನು ಆಶ್ಚರ್ಯಗೊಂಡು ಈ ವ್ರತದ ಉಪದೇಶವನ್ನು ಆ ರಾಜನಿಗೆ ಕೊಟ್ಟನು.

|| ಗೌತಮ ಉವಾಚ ||

ಮಾಸಿ ಭಾದ್ರಪದೇ ರಾಜನ್ ಕೃಷ್ಣಪಕ್ಷೇತಿಶೋಭನಾ ।
ಏಕಾದಶೀ ಸಮಾಯಾತಾ ಅಜಾ ನಾಮೇತಿ ಪುಣ್ಯದಾ || ೧೪ ||

ಅಸ್ಯಾಃ ಕುರು ವ್ರತಂ ರಾಜನ್ ಪಾಪಸ್ಯಾನ್ತೋ ಭವಿಷ್ಯತಿ ।
ತವ ಭಾಗ್ಯವಶಾದೇಷಾ ಸಪ್ತಮೇಽಹ್ನಿ ಸಮಾಗತಾ || ೧೫ ||

ಉಪವಾಸಪರೋ ಭೂತ್ವಾ ರಾತ್ರೌ ಜಾಗರಣಂ ಕುರು ।
ಏವಮಸ್ಯಾ ವ್ರತೇ ಚೀರ್ಣೇ ತವ ಪಾಪಕ್ಷಯೋ ಭವೇತ್ ।
ತವ ಪುಣ್ಯಪ್ರಭಾವೇಣ ಆಗತೋಽಹಂ ನೃಪೋತ್ತಮ || ೧೬ ||

|| ಶ್ರೀಕೃಷ್ಣ ಉವಾಚ ||

ಇತ್ಯೇವಂ ಕಥಯಿತ್ವಾ ಚ ಮುನಿರಂತರಧೀಯತ ।
ಮುನಿವಾಕ್ಯಂ ನೃಪಶ್ಶ್ರುತ್ವಾ ಚಚಾರ ವ್ರತಮುತ್ತಮಂ || ೧೭ ||

---

೧೪. ಗೌತಮನು ಹೇಳಿದನು–ಎಲೈ ರಾಜನೆ! ಭಾದ್ರಪದ ಮಾಸದಲ್ಲಿ ಕೃಷ್ಣ ಪಕ್ಷದಲ್ಲಿ "ಅಜಾ" ಎಂಬ ಏಕಾದಶಿಯು ಬರುವುದು. ಅದು ಪುಣ್ಯವನ್ನು ಕೊಡುತ್ತದೆ.

೧೫. ಎಲೈ ರಾಜನೆ! ಈ ವ್ರತವನ್ನು ಮಾಡು. ನಿನ್ನ ಪಾಪವು ನಾಶವಾಗುತ್ತದೆ. ನಿನ್ನ ಅದೃಷ್ಟ ವಿಶೇಷದಿಂದಲೇ ಇಂದಿಗೆ ಏಳನೆಯ ದಿನವೇ ಅದು ಬರುತ್ತದೆ.

೧೬. ಆದಿನ ಉಪವಾಸವಿದ್ದು ರಾತ್ರಿಯಲ್ಲಿ ಜಾಗರಣೆಯನ್ನು ಮಾಡು. ಈರೀತಿ ವ್ರತವನ್ನು ಮಾಡಿದರೆ ನಿನ್ನ ಪಾಪವೆಲ್ಲವೂ ಹೋಗುತ್ತದೆ. ನಿನ್ನ ಪುಣ್ಯದ ಪ್ರಭಾವದಿಂದಲೇ ಇಲ್ಲಿಗೆ ನಾನು ಬಂದಿದ್ದೇನೆ.

೧೭. ಶ್ರೀ ಕೃಷ್ಣನು ಹೇಳಿದನು–ಈರೀತಿ ಹೇಳಿ ಮುನಿಯು ಹೊರಟು ಹೋದನು. ರಾಜನು ಈ ಋಷಿಯ ಮಾತಿನಂತೆ ಆ ವ್ರತವನ್ನು ಮಾಡಿದನು

ಕೃತೇ ತಸ್ಮಿನ್ ವ್ರತೇ ರಾಜ್ಞಃ ಪಾಪಸ್ಯಾನ್ತೋಽಭವತ್ ಕ್ಷಣಾತ್ ।
ಶ್ರೂಯತಾಂ ರಾಜಶಾರ್ದೂಲ ಪ್ರಭಾವೋಽಸ್ಯ ವ್ರತಸ್ಯ ಚ　　|| ೧೮ ||

ಯದ್ದುಃಖಂ ಬಹುಭಿರ್ವರ್ಷೈಃ ಭೋಕ್ತವ್ಯಂ ತತ್ ಕ್ಷಯೋ ಭವೇತ್ ।
ನಿಸ್ತೀರ್ಣದುಃಖೋ ರಾಜಾಸೀದ್ವ್ರತಸ್ಯಾಸ್ಯ ಪ್ರಭಾವತಃ ।　　|| ೧೯ ||

ಪತ್ನ್ಯಾ ಸಹ ಸಮಾಸಂಗಂ ಪುತ್ರಜೀವನಮಾಪ ಸಃ ।
ದಿವಿ ದುಂದುಭಯೋ ನೇದುಃ ಪುಷ್ಪವರ್ಷಮಭೂದ್ದಿವಃ　　|| ೨೦ ||

ಏಕಾದಶ್ಯಾಃ ಪ್ರಭಾವೇಣ ಪ್ರಾಪ್ಯ ರಾಜ್ಯಮಕಂಟಕಂ ।
ಸ್ವರ್ಗಂ ಲೇಭೇ ಹರಿಶ್ಚಂದ್ರಃ ಸಪುರಸ್ಸಪರಿಚ್ಛದಃ　　|| ೨೧ ||

---

೧೮. ಆ ದೊರೆಯು ಈ ವ್ರತವನ್ನು ಮಾಡಲು ಒಡನೆಯೇ ಪಾಪವೆಲ್ಲವೂ ಹೋಯಿತು. ಎಲೈ ಯುಧಿಷ್ಠಿರನೆ! ಈ ವ್ರತದ ಪ್ರಭಾವವನ್ನು ಕೇಳು.

೧೯. ಬಹಳ ವರ್ಷಗಳಿಂದಲೂ ಇರುವ ಅನುಭವಿಸಿಯೇ ತೀರಬೇಕಾದ ಪಾಪಗಳಾದರೂ ಕೂಡ ನಾಶವಾಗುತ್ತವೆ. ಈ ವ್ರತದ ಪ್ರಭಾವದಿಂದ ರಾಜನ ದುಃಖವೆಲ್ಲವೂ ಹೋಯಿತು.

೨೦. ಆದುದರಿಂದಲೇ ಹೆಂಡತಿಯೊಡನೆಯೂ ಸೇರಿಕೊಂಡನು. ಸತ್ತಿದ್ದ ಮಗನೂ ಬದುಕಿದನು. ಆಗ ಅಂತರಿಕ್ಷದಲ್ಲಿ ದುಂದುಭಿಗಳು ಮೊಳಗಿದುವು. ಪುಷ್ಪವೃಷ್ಟಿಯಾಯಿತು.

೨೧. ಈ ಏಕಾದಶಿಯ ಮಹಿಮೆಯಿಂದ ಹರಿಶ್ಚಂದ್ರನು ಶತ್ರುಗಳಿಲ್ಲದ ರಾಜ್ಯವನ್ನು ಹೊಂದಿ ಆಳುತ್ತಿದ್ದು ಕೊನೆಯಲ್ಲಿ ಬಂಧುಗಳೊಡನೆಯೂ ಪಟ್ಟಣಿಗರೊಡನೆಯೂ ಸ್ವರ್ಗವನ್ನು ಹೊಂದಿದನು.

ಈದೃಗ್ವಿಧಂ ವ್ರತಂ ರಾಜನ್ ಯೇ ಕುರ್ವಂತಿ ಚ ಮಾನವಾಃ ।
ಸರ್ವಪಾಪವಿನಿರ್ಮುಕ್ತಾಸ್ತ್ರಿದಿವಂ ಯಾನ್ತಿ ತೇ ನೃಪ ।
ಪಠನಾಚ್ಛ್ರವಣಾದ್ವಾಪಿ ಅಶ್ವಮೇಧಫಲಂ ಲಭೇತ್ ॥ ೨೨ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಪತಿ ನಾರದ ಸಂವಾದಾಂತರ್ಗತ ಶ್ರೀ ಕೃಷ್ಣ ಯುಧಿಷ್ಠಿರ ಸಂವಾದೇ ಭಾದ್ರಪದ ಕೃಷ್ಣ ಅಜೈಕಾದಶೀ ವರ್ಣನಂ ನಾಮ ಅಷ್ಟಪಂಚಾಶತ್ತಮೋಽಧ್ಯಾಯಸ್ಸಮಾಪ್ತಃ

---

೨೧. ಈ ರೀತಿಯಾದ ವ್ರತವನ್ನು ಮಾಡುವ ಜನರು ಪಾಪದಿಂದ ವಿಮುಕ್ತರಾಗಿ ಸ್ವರ್ಗವನ್ನು ಹೊಂದುತ್ತಾರೆ. ಇದನ್ನು ಕೇಳುವುದರಿಂದ ಅಶ್ವಮೇಧ ಫಲವನ್ನು ಹೊಂದುತ್ತಾರೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಪತಿ ನಾರದರ ಸಂವಾದದೊಳಗಿನ ಕೃಷ್ಣ ಯುಧಿಷ್ಠಿರರ ಸಂವಾದದಲ್ಲಿ ಆಷಾಢ ಕೃಷ್ಣ ಅಜೈಕಾದಶಿಯ ವರ್ಣನೆ ಎಂಬ ಐವತ್ತೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಊನಷಷ್ಟಿತಮೋಽಧ್ಯಾಯಃ ॥



॥ ಯುಧಿಷ್ಠಿರ ಉವಾಚ ॥

**ನಭಸ್ಯಸ್ಯ ಸಿತೇ ಪಕ್ಷೇ ಕಿನ್ನಾಮ್ನ್ಯೇಕಾದಶೀ ಭವೇತ್ ।**
**ಕೋ ದೇವಃ ಕೋ ವಿಧಿಸ್ತಸ್ಯಾ ಏತದಾಖ್ಯಾಹಿ ಕೇಶವ ॥ ೧ ॥**

॥ ಶ್ರೀಕೃಷ್ಣ ಉವಾಚ ॥

**ಕಥಯಾಮಿ ಮಹೀಪಾಲ ಕಥಾಮಾಶ್ಚರ್ಯಕಾರಿಣೀಂ ।**
**ಕಥಯಾಮಾಸ ಯಾಂ ಬ್ರಹ್ಮಾ ನಾರದಾಯ ಮಹಾತ್ಮನೇ ॥ ೨ ॥**

॥ ನಾರದ ಉವಾಚ ॥

**ಕಥಯಸ್ವ ಪ್ರಸಾದೇನ ಚತುರ್ಮುಖ ನಮೋಽಸ್ತು ತೇ ।**
**ನಭಸ್ಯ ಶುಕ್ಲಪಕ್ಷೇ ತು ಕಿನ್ನಾಮ್ನ್ಯೇಕಾದಶೀ ಭವೇತ್ ।**
**ಏತದಿಚ್ಛಾಮ್ಯಹಂ ಶ್ರೋತುಂ ವಿಷ್ಣೋರಾರಾಧನಾಯ ವೈ ॥ ೩ ॥**

---

## ಐವತ್ತೊಂಭತ್ತನೆಯ ಅಧ್ಯಾಯವು



೧. ಯುಧಿಷ್ಠಿರನು ಹೇಳಿದನು–ಭಾದ್ರಪದ ಶುಕ್ಲಪಕ್ಷದಲ್ಲಿ ಬರುವ ಏಕಾದಶಿಯ ಹೆಸರೇನು? ಅದಕ್ಕೆ ದೇವರಾವುದು? ವಿಧಿಯೇನು? ಎಂಬದನ್ನು ತಿಳಿಸು.

೨. ಶ್ರೀ ಕೃಷ್ಣನು ಹೇಳಿದನು–ಎಲೈ ದೊರೆಯೆ! ಬ್ರಹ್ಮನು ನಾರದನಿಗೆ ಹೇಳಿದ ಒಂದು ಆಶ್ಚರ್ಯಕರವಾದ ಕಥೆಯನ್ನು ಹೇಳುತ್ತೇನೆ. ಕೇಳು.

೩. ನಾರದನು ಹೇಳಿದನು–ಎಲೈ ಚತುರ್ಮುಖನೆ! ನಿನಗೆ ನಮಸ್ಕಾರವು. ಭಾದ್ರಪದಮಾಸದ ಶುಕ್ಲಪಕ್ಷದಲ್ಲಿ ಬರುವ ಏಕಾದಶಿಯ ಹೆಸರೇನು? ವಿಷ್ಣುವಿನ ಆರಾಧನೆಗೋಸ್ಕರ ಅದನ್ನು ಕೇಳಲು ಇಚ್ಛಿಸುತ್ತೇನೆ.

|| ಬ್ರಹ್ಮೋವಾಚ ||

ವೈಷ್ಣವೋಽಸಿ ಮುನಿಶ್ರೇಷ್ಠ ಸಾಧು ಪೃಷ್ಟಂ ತ್ವಯಾ ಕಿಲ |
ನಾತಃ ಪರತರಾ ಲೋಕೇ ಪವಿತ್ರಾ ಹರಿವಾಸರಾತ್ || ೪ ||

ಪದ್ಮನಾಭೇತಿ ವಿಖ್ಯಾತಾ ನಭಸ್ಯೈಕಾದಶೀ ಸಿತಾ |
ಹೃಷೀಕೇಶಃ ಪೂಜ್ಯತೇಽಸ್ಯಾಂ ಕರ್ತವ್ಯಂ ವ್ರತಮುತ್ತಮಂ || ೫ ||

ಕಥಯಾಮಿ ತವಾಗ್ರೇಽಹಂ ಕಥಾಂ ಪೌರಾಣಿಕೀಂ ಶುಭಾಂ |
ಯಸ್ಯಾಶ್ಶ್ರವಣಮಾತ್ರೇಣ ಮಹಾಪಾಪಂ ಪ್ರಣಶ್ಯತಿ || ೬ ||

ಮಾಂಧಾತಾ ನಾಮ ರಾಜರ್ಷಿರ್ವಿವಸ್ವದ್ವಂಶಸಂಭವಃ |
ಬಭೂವ ಚಕ್ರವರ್ತೀ ಸಃ ಸತ್ಯಸಂಧಃ ಪ್ರತಾಪವಾನ್ || ೭ ||

ಧರ್ಮತಃ ಪಾಲಯಾಮಾಸ ಪ್ರಜಾಃ ಪುತ್ರಾನಿವೌರಸಾನ್ |
ನ ತಸ್ಯ ರಾಜ್ಯೇ ದುರ್ಭಿಕ್ಷಂ ನಾಧಯೋ ವ್ಯಾಧಯಸ್ತಥಾ || ೮ ||

---

೪. ಬ್ರಹ್ಮನು ಹೇಳಿದನು-ಎಲೈ ಮುನಿಶ್ರೇಷ್ಠನೆ! ನೀನು ವೈಷ್ಣವನಾಗಿದ್ದೀಯೆ. ನೀನು ಕೇಳುವುದು ಚೆನ್ನಾಗಿದೆ. ಈ ಪವಿತ್ರವಾದ ಹರಿವಾಸರಕ್ಕಿಂತ ಉತ್ತಮವಾದುದು ಲೋಕದಲ್ಲಿ ಮತ್ತೊಂದಿಲ್ಲ.

೫. ಭಾದ್ರಪದ ಶುಕ್ಲ ಏಕಾದಶಿಯು ಪದ್ಮನಾಭೈಕಾದಶಿ ಎಂದು ಪ್ರಸಿದ್ಧವಾಗಿರುವುದು. ಈ ಏಕಾದಶಿಯಲ್ಲಿ ವಿಷ್ಣುವನ್ನು ಪೂಜಿಸಬೇಕು. ಇದು ಉತ್ತಮವಾದ ವ್ರತವು.

೬. ನಿನ್ನ ಮುಂದೆ ಒಂದು ಪುರಾಣದ ಕಥೆಯನ್ನು ಹೇಳುತ್ತೇನೆ. ಅದು ಶುಭವಾದುದು. ಅದನ್ನು ಕೇಳುವುದರಿಂದ ಮಹಾಪಾಪಗಳೆಲ್ಲವೂ ನಾಶವಾಗುತ್ತವೆ.

೭. ಸೂರ್ಯವಂಶೋತ್ಪನ್ನನಾದ ಮಾಂಧಾತನೆಂಬ ರಾಜರ್ಷಿಯೊಬ್ಬನಿದ್ದನು. ಅವನು ಚಕ್ರವರ್ತಿಯು. ಸತ್ಯವಂತನು. ಪ್ರತಾಪಿಯು.

೮. ಅವನು ಪ್ರಜೆಗಳನ್ನು ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳಂತೆ ಕಾಪಾಡುತ್ತಿದ್ದನು. ಅವನ ರಾಜ್ಯದಲ್ಲಿ ದುರ್ಭಿಕ್ಷದ ಭಯವಿಲ್ಲ. ರೋಗವಾಗಲಿ ಮನೋದುಃಖವಾಗಲಿ ಇರಲಿಲ್ಲ.

ನಿರಾತಂಕಾಃ ಪ್ರಜಾಸ್ತಸ್ಯ ಧನಧಾನ್ಯಸಮೇಧಿತಾ ।
ನ್ಯಾಯೇನೋಪಾರ್ಜಿತಂ ವಿತ್ತಂ ತಸ್ಯ ಕೋಶೇ ಮಹೀಪತೇಃ　　|| ೯ ||

ಸ್ವಸ್ವಧರ್ಮೇ ಪ್ರವರ್ತಂತೇ ಸರ್ವೇ ವರ್ಣಾಶ್ರಮಾಸ್ತಥಾ ।
ಕಾಮಧೇನುಸಮಾ ಭೂಮಿಃ ತಸ್ಯ ರಾಜ್ಯೇ ಮಹೀಪತೇಃ　　|| ೧೦ ||

ತಸ್ಯೈವಂ ಕುರ್ವತೋ ರಾಜ್ಯಂ ಬಹುಸೌಖ್ಯಂ ಗತಾಃ ಪ್ರಜಾಃ ।
ಅಥೈಕಸ್ಮಿಂಶ್ಚ ಸಂಪ್ರಾಪ್ತೇ ವಿಪಾಕೇ ಕರ್ಮಣಃ ಖಲು　　|| ೧೧ ||

ವರ್ಷತ್ರಯಂ ತದ್ವಿಷಯೇ ನ ವವೃಷುರ್ಬಲಾಹಕಾಃ ।
ತೇನ ಭಗ್ನಾಃ ಪ್ರಜಾಸ್ತಸ್ಯ ಬಭೂವುಃ ಕ್ಷುಧಯಾರ್ದಿತಾಃ　　|| ೧೨ ||

ಸ್ವಾಹಾಸ್ವಧಾವಷಟ್ಕಾರವೇದಾಧ್ಯಯನವರ್ಜಿತಾಃ ।
ಬಭೂವ ವಿಷಯಸ್ತಸ್ಯಾಭಾಗ್ಯೇನ ದೈವಪೀಡಿತಃ ।
ಅಥ ಪ್ರಜಾಸ್ಸಮಾಗಮ್ಯ ರಾಜಾನಮಿದಮಬ್ರುವನ್　　|| ೧೩ ||

---

೯. ಅವನ ರಾಜ್ಯದಲ್ಲಿ ಪ್ರಜೆಗಳು ತೊಂದರೆಯಿಲ್ಲದೆ ಇದ್ದರು. ಧನ ಧಾನ್ಯಗಳು ಸಮೃದ್ಧಿಯಾಗಿದ್ದುವು. ಅವನು ನ್ಯಾಯದಿಂದ ಹಣವನ್ನು ಸಂಪಾದಿಸಿ ಕೋಶದಲ್ಲಿ ತುಂಬಿದ್ದನು.

೧೦. ಎಲ್ಲಾ ವರ್ಣಾಶ್ರಮಿಗಳೂ ಅವರವರ ಧರ್ಮದಲ್ಲಿ ನಡೆಯುತ್ತಿದ್ದರು. ಅವನು ರಾಜ್ಯಭಾರ ಮಾಡುತ್ತಿರಲು ಭೂಮಿಯು ಕಾಮಧೇನುವಿನಂತೆ ಕೇಳಿದುದನ್ನು ಕೊಡುತ್ತಿದ್ದಿತು.

೧೧-೧೨. ಹೀಗೆ ಮಾಂಧಾತ ಚಕ್ರವರ್ತಿಯು ರಾಜ್ಯಭಾರಮಾಡುತ್ತಿರಲು ಜನಗಳು ಬಹು ಸೌಖ್ಯದಿಂದಿರುತ್ತಿದ್ದರು. ಹೀಗಿರುತ್ತಿರಲು ಯಾವುದೋ ಒಂದು ಪಾಪಶೇಷದಿಂದ ಅವನ ರಾಜ್ಯದಲ್ಲಿ ಮೂರು ವರ್ಷಗಳಕಾಲ ಮಳೆಯು ಹುಯ್ಯಲಿಲ್ಲ. ಅದರಿಂದ ಜನಗಳು ಕಷ್ಟಪಡುತ್ತಾ ಹಸಿವು ಬಾಯಾರಿಕೆಗಳಿಂದ ತೊಂದರೆಪಡುತ್ತಿದ್ದರು.

೧೩. ಪ್ರಜೆಗಳೆಲ್ಲರೂ ಸ್ವಾಹಾ, ಸ್ವಧಾ, ವಷಟ್ಕಾರಗಳುಳ್ಳ ಹೋಮ, ಯಜ್ಞಗಳನ್ನು ಮಾಡದೆ ಹೋದರು. ವೇದಾಧ್ಯಯನವನ್ನು ಬಿಟ್ಟುಬಿಟ್ಟರು. ಈ ರೀತಿಯಲ್ಲಿ ಅವನ ದೇಶವು ದುರದೃಷ್ಟದಿಂದ ತೊಂದರೆಪಡುತ್ತಿದ್ದಿತು. ಆಗ ಪ್ರಜೆಗಳು ರಾಜನ ಬಳಿಗೆ ಬಂದು ಇಂತೆಂದರು.

|| ಪ್ರಜಾ ಊಚುಃ ||

ಶ್ರೋತವ್ಯಂ ನೃಪಶಾರ್ದೂಲ ಪ್ರಜಾನಾಂ ವಚನಂ ತ್ವಯಾ ।
ಆಪೋ ನಾರಾ ಇತಿ ಪ್ರೋಕ್ತಾಃ ಪುರಾಣೇಷು ಮನೀಷಿಭಿಃ || ೧೪ ||

ಅಯನಂ ತಾ ಭಗವತಃ ತಸ್ಮಾನ್ನಾರಾಯಣಃ ಸ್ಮೃತಃ ।
ಪರ್ಜನ್ಯರೂಪೋ ಭಗವಾನ್ ವಿಷ್ಣುಸ್ಸರ್ವಗತಸ್ಸ್ಥಿತಃ || ೧೫ ||

ಸ ಏವ ಕುರುತೇ ವೃಷ್ಟಿಂ ವೃಷ್ಟೇರನ್ನಂ ತತಃ ಪ್ರಜಾಃ ।
ತದಭಾವೇ ನೃಪಶ್ರೇಷ್ಠ ಯೋಗಕ್ಷೇಮಂ ಯಥಾ ಭವೇತ್ || ೧೬ ||

|| ರಾಜೋವಾಚ ||

ಸತ್ಯಮುಕ್ತಂ ಭವದ್ಭಿಶ್ಚ ನ ಮಿಥ್ಯಾಭಿಹಿತಂ ಕ್ವಚಿತ್ ।
ಅನ್ನಂ ಬ್ರಹ್ಮ ಯತಃ ಪ್ರೋಕ್ತಮನ್ನೇ ಸರ್ವಂ ಪ್ರತಿಷ್ಠಿತಂ || ೧೭ ||

---

೧೪-೧೫. ಪ್ರಜೆಗಳು ಹೇಳಿದರು-ಎಲೈ ರಾಜನೆ! ಪ್ರಜೆಗಳ ಮಾತನ್ನು ಕೇಳು. ನೀರಿಗೆ "ನಾರಾ" ಎಂದು ಹೆಸರಿರುವುದೆಂದು ವಿದ್ವಾಂಸರು ಹೇಳುತ್ತಾರೆ. ಅವುಗಳಿಗೆ ಭಗವಂತನು ಮನೆಯು. ಆದುದರಿಂದಲೇ ಅವನಿಗೆ ನಾರಾಯಣನೆಂದು ಹೆಸರು ಬಂದಿರುವುದು. ಆ ದೇವರಾದ ವಿಷ್ಣುವು ಪರ್ಜನ್ಯ ರೂಪಾದವನು. ಆ ವಿಷ್ಣುವು ಎಲ್ಲಾ ಕಡೆಯಲ್ಲಿಯೂ ಇದ್ದಾನೆ.

೧೬. ಆ ವಿಷ್ಣುವೇ ಮಳೆಯನ್ನು ಹುಯ್ಯಿಸುವವನು. ಮಳೆಯಿಂದ ಅನ್ನವು ಬೆಳೆಯುತ್ತದೆ. ಅನ್ನದಿಂದ ಪ್ರಜೆಗಳು ಬದುಕುತ್ತಾರೆ. ಆ ಮಳೆಯಿಲ್ಲದಿದ್ದರೆ ಪ್ರಜೆಗಳು ನಾಶವಾಗುತ್ತಾರೆ. ಜನರಿಗೆ ಯೋಗಕ್ಷೇಮವುಂಟಾಗುವಂತೆ ಮಾಡು. (ಯೋಗ = ಇಲ್ಲದುದನ್ನು ಹೊಂದುವುದು. ಕ್ಷೇಮ = ಹೊಂದಿದುದನ್ನು ನೋಡಿಕೊಳ್ಳುವುದು.)

೧೭-೧೮. ರಾಜನು ಹೇಳಿದನು—ಎಲೈ ಪ್ರಜೆಗಳಿರಾ! ನೀವು ಹೇಳಿದುದು ನಿಶ್ಚಯವು. ಒಂದು ಸ್ವಲ್ಪವೂ ಸುಳ್ಳಲ್ಲ. ಅನ್ನವೇ ಬ್ರಹ್ಮವು. ಅನ್ನದಿಂದಲೇ

ಅನ್ನಾದ್ಭವಂತಿ ಭೂತಾನಿ ಜಗದನ್ನೇನ ವರ್ತತೇ ।
ಇತ್ಯೇವಂ ಶ್ರೂಯತೇ ಲೋಕೇ ಪುರಾಣೇ ಬಹುವಿಸ್ತರಂ ॥ ೧೮ ॥

ನೃಪಾಣಾಮುಪಚಾರೇಣ ಪ್ರಜಾನಾಂ ಪೀಡನಂ ಭವೇತ್ ।
ನಾಹಂ ಪಶ್ಯಾಮ್ಯಾತ್ಮಕೃತಮೇವಂ ಬುದ್ಧ್ಯಾ ವಿಚಾರಯನ್ ।
ತಥಾಪಿ ಪ್ರಯತಿಷ್ಯೇಽಹಂ ಪ್ರಜಾನಾಂ ಹಿತಕಾಮ್ಯಯಾ ॥ ೧೯ ॥

॥ ಬ್ರಹ್ಮೋವಾಚ ॥

ಇತಿ ಕೃತ್ವಾ ಮತಿಂ ರಾಜಾ ಪರಿಮೇಯಪರಿಚ್ಛದಃ ।
ನಮಸ್ಕೃತ್ಯ ವಿಧಾತಾರಂ ಜಗಾಮ ಗಹನಂ ವನಂ ॥ ೨೦ ॥

ಚಚಾರ ಮುನಿಮುಖ್ಯಾಂಶ್ಚ ಆಶ್ರಮಾಂಸ್ತಾಪಸೈಶ್ಚಿತಾನ್ ।
ದದರ್ಶಾಥ ಬ್ರಹ್ಮಸುತಮೃಷಿಮಂಗಿರಸಂ ನೃಪಃ ॥ ೨೧ ॥

ತೇಜಸಾ ದ್ಯೋತಿತದಿಶಂ ದ್ವಿತೀಯಮಿವ ಪದ್ಮಜಂ ।
ತಂ ದೃಷ್ಟ್ವಾ ಹರ್ಷಿತೋ ರಾಜಾ ಅವತೀರ್ಯ ಸ್ವವಾಹನಾತ್ ॥ ೨೨ ॥

---

ಎಲ್ಲವೂ ಇರುವುದು. ಅನ್ನದಿಂದಲೇ ಪ್ರಾಣಿಗಳಿರುವುದು. ಜಗತ್ತೆಲ್ಲವೂ ಕೂಡ ಅನ್ನದಿಂದಲೇ ನಡೆಯುತ್ತಿರುವುದು. ಈ ರೀತಿಯಾಗಿ ಜನಗಳೂ ಹೇಳುತ್ತಿರುವರಲ್ಲದೆ ಪುರಾಣದಲ್ಲಿಯೂ ವಿಸ್ತರವಾಗಿ ಹೇಳಿದೆ.

೧೯. ರಾಜರ ಅನಾಚಾರದಿಂದ ಪ್ರಜೆಗಳಿಗೆ ತೊಂದರೆಯುಂಟಾಗುತ್ತದೆ ನಾನು ಎಷ್ಟು ಯೋಚಿಸಿದರೂ ಏನು ತಪ್ಪನ್ನು ಮಾಡಿರುವೆನೆಂಬುದೇ ಗೊತ್ತಾಗುವುದಿಲ್ಲ. ಆದರೂ ಕೂಡ ಪ್ರಜೆಗಳ ಹಿತಕ್ಕೋಸ್ಕರ ಪ್ರಯತ್ನಪಡುತ್ತೇನೆ.

೨೦. ಬ್ರಹ್ಮನು ಹೇಳಿದನು–ರಾಜನು ಹೀಗೆಂದು ಹೇಳಿ ಅಲ್ಪ ಪರಿವಾರದ ಸಂಗಡ ಬ್ರಹ್ಮನಿಗೆ ನಮಸ್ಕರಿಸಿ ಒಂದು ದಟ್ಟವಾದ ಕಾಡಿಗೆ ಹೋದನು.

೨೧. ಆ ಕಾಡಿನಲ್ಲಿ ತಾಪಸರಿರುವ ಜಾಗವನ್ನೂ ಅದರಲ್ಲಿಯೂ ಮುಖ್ಯರಾದ ಮುನಿಗಳಿರುವ ಜಾಗವನ್ನೂ ಸುತ್ತಿದನು. ಕೊನೆಗೆ ಬ್ರಹ್ಮನ ಮಗನಾದ ಅಂಗೀರಸನ ಬಳಿಗೆ ಹೋಗಿ ಅವನನ್ನು ಕಂಡನು.

೨೨–೨೩. ಆ ಅಂಗೀರಸನ ತೇಜಸ್ಸು ದಿಕ್ಕುಗಳನ್ನು ಬೆಳಗುತ್ತಿದ್ದಿತು. ನೋಡಿದರೆ ಎರಡನೆಯ ಬ್ರಹ್ಮನಂತೆ ಇದ್ದನು. ಅವನನ್ನು ನೋಡಿದ ಒಡನೆಯೇ ರಾಜನಿಗೆ ಸಂತೋಷವುಂಟಾಗಿ ಕೂಡಲೇ ರಥದಿಂದ ಇಳಿದನು. ಋಷಿಯ ಬಳಿಗೆ

ನಮಶ್ಚಕ್ರೇಽಸ್ಯ ಚರಣೌ ಕೃತಾಂಜಲಿಪುಟೋ ವಶೀ ।
ಮುನಿಸ್ತಮಭಿನಂದ್ಯಾಥ ಸ್ವಸ್ತಿವಾಚನಪೂರ್ವಕಂ || ೨೩ ||

ಪಪ್ರಚ್ಛ ಕುಶಲಂ ರಾಜ್ಯೇ ಸಪ್ತಸ್ವಂಗೇಷು ಭೂಪತೇಃ ।
ಸ ನಿವೇದ್ಯ ಸ್ವಕುಶಲಂ ಪಪ್ರಚ್ಛಾನಾಮಯಂ ನೃಪಃ || ೨೪ ||

ದತ್ತಾಸನೋ ಗೃಹೀತಾರ್ಘ್ಯ ಉಪವಿಷ್ಟೋಽಸ್ಯ ಸನ್ನಿಧೌ ।
ಪ್ರತ್ಯುವಾಚ ಮುನಿಂ ರಾಜಾ ಪೃಷ್ಟೋ ಹ್ಯಾಗಮಕಾರಣಂ || ೨೫ ||

|| ರಾಜೋವಾಚ ||

ಭಗವನ್ ಧರ್ಮವಿಧಿನಾ ಮಮ ಪಾಲಯತೋ ಮಹೀಂ ।
ಅನಾವೃಷ್ಟಿಶ್ಚ ಸಂವೃತ್ತಾ ನಾಹಂ ವೇದ್ಮ್ಯತ್ರ ಕಾರಣಂ || ೨೬ ||

ಸಂಶಯಚ್ಛೇದನಾಯಾತ್ರ ಆಗತೋಽಹಂ ತವಾಂತಿಕೇ ।
ಯೋಗಕ್ಷೇಮವಿಧಾನೇನ ಪ್ರಜಾನಾಂ ಕುರು ನಿರ್ವೃತಿಂ || ೨೭ ||

---

ಬಂದು ಅವನ ಪಾದಗಳನ್ನು ನಮಸ್ಕರಿಸಿ ಕೈಮುಗಿದುಕೊಂಡು ನಿಂತನು. ಋಷಿಯೂ ಕೂಡ ಆ ಮಾಂಧಾತನನ್ನು ಸ್ವಸ್ತಿವಚನಗಳಿಂದ ಗೌರವಿಸಿ ಅವನನ್ನೂ ಅವನ ರಾಜ್ಯದ ಸಪ್ತಾಂಗಗಳ ಕುಶಲವನ್ನೂ ಕೇಳಿದನು.

೨೪-೨೫. ರಾಜನು ತನ್ನ ಯೋಗಕ್ಷೇಮವನ್ನು ಋಷಿಗೆ ತಿಳಿಸಿ ಅವನ ಕುಶಲವನ್ನೂ ಕೇಳಿದನು. ಆಮೇಲೆ ಋಷಿಯು ರಾಜನಿಗೆ ಆಸನವನ್ನು ಕೊಟ್ಟು ಅರ್ಘ್ಯ ಪಾದ್ಯಾದಿಗಳನ್ನೂ ಕೊಟ್ಟನು. ಅದರಲ್ಲಿ ರಾಜನು ಕುಳಿತುಕೊಂಡನು. ಋಷಿಯು ನೀನು ಬಂದ ಕಾರಣವೇನೆನ್ನಲು ಅದಕ್ಕೆ ರಾಜನು ಇಂತೆಂದನು.

೨೬. ರಾಜನು ಹೇಳಿದನು-ಎಲೈ ಭಗವಂತನೆ! ನಾನು ನ್ಯಾಯದಿಂದ ರಾಜ್ಯಭಾರ ಮಾಡುತ್ತಿದ್ದೇನೆ. ಆದರೂ ಇದಕ್ಕೆ ಕಾರಣವು ನನಗೆ ಗೊತ್ತಿಲ್ಲವು.

೨೭. ಅದರ ಸಂಶಯವನ್ನು ನಾಶಮಾಡಿಕೊಳ್ಳಲು ನಿನ್ನ ಬಳಿಗೆ ಬಂದಿರುವೆನು. ಯೋಗಕ್ಷೇಮವನ್ನುಂಟುಮಾಡೋಣದರಿಂದ ಪ್ರಜೆಗಳಿಗೆ ಸುಖವನ್ನುಂಟುಮಾಡು.

|| ಋಷಿರುವಾಚ ||

ಏತತ್ಕೃತಯುಗಂ ರಾಜನ್ ಯುಗಾನಾಮುತ್ತಮಂ ಮತಂ ।
ಅತ್ರ ಬ್ರಹ್ಮಪರಾ ಲೋಕಾ ಧರ್ಮಶ್ಚಾತ್ರ ಚತುಷ್ಪದಃ || ೨೮ ||

ಅಸ್ಮಿನ್ ಯುಗೇ ತಪೋಯುಕ್ತಾ ಬ್ರಾಹ್ಮಣಾ ನೇತರೇ ಜನಾಃ ।
ವಿಷಯೇ ತವ ರಾಜೇಂದ್ರ ವೃಷಲೋಯಂ ತಪಸ್ಯತಿ || ೨೯ ||

ಏತಸ್ಮಾತ್ಕಾರಣಾಚ್ಚೈವ ನ ವರ್ಷಂತಿ ವಲಾಹಕಾಃ ।
ಕುರು ತಸ್ಯ ವಧೇ ಯತ್ನಂ ಯೇನ ದೋಷಃ ಪ್ರಶಾಮ್ಯತಿ || ೩೦ ||

|| ರಾಜೋವಾಚ ||

ನಾಹಮೇತಂ ವಧಿಷ್ಯಾಮಿ ತಪಸ್ಯಂತಮನಾಗಸಂ ।
ಧರ್ಮೋಪದೇಶಂ ಕಥಯ ಉಪಸರ್ಗವಿನಾಶನಂ || ೩೧ ||

---

೨೮. ಋಷಿಯು ಹೇಳಿದನು–ಎಲೈ ದೊರೆಯೆ! ಇದು ಕೃತಯುಗವು. ಯುಗಗಳಲ್ಲೆಲ್ಲಾ ಉತ್ತಮವಾದುದು. ಈ ಯುಗದಲ್ಲಿ ಜನರೆಲ್ಲಾ ಧರ್ಮದಲ್ಲಿ ಆಸಕ್ತಿಯುಳ್ಳವರು. ಧರ್ಮವು ಈ ಯುಗದಲ್ಲಿ ನಾಲ್ಕು ಕಾಲಿನಲ್ಲಿ ನಿಂತಿರುವುದು.

೨೯. ಈ ಯುಗದಲ್ಲಿ ತಪಸ್ಸನ್ನು ಬ್ರಾಹ್ಮಣರು ಮಾಡಬೇಕೇ ಹೊರತು ಬೇರೆಯವರು ಮಾಡಕೂಡದು. ಈಗ ನಿನ್ನ ದೇಶದಲ್ಲಿ ಒಬ್ಬ ಶೂದ್ರನು ತಪಸ್ಸು ಮಾಡುತ್ತಿರುವನು.

೩೦. ಈ ಕಾರಣದಿಂದಲೇ ಮೋಡಗಳು ಮಳೆಯನ್ನು ಸುರಿಸುವುದಿಲ್ಲ. ಅವನ ವಧೆಯಲ್ಲಿ ಪ್ರಯತ್ನಿಸು. ಆಗ ದೋಷವು ಹೋಗುತ್ತದೆ.

೩೧. ರಾಜನು ಹೇಳಿದನು–ತಪಸ್ಸು ಮಾಡುತ್ತಿರುವ ತಪ್ಪಿಲ್ಲದ ಆತನನ್ನು ನಾನು ಕೊಲ್ಲುವುದಿಲ್ಲ. ಈ ಪ್ರಜೆಗಳ ತೊಂದರೆಯೂ ಶೂದ್ರನು ತಪಸ್ಸು ಮಾಡುತ್ತಿರುವುದರಿಂದ ಬಂದಿರುವ ದೋಷವೂ ಹೋಗುವಂತಹ ಒಂದು ಧರ್ಮವನ್ನು ಹೇಳು.

|| ಋಷಿರುವಾಚ ||

ಯದ್ಯೇವಂ ತರ್ಹಿ ನೃಪತೇ ಕುರುಷ್ವೈಕಾದಶೀವ್ರತಂ ।
ನಭಸ್ಯಸ್ಯ ಸಿತೇ ಪಕ್ಷೇ ಪದ್ಮನಾಭೇತಿ ವಿಶ್ರುತಾ || ೩೨ ||

ತಸ್ಯಾ ವ್ರತಪ್ರಭಾವೇಣ ಸುವೃಷ್ಟಿರ್ಭವಿತಾ ಧ್ರುವಂ ।
ಸರ್ವಸಿದ್ಧಿಪ್ರದಾ ಹ್ಯೇಷಾ ಸರ್ವೋಪದ್ರವನಾಶಿನೀ
ಅಸ್ಯಾ ವ್ರತಂ ಕುರು ನೃಪ ಸಪ್ರಜಃ ಸಪರಿಚ್ಛದಃ । || ೩೩ ||

|| ಬ್ರಹ್ಮೋವಾಚ ||

ಇತಿ ವಾಕ್ಯಮೃಷೇಶ್ಶ್ರುತ್ವಾ ರಾಜಾ ಸ್ವಗೃಹಮಾಗತಃ ।
ಭಾದ್ರಮಾಸೇ ಸಿತೇ ಪಕ್ಷೇ ಪದ್ಮಾವ್ರತಮಥಾಕರೋತ್ || ೩೪ ||

ಪ್ರಜಾಭಿಸ್ಸಹ ಸ್ಸರ್ವಾಭಿಶ್ಚಾತುರ್ವರ್ಣ್ಯಸಮನ್ವಿತಃ ।
ಏವಂ ವ್ರತೇ ಕೃತೇ ರಾಜ್ಞ ಪ್ರವವರ್ಷ ಬಲಾಹಕಃ || ೩೫ ||

ಜಲೇನ ಪ್ಲಾವಿತಾ ಭೂಮಿರಭವತ್ಸಸ್ಯಶಾಲಿನೀ ।
ಋಷೀಶ್ವರಪ್ರಭಾವೇಣ ಲೋಕಾಸ್ಸೌಖ್ಯಂ ಪ್ರಪೇದಿರೇ || ೩೬ ||

---

೩೨-೩೩. ಋಷಿಯು ಹೇಳಿದನು–ಎಲೈ ದೊರೆಯೆ! ಹಾಗಾದರೆ ಭಾದ್ರಪದ ಮಾಸದಲ್ಲಿ "ಪದ್ಮನಾಭೈಕಾದಶಿ" ಎಂದು ಪ್ರಸಿದ್ಧವಾಗಿರುವ ಏಕಾದಶೀ ವ್ರತವನ್ನು ಮಾಡು. ಆ ವ್ರತದ ಪ್ರಭಾವದಿಂದ ಖಂಡಿತವಾಗಿಯೂ ಒಳ್ಳೆಯ ಮಳೆ ಬರುತ್ತದೆ. ಈ ವ್ರತವು ಸರ್ವಸಿದ್ಧಿಯನ್ನೂ ಕೊಡುತ್ತದೆ. ಎಲ್ಲಾ ತೊಂದರೆಗಳನ್ನೂ ನಾಶಮಾಡುತ್ತದೆ. ಪ್ರಜೆಗಳೊಡನೆಯೂ ಪರಿವಾರಗಳೊಡನೆಯೂ ಈ ವ್ರತವನ್ನು ಮಾಡು.

೩೪-೩೬. ಬ್ರಹ್ಮನು ಹೇಳಿದನು–ಋಷಿಯ ಈ ಮಾತನ್ನು ಕೇಳಿ ರಾಜನು ಮನೆಗೆ ಬಂದು ಭಾದ್ರಪದ ಶುದ್ಧದ ಏಕಾದಶೀ ದಿವಸ ಪದ್ಮನಾಭ ವ್ರತವನ್ನು ಚತುರ್ವರ್ಣದ ಪ್ರಜೆಗಳ ಸಂಗಡ ಮಾಡಿದನು. ಹೀಗೆ ಮಾಡಲು ಮಳೆಯು ಬೇಕಾದಂತೆ ಬಂದಿತು. ಭೂಮಿಯಲ್ಲಿ ನೀರು ಸಮೃದ್ಧಿಯಾಗಿ ಬಿದ್ದಿತು. ಆಗ ಸಸ್ಯಗಳು ಚೆನ್ನಾಗಿ ಬೆಳೆದುವು. ಋಷಿಯ ಪ್ರಭಾವದಿಂದ ಎಲ್ಲರೂ ಸೌಖ್ಯವನ್ನು ಹೊಂದಿದರು.

|| ಶ್ರೀಕೃಷ್ಣ ಉವಾಚ ||

ಏತಸ್ಮಾತ್ಕಾರಣಾದೇವ ಕರ್ತವ್ಯಂ ವ್ರತಮುತ್ತಮಂ ।
ದಧ್ಯೋದನಯುತಂ ತಸ್ಯಾಂ ಜಲಪೂರ್ಣಂ ಘಟಂ ದ್ವಿಜೇ || ೩೭ ||

ವಸ್ತ್ರಂ ಸಂವೇಷ್ಟಿತಂ ದತ್ವಾ ಛತ್ರೋಪಾನಹಮೇವ ಚ ।
ನಮೋ ನಮಸ್ತೇ ಗೋವಿಂದ ಬುಧಶ್ರವಣಸಂಜ್ಞಕ || ೩೮ ||

ಅಘೌಘಸಂಕ್ಷಯಂ ಕೃತ್ವಾ ಸರ್ವಸೌಖ್ಯಪ್ರದೋ ಭವ ।
ಭುಕ್ತಿಮುಕ್ತಿಪ್ರದಶ್ಚೈವ ಲೋಕಾನಾಂ ಸುಖದಾಯಕಃ ||
ಪಠನಾಚ್ಛ್ರವಣಾದ್ರಾಜನ್ ಸರ್ವಪಾಪೈಃ ಪ್ರಮುಚ್ಯತೇ || ೩೯ ||

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಪತಿ ನಾರದ
ಸಂವಾದಾಂತರ್ಗತ ಶ್ರೀ ಕೃಷ್ಣ ಯುಧಿಷ್ಠಿರ ಸಂವಾದೇ
ಭಾದ್ರಪದ ಶುಕ್ಲ ಪದ್ಮೈಕಾದಶೀ ವರ್ಣನಂ ನಾಮ
ಏಕೋನಷಷ್ಟಿತಮೋಽಧ್ಯಾಯಸ್ಸಮಾಪ್ತಃ

---

೩೭. ಶ್ರೀ ಕೃಷ್ಣನು ಹೇಳಿದನು–ಈ ಕಾರಣದಿಂದ ಈ ಉತ್ತಮವ್ರತವನ್ನು ಮಾಡಬೇಕು. ಒಂದು ನೀರಿನಿಂದ ಕೂಡಿದ ಕಲಶವನ್ನೂ ಜೊತೆಯಲ್ಲಿ ಮೊಸರನ್ನ ವನ್ನೂ ಕೊಡಬೇಕು. ಆ ಕಲಶಕ್ಕೆ ವಸ್ತ್ರವನ್ನು ಹೊದ್ದಿಸಿರಬೇಕು. ಛತ್ರಿ ಜೋಡು ಗಳನ್ನು ದಾನ ಮಾಡಬೇಕು.

೩೮-೩೯. ಎಲೈ ಬುಧಸಂಜ್ಞೆಯುಳ್ಳ ಗೋವಿಂದನೆ! ನಿನಗೆ ನಮಸ್ಕಾರವು. ನನ್ನ ಪಾಪಗಳನ್ನೆಲ್ಲಾ ನಾಶಮಾಡಿ ಎಲ್ಲಾ ಸೌಖ್ಯಗಳನ್ನೂ ಕೊಡು. ಈ ವ್ರತವು ಭುಕ್ತಿ ಮುಕ್ತಿಗಳನ್ನು ಕೊಟ್ಟು ಲೋಕಕ್ಕೆ ಸುಖವನ್ನುಂಟುಮಾಡುವುದು. ಇದನ್ನು ಓದುವುದರಿಂದಲೂ ಕೇಳುವುದರಿಂದಲೂ ಎಲ್ಲಾ ಪಾಪಗಳೂ ಹೋಗುತ್ತವೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಪತಿ
ನಾರದರ ಸಂವಾದದೊಳಗಿನ ಕೃಷ್ಣ ಯುಧಿಷ್ಠಿರರ ಸಂವಾದವಲ್ಲಿ
ಆಷಾಢ ಶುಕ್ಲ ಪದ್ಮೈಕಾದಶಿಯ ವರ್ಣನೆ ಎಂಬ
ಐವತ್ತೊಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಷಷ್ಟಿತಮೋಽಧ್ಯಾಯಃ ॥



**॥ ಯುಧಿಷ್ಠಿರ ಉವಾಚ ॥**

**ಕಥಯಸ್ವ ಪ್ರಸಾದೇನ ಮಮಾಗ್ರೇ ಮಧುಸೂದನ ।**
**ಇಷಸ್ಯ ಕೃಷ್ಣಪಕ್ಷೇ ತು ಕಿನ್ನಾಮ್ನ್ಯೇಕಾದಶೀ ಭವೇತ್ ॥ ೧ ॥**

**॥ ಶ್ರೀಕೃಷ್ಣ ಉವಾಚ ॥**

**ಆಶ್ವಿನೇ ಕೃಷ್ಣಪಕ್ಷೇ ತು ಇಂದಿರಾ ನಾಮ ನಾಮತಃ ।**
**ತಸ್ಯಾ ವ್ರತಪ್ರಭಾವೇಣ ಮಹಾಪಾಪಂ ಪ್ರಣಶ್ಯತಿ ॥ ೨ ॥**

**ಅಧೋ ಯೋನಿಗತಾನಾಂ ಚ ಪಿತೄಣಾಂ ಗತಿದಾಯಿನೀ ।**
**ಶೃಣುಷ್ವಾವಹಿತೋ ರಾಜನ್ ಕಥಾಂ ಪಾಪಹರಾಂ ಪರಾಂ ॥ ೩ ॥**

---

## ಅರವತ್ತನೆಯ ಅಧ್ಯಾಯವು



೧. ಯುಧಿಷ್ಠಿರನು ಹೇಳಿದನು– ಎಲೈ ಮಧುಸೂದನನೆ! ಆಶ್ವಯುಜ ಕೃಷ್ಣಪಕ್ಷದಲ್ಲಿ ಬರುವ ಏಕಾದಶಿಗೆ ಹೆಸರೇನು? ದಯವಿಟ್ಟು ಹೇಳು.

೨. ಶ್ರೀ ಕೃಷ್ಣನು ಹೇಳಿದನು–ಆಶ್ವಯುಜ ಕೃಷ್ಣಪಕ್ಷದಲ್ಲಿ ಬರುವ ಏಕಾದಶಿಗೆ ಇಂದಿರಾ ಏಕಾದಶಿಯೆಂದು ಹೆಸರು. ಅದನ್ನು ಆಚರಿಸಿದರೆ ಮಹಾ ಪಾಪಗಳು ನಾಶವಾಗುತ್ತವೆ.

೩. ಪಿತೃಗಳು ನರಕದಲ್ಲಿರಲಿ ಕೀಳು ಜನ್ಮದಲ್ಲಿ ಹುಟ್ಟಿರಲಿ ಅವರಿಗೆ ಈ ವ್ರತವನ್ನು ಆಚರಿಸುವುದರಿಂದ ಉತ್ತಮಗತಿಯು ಬರುತ್ತದೆ. ಪಾಪಹಾರಕವಾದ ಇದರ ವಿಷಯವನ್ನು ಹೇಳುತ್ತೇನೆ. ಮನಸ್ಸಿಟ್ಟು ಕೇಳು.

ಯಸ್ಯಾ ಶ್ರವಣಮಾತ್ರೇಣ ವಾಜಪೇಯಫಲಂ ಲಭೇತ್ ।
ಪುರಾ ಕೃತಯುಗೇ ರಾಜನ್ ಬಭೂವ ನೃಪನಂದನಃ ॥ ೪ ॥

ಇಂದ್ರಸೇನ ಇತಿ ಖ್ಯಾತಃ ಪುರಾ ಮಾಹಿಷ್ಮತೀಪತಿಃ ।
ಸ ರಾಜಾ ಪಾಲಯಾಮಾಸ ಧರ್ಮೇಣ ಯಶಸಾನ್ವಿತಃ ॥ ೫ ॥

ಪುತ್ರಪೌತ್ರಸಮಾಯುಕ್ತೋ ಧನಧಾನ್ಯಸಮನ್ವಿತಃ ।
ಮಾಹಿಷ್ಮತ್ಯಧಿಪೋ ರಾಜಾ ವಿಷ್ಣುಭಕ್ತಿಪರಾಯಣಃ ॥ ೬ ॥

ಜಪನ್ ಗೋವಿಂದನಾಮಾನಿ ಮುಕ್ತಿದಾನಿ ನರಾಧಿಪ ।
ಕಾಲಂ ನಯತಿ ವಿಧಿವದಧ್ಯಾತ್ಮಧ್ಯಾನಚಿಂತಕಃ ॥ ೭ ॥

ಏಕಸ್ಮಿನ್ ದಿವಸೇ ರಾಜ್ಞಿ ಸುಖಾಸೀನೇ ಸದೋಗತೇ ।
ಅವತೀರ್ಯಾಗಮತ್ತತ್ರ ಹ್ಯಂಬರಾನ್ನಾರದೋ ಮುನಿಃ ॥ ೮ ॥

ತಮಾಗತಮಭಿಪ್ರೇಕ್ಷ್ಯ ಪ್ರತ್ಯುತ್ಥಾಯ ಕೃತಾಂಜಲಿಃ ।
ಪೂಜಯಿತ್ವಾಥ ವಿಧಿನಾ ಚಾಸನೇ ಸ ನ್ಯವೇಶಯತ್ ॥
ಸುಖೋಪವಿಷ್ಟಂ ಸ ಮುನಿಂ ಪ್ರತ್ಯುವಾಚ ನೃಪೋತ್ತಮಃ ॥ ೯ ॥

---

೪-೬. ಈ ವ್ರತದ ಮಹಿಮೆಯನ್ನು ಕೇಳುವುದರಿಂದಲೇ ವಾಜಪೇಯ ಯಾಗದ ಫಲವು ಬರುತ್ತದೆ. ಎಲೈ ರಾಜನೆ! ಪೂರ್ವದಲ್ಲಿ ಕೃತಯುಗದಲ್ಲಿ ಮಾಹಿಷ್ಮತಿಯಲ್ಲಿ ಇಂದ್ರಸೇನನೆಂಬ ರಾಜನೊಬ್ಬನಿದ್ದನು. ಆ ರಾಜನು ಮಕ್ಕಳು ಮೊಮ್ಮಕ್ಕಳೊಡನೆ ಕೂಡಿಕೊಂಡು ಧನ. ಧಾನ್ಯ ಸಮೃದ್ಧಿವಂತನಾಗಿ ಧರ್ಮದಿಂದ ರಾಜ್ಯಭಾರ ಮಾಡುತ್ತಿದ್ದನು. ಮತ್ತು ವಿಷ್ಣುಭಕ್ತರಲ್ಲಿ ಮೊದಲನೆಯವನಾಗಿದ್ದನು.

೭-೮. ಅವನು ಯಾವಾಗಲೂ ಗೋವಿಂದನಾಮಗಳನ್ನೇ ಜಪಿಸುತ್ತಾ ದಾನ ಧರ್ಮಗಳನ್ನು ಮಾಡುತ್ತ ಪರಮಾತ್ಮ ಚಿಂತಾಸಕ್ತನಾಗಿ ಕಾಲವನ್ನು ಕಳೆಯುತ್ತಿದ್ದನು. ಒಂದುದಿನ ಸಭೆಯಲ್ಲಿ ಆ ರಾಜನು ಕುಳಿತಿರಲು ನಾರದನು ಅಂತರಿಕ್ಷದಿಂದ ಇಳಿದು ಅಲ್ಲಿಗೆ ಬಂದನು.

೯. ನಾರದನು ಬಂದುದನ್ನು ನೋಡಿ ಅವನನ್ನು ಎದುರುಗೊಂಡು ಅರ್ಘ್ಯ ಪಾದ್ಯಾದಿಗಳನ್ನು ಕೊಟ್ಟು ಆಸನದಲ್ಲಿ ಕೂರಿಸಿ ಕೈಮುಗಿದುಕೊಂಡು ಇಂತೆಂದನು.

॥ ರಾಜೋವಾಚ ॥

ತ್ವತ್ಪ್ರಸಾದಾನ್ಮುನಿಶ್ರೇಷ್ಠ ಸರ್ವಂ ಚ ಕುಶಲಂ ಮಮ ।
ಮಮ ಕ್ರತುಕ್ರಿಯಾಸ್ಸರ್ವಾಸ್ಸಫಲಾಸ್ತವ ದರ್ಶನಾತ್ ॥ ॥ ೧೦ ॥

ಪ್ರಸಾದಂ ಕುರು ದೇವರ್ಷೇ ಬ್ರಹನ್ನಾಗಮಕಾರಣಾತ್ ॥ ೧೧ ॥

॥ ನಾರದ ಉವಾಚ ॥

ಶ್ರೂಯತಾಂ ನೃಪಶಾರ್ದೂಲ ಮದ್ವಚೋ ವಿಸ್ಮಯಪ್ರದಂ ।
ಬ್ರಹ್ಮಲೋಕಾದಹಂ ಪ್ರಾಪ್ತೋ ಯಮಲೋಕಂ ನೃಪೋತ್ತಮ ॥ ೧೨ ॥

ಶಮನೇನಾರ್ಚಿತೋ ಭಕ್ತ್ಯಾ ಉಪವಿಷ್ಟೋ ವರಾಸನೇ ।
ಧರ್ಮಶೀಲಾಸ್ಸತ್ಯವಂತೋ ಭಾಸ್ಕರಿಂ ಸಮುಪಾಸತೇ ॥ ೧೩ ॥

ಬಹುಪುಣ್ಯಪ್ರಕರ್ತಾರೋ ವ್ರತವ್ಯೆಕಲ್ಯದೋಷತಃ ।
ಸಭಾಯಾಂ ಶ್ರಾದ್ಧದೇವಸ್ಯ ಮಯಾ ದೃಷ್ಟಃ ಪಿತಾ ತವ ॥ ೧೪ ॥

---

೧೦-೧೧. ರಾಜನು ಹೇಳಿದನು—ಎಲೈ ಮುನಿಯೇ! ನಿನ್ನ ಅನುಗ್ರಹದಿಂದ ನನಗೆ ಎಲ್ಲದಲ್ಲಿಯೂ ಕ್ಷೇಮವಿದೆ. ನಿನ್ನ ದರ್ಶನದಿಂದ ನನ್ನ ಯಾಗ ಮುಂತಾದುವುಗಳೆಲ್ಲಾ ಸಫಲವಾದುವು. ದಯವಿಟ್ಟು ನೀನು ಬಂದ ಕಾರಣವನ್ನು ಹೇಳು.

೧೨. ನಾರದನು ಹೇಳಿದನು— ಎಲೈ ದೊರೆಯೇ! ಕೇಳು. ನಾನು ಹೇಳುವ ಮಾತು ಆಶ್ಚರ್ಯಕರವಾಗಿರುವುದು. ಬ್ರಹ್ಮಲೋಕದಿಂದ ಯಮಲೋಕಕ್ಕೆ ಹೋಗಿದ್ದೆನು.

೧೩. ಅಲ್ಲಿ ಯಮನು ಭಕ್ತಿಯಿಂದ ನನ್ನನ್ನು ಪೂಜಿಸಿದನು. ಅನಂತರ ಆಸನದಲ್ಲಿ ಕುಳಿತುಕೊಂಡೆನು. ಅನೇಕ ಜನ ಧರ್ಮಿಷ್ಠರೂ ಸತ್ಯವಂತರೂ ಆ ಯಮನನ್ನು ಸೇವಿಸುತ್ತಿದ್ದರು.

೧೪. ಇನ್ನೂ ಅನೇಕ ಜನ ಪುಣ್ಯವಂತರೂ ಆ ಯಮನ ಸಭೆಯಲ್ಲಿದ್ದರು. ವ್ರತವನ್ನು ವ್ಯತ್ಯಾಸವಾಗಿ ಮಾಡಿ ದೋಷವನ್ನು ಹೊಂದಿದ ನಿನ್ನ ತಂದೆಯನ್ನು ನಾನು ಅಲ್ಲಿ ನೋಡಿದನು.

ಕಥಿತಸ್ತೇನ ಸಂದೇಶಸ್ತಂ ನಿಬೋಧ ಜನೇಶ್ವರ ।
ಇಂದ್ರಸೇನ ಇತಿ ಖ್ಯಾತೋ ರಾಜಾ ಮಾಹಿಷ್ಮತೀಪತಿಃ　　　　|| ೧೫ ||

ತಸ್ಯಾಗ್ರೇ ಕಥಯ ಬ್ರಹ್ಮನ್ ಸ್ಥಿತಂ ಮಾಂ ಯಮಸನ್ನಿಧೌ ।
ಕೇನಾಪಿ ಚಾಂತರಾಯೇಣ ಪೂರ್ವಜನ್ಮೋದ್ಭವೇನ ಚ　　　　|| ೧೬ ||

ಸ್ವರ್ಗಂ ಪ್ರಣಯ ಮಾಂ ಪುತ್ರ ಇಂದಿರಾಪುಣ್ಯದಾನತಃ ।
ಇತ್ಯುಕ್ತೋಽಹಂ ಸಮಾಯಾತಃ ಸಮೀಪಂ ತವ ಪಾರ್ಥಿವ ||
ಪಿತುಸ್ಸ್ವರ್ಗಕೃತೇ ರಾಜನ್ನಿಂದಿರಾವ್ರತಮಾಚರ　　　　|| ೧೭ ||

|| ರಾಜೋವಾಚ ||

ಕಥಯಸ್ವ ಪ್ರಸಾದೇನ ಭಗವನ್ನಿಂದಿರಾವ್ರತಂ ।
ವಿಧಿನಾ ಕೇನ ಕರ್ತವ್ಯಂ ತಸ್ಮಿನ್ ಪಕ್ಷೇ ತಿಥೌ ತಥಾ　　　　|| ೧೮ ||

|| ನಾರದ ಉವಾಚ ||

ಶೃಣು ರಾಜೇಂದ್ರ ತೇ ವಚ್ಮಿ ವ್ರತಸ್ಯಾಸ್ಯ ವಿಧಿಂ ಶುಭಂ ।
ಆಶ್ವಿನಸ್ಯಾಸಿತೇ ಪಕ್ಷೇ ದಶಮೀದಿವಸೇ ಶುಭೇ　　　　|| ೧೯ ||

---

೧೫–೧೬. ಅವನು ನಿನಗೆ ಒಂದು ಮಾತನ್ನು ಹೇಳಿ ಕಳುಹಿಸಿರುವನು. ಕೇಳು. ಎಲೈ ನಾರದನೇ ! ಮಾಹಿಷ್ಮತೀ ನಗರದಲ್ಲಿ ಇಂದ್ರಸೇನನೆಂಬ ರಾಜ ನಿದ್ದಾನೆ. ಅವನ ಬಳಿಗೆ ಹೋಗಿ " ನಿನ್ನ ತಂದೆಯು ಹಿಂದಿನ ಜನ್ಮದ ಯಾವುದೋ ಪಾಪದಿಂದ ಯಮನ ಸಭೆಯಲ್ಲಿದ್ದಾನೆ " ಎಂದು ಹೇಳು.

೧೭. ಎಲೈ ಮಗನೇ ! ಇಂದಿರಾ ದಾನದಿಂದ ನನ್ನನ್ನು ಸ್ವರ್ಗಕ್ಕೆ ಹೋಗುವಂತೆ ಮಾಡು. ಎಂದು ಹೇಳಿದನು. ಆದುದರಿಂದ ನಾನು ನಿನ್ನ ಬಳಿಗೆ ಬಂದೆನು. ಇಂದಿರಾ ವ್ರತದ ದಾನದಿಂದ ತಂದೆಯು ಸ್ವರ್ಗಕ್ಕೆ ಹೋಗುವಂತೆ ಮಾಡು.

೧೮. ರಾಜನು ಹೇಳಿದನು– ಎಲೈ ನಾರದನೇ ! ಆ ಇಂದಿರಾ ವ್ರತವನ್ನು ಯಾವಾಗ ಮಾಡಬೇಕು ? ಅದಕ್ಕೆ ನಿಯಮವೇನು ? ಅದು ಬರತಕ್ಕದ್ದು ಯಾವ ತಿಂಗಳು ? ಯಾವ ಪಕ್ಷ ? ಎಲ್ಲವನ್ನೂ ದಯವಿಟ್ಟು ಹೇಳು

೧೯-೨೨. ನಾರದನು ಹೇಳಿದನು- ಎಲೈ ರಾಜನೇ ! ಈ ವ್ರತದ ವಿಧಿ ಯನ್ನು ಹೇಳುತ್ತೇನೆ ಕೇಳು. ಆಶ್ವಯುಜ ಮಾಸದ ಕೃಷ್ಣಪಕ್ಷದ ದಶಮಿಯ ದಿನ

ಪ್ರಾತಸ್ಸ್ನಾನಂ ಪ್ರಕುರ್ವೀತ ಶ್ರದ್ಧಾಯುಕ್ತೇನ ಚೇತಸಾ ।
ತತೋ ಮಧ್ಯಾಹ್ನಸಮಯೇ ಸ್ನಾನಂ ಕೃತ್ವಾ ಸಮಾಹಿತಃ ॥ ೨೦ ॥

ಏಕಭುಕ್ತಂ ತತಃ ಕೃತ್ವಾ ರಾತ್ರೌ ಭೂಮೌ ಶಯೀತ ಚ ॥
ಪ್ರಭಾತೇ ವಿಮಲೇ ಜಾತೇ ಪ್ರಾಪ್ತೇ ಚೈಕಾದಶೀದಿನೇ ॥ ೨೧ ॥

ಮುಖಪ್ರಕ್ಷಾಳನಂ ಕುರ್ಯಾದ್ದಂತಧಾವನಪೂರ್ವಕಂ ।
ಉಪವಾಸಸ್ಯ ನಿಯಮಂ ಗೃಹ್ಣೀಯಾದ್ಭಕ್ತಿಭಾವತಃ ॥ ೨೨ ॥

ಅದ್ಯ ಸ್ಥಿತ್ವಾ ನಿರಾಹಾರಃ ಸರ್ವಭೋಗವಿವರ್ಜಿತಃ ।
ಶ್ವೋ ಭೋಕ್ಷ್ಯೇ ಪುಂಡರೀಕಾಕ್ಷ ಶರಣಂ ಮೇ ಭವಾಚ್ಯುತ ॥ ೨೩ ॥

ಇತ್ಯೇವಂ ನಿಯಮಂ ಕೃತ್ವಾ ಮಧ್ಯಾಹ್ನಸಮಯೇ ತಥಾ ।
ಶಾಲಗ್ರಾಮಶಿಲಾಗ್ರೇ ತು ಶ್ರಾದ್ಧಂ ಕುರ್ಯಾದ್ಯಥಾವಿಧಿ ॥ ೨೪ ॥

---

ಬೆಳಗ್ಗೆ ಎದ್ದು ಶ್ರದ್ಧೆಯಿಂದ ಸ್ನಾನಾಹ್ನಿಕಗಳನ್ನು ಮಾಡಬೇಕು. ಅನಂತರ ಮಧ್ಯಾಹ್ನದಲ್ಲಿ ಸ್ನಾನಮಾಡಿ ಊಟಮಾಡಬೇಕು. ಆದಿನ ಒಂದೇ ಹೊತ್ತು ಊಟಮಾಡಬೇಕು. ಅನಂತರ ಊಟಮಾಡಬಾರದು. ರಾತ್ರಿಯಲ್ಲಿ ನೆಲದ ಮೇಲೆ ಮಲಗಬೇಕು. ಬೆಳಗ್ಗೆ ಎದ್ದು ಏಕಾದಶಿಯ ದಿನದಲ್ಲಿ ಮುಖವನ್ನು ತೊಳೆದುಕೊಳ್ಳಬೇಕು ಹಲ್ಲನ್ನುಜ್ಜಿಕೊಳ್ಳಬೇಕು. ಭಕ್ತಿಯಿಂದ ಉಪವಾಸದ ನಿಯಮವನ್ನು ಹಿಡಿಯಬೇಕು.

೨೩. ಈದಿನ ಆಹಾರವನ್ನು ತೆಗೆದುಕೊಳ್ಳದೆ ಯಾವ ಸುಖವನ್ನೂ ಹೊಂದದೆ ಇದ್ದು ನಾಳೆಯ ದಿನ ಊಟಮಾಡುತ್ತೇನೆ. ಎಲೈ ಅಚ್ಯುತನೇ ! ನನ್ನನ್ನು ಕಾಪಾಡು.

೨೪. ಈರೀತಿಯಾಗಿ ನಿಯಮವನ್ನು ಮಾಡಿಕೊಂಡು ಮಧ್ಯಾಹ್ನದಲ್ಲಿ ಸಾಲಿಗ್ರಾಮಶಿಲೆಯನ್ನು ಹತ್ತಿರವಿಟ್ಟುಕೊಂಡು ಶಾಸ್ತ್ರದಂತೆ ಶ್ರಾದ್ಧವನ್ನು ಮಾಡಬೇಕು.

ಪಿತೄಣಾಂ ಪ್ರೀತಯೇ ಶ್ರಾದ್ಧಂ ಕುರ್ಯಾಚ್ಛ್ರದ್ಧಾಸಮನ್ವಿತಃ ।
ಗೋಧೂಮಚೂರ್ಣೈರ್ಯಚ್ಛ್ರಾದ್ಧಂ ಕೃತಂ ಮಧ್ಯಕೃತಂ ಭವೇತ್॥೨೫॥

ಯವೈರ್ವ್ರೀಹಿತಿಲೈರ್ಮಾಷೈರ್ಗೋಧೂಮೈಶ್ಚಣಕೈಸ್ತಥಾ ।
ಶ್ರಾದ್ಧಂ ಕೃತ್ವಾತು ಯೋ ವಿಪ್ರೋ ನ ಭುಂಕ್ತೇ ಪಿತೃಸೇವಿತಂ ॥ ೨೬ ॥

ಅನ್ನಾಶ್ರಿತಾನಿ ಪಾಪಾನಿ ಕ್ಷಯಾಯೇತರವಾಸರೇ ।
ಬ್ರಾಹ್ಮಣಾನ್ಭೋಜಯೇದ್ರಾಜನ್ ದಕ್ಷಿಣಾಭಿಶ್ಚ ಪೂಜಿತಾನ್ ॥ ೨೭ ॥

ಪಿತ್ರ್ಯಮನ್ನಂ ಸಮಾಘ್ರಾಯ ಗವೇ ದದ್ಯಾದ್ವಿಚಕ್ಷಣಃ ।
ಪೂಜಯಿತ್ವಾ ಹೃಷೀಕೇಶಂ ಧೂಪಗಂಧಾದಿಭಿಸ್ತಥಾ ॥ ೨೮ ॥

ರಾತ್ರೌ ಜಾಗರಣಂ ಕುರ್ಯಾತ್ ಕೇಶವಸ್ಯ ಸಮೀಪತಃ ।
ತತಃ ಪ್ರಭಾತಸಮಯೇ ಪ್ರಾಪ್ತೇ ವೈ ದ್ವಾದಶೀದಿನೇ ॥ ೨೯ ॥

---

೨೫-೨೬. ಆದಿನ ಮಧ್ಯಾಹ್ನದಲ್ಲಿ ಪಿತೃಗಳ ಪ್ರೀತಿಗೋಸ್ಕರ ಗೋಧಿಹಿಟ್ಟುಗಳನ್ನು ಬಾಕಿ ಶ್ರಾದ್ಧಮಾಡಬೇಕು. ( ಆಮಶ್ರಾದ್ಧ ಮಾಡಬೇಕು. ) ಇದು ಮಧ್ಯಮವು. ಯವ, ಅಕ್ಕಿ, ಎಳ್ಳು, ಉದ್ದು, ಗೋಧಿ, ಕಡಲೆಗಳಿಂದ ಶ್ರಾದ್ಧವನ್ನು ಮಾಡಿದ ಮೇಲೆ ಪಿತೃಗಳು ಬಿಟ್ಟದ್ದನ್ನು ತಿನ್ನಬೇಕು. ಹಾಗೆ ತಿನ್ನದಿರಬಾರದು.

೨೭. ಏಕಾದಶಿಯ ಹೊರತು ಮಿಕ್ಕ ದಿನಗಳಲ್ಲಿ ಪಾಪಗಳು ಅನ್ನವನ್ನು ಆಶ್ರಯಿಸಿಕೊಂಡಿರುತ್ತವೆ. ಆದುದರಿಂದ ಇತರ ದಿನಗಳಲ್ಲಿ ಅನ್ನದಿಂದ ತೃಪ್ತಿಪಡಿಸಿದ ಮೇಲೆ ದಕ್ಷಿಣೆ ಮುಂದಾದುವುಗಳಿಂದ ತೃಪ್ತಿಪಡಿಸಬೇಕು.

೨೮-೩೦. ಏಕಾದಶಿಯ ದಿವಸ ಪಿತೃಗಳಿಗೆ ನಿವೇದಿಸಿದುದನ್ನು ಮೂಸಿನೋಡಬೇಕು. ಅದನ್ನು ಅನಂತರ ಗೋವಿಗೆ ಕೊಟ್ಟುಬಿಡಬೇಕು. ಹೃಷೀಕೇಶನನ್ನು ಧೂಪದೀಪಗಳಿಂದ ಪೂಜಿಸಿ ಆ ಕೇಶವನ ಸಮೀಪದಲ್ಲಿಯೇ ರಾತ್ರಿಯೆಲ್ಲವೂ ಜಾಗರಣ ಮಾಡಬೇಕು. ಬೆಳಗ್ಗೆ ದ್ವಾದಶಿಯು ಬರಲು

ಅರ್ಚಯಿತ್ವಾ ಹರಿಂ ಭಕ್ತ್ಯಾ ಭೋಜಯಿತ್ವಾ ದ್ವಿಜಾಂಸ್ತಥಾ ।
ಬಂಧುದೌಹಿತ್ರಪುತ್ರಾದ್ಯೈಃ ಸ್ವಯಂ ಭುಂಜೀತ ವಾಗ್ಯತಃ ॥ ೩೦ ॥

ಅನೇನ ವಿಧಿನಾ ರಾಜನ್ ಕುರು ವ್ರತಮತಂದ್ರಿತಃ ।
ವಿಷ್ಣುಲೋಕಂ ಪ್ರಯಾಸ್ಯಂತಿ ಪಿತರಸ್ತವ ಭೂಪತೇ ॥ ೩೧ ॥

॥ ಶ್ರೀಕೃಷ್ಣ ಉವಾಚ ॥

ಇತ್ಯುಕ್ತ್ವಾ ನೃಪತಿಂ ರಾಜನ್ ಮುನಿರಂತರಧೀಯತ ।
ಯಥೋಕ್ತವಿಧಿನಾ ರಾಜಾ ಚಕಾರ ವ್ರತಮುತ್ತಮಂ ॥ ೩೨ ॥

ಅಂತಃಪುರೇಣ ಸಹಿತಃ ಪುತ್ರಭೃತ್ಯಸಮನ್ವಿತಃ ।
ವ್ರತೇ ಕೃತೇ ತು ಕೌನ್ತೇಯ ಪುಷ್ಪವೃಷ್ಟಿರಭೂದ್ದಿವಃ ॥ ೩೩ ॥

ತತ್ಪಿತಾ ಗರುಡಾರೂಢೋ ಜಗಾಮ ಹರಿಮಂದಿರಂ ।
ಇಂದ್ರಸೇನೋಽಪಿ ರಾಜರ್ಷಿಃ ಕೃತ್ವಾ ರಾಜ್ಯಮಕಂಟಕಂ ॥ ೩೪ ॥

---

ಭಕ್ತಿಯಿಂದ ಹರಿಯನ್ನು ಪೂಜಿಸಿ ಆ ಮೇಲೆ ಬಂಧುಗಳು, ಮಕ್ಕಳು, ಮೊಮ್ಮಕ್ಕಳು ಇವರೊಡನೆ ನಿಯಮವಂತನಾಗಿ ಊಟಮಾಡಬೇಕು.

೩೧. ಎಲೈ ರಾಜನೇ ! ನಿಯಮದಿಂದ ಈ ವ್ರತವನ್ನು ಮಾಡು. ಹಾಗೆ ಮಾಡಿದರೆ ನಿನ್ನ ಪಿತೃಗಳು ವಿಷ್ಣುಲೋಕವನ್ನು ಹೊಂದುತ್ತಾರೆ.

೩೨. ಶ್ರೀಕೃಷ್ಣನು ಹೇಳಿದನು–ನಾರದನು ಆ ರಾಜನಿಗೆ ಹೀಗೆಂದು ಹೇಳಿ ಹೊರಟುಹೋದನು. ರಾಜನು ಆ ವ್ರತವನ್ನು ವಿಧಿವತ್ತಾಗಿ ಮಾಡಿದನು.

೩೩-೩೬. ಅಂತಃಪುರದವರೊಡನೆಯೂ ಮಕ್ಕಳು ನುರಿ, ಆಳುಗಳೊಡನೆಯೂ ಈ ವ್ರತವನ್ನು ರಾಜನು ಆಚರಿಸಲು ಅಂತರಿಕ್ಷದಿಂದ ಹೂಮಳೆಗರೆಯಿತು. ಅವನ ತಂದೆಯೂ ಕೂಡ ಗರುಡನ ಮೇಲೆ ಹತ್ತಿಕೊಂಡು ವೈಕುಂಠವನ್ನು ಹೊಂದಿದನು. ಇಂದ್ರಸೇನನೂ ರಾಜರ್ಷಿಯಾಗಿದ್ದು ರಾಜ್ಯಭಾರವನ್ನು ಚೆನ್ನಾಗಿ

**ರಾಜ್ಯೇ ನಿವೇಶ್ಯ ತನಯಂ ಜಗಾಮ ತ್ರಿದಿವಂ ಸ್ವಯಂ ।**
**ಇಂದಿರಾವ್ರತಮಾಹಾತ್ಮ್ಯಂ ತವಾಗ್ರೇ ಕಥಿತಂ ಮಯಾ ॥ ೩೫ ॥**

**ಪಠನಾಚ್ಛ್ರವಣಾದ್ರಾಜನ್ ಸರ್ವಪಾಪಾತ್ಪ್ರಮುಚ್ಯತೇ ॥ ೩೬ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಪತಿ ನಾರದ ಸಂವಾದಾನ್ತರ್ಗತ ಕೃಷ್ಣ ಯುಧಿಷ್ಠಿರ ಸಂವಾದೇ ಆಶ್ವಯುಜ ಕೃಷ್ಣ ಇಂದಿರೈಕಾದಶೀ ಮಾಹಾತ್ಮ್ಯಂ ನಾಮ ಷಷ್ಟಿತಮೋಽಧ್ಯಾಯಸ್ಸಮಾಪ್ತಃ**

---

ಮಾಡಿ ಕೊನೆಗೆ ಮಗನನ್ನು ರಾಜ್ಯದಲ್ಲಿ ನಿಲ್ಲಿಸಿ ತಾನು ಸ್ವರ್ಗವನ್ನು ಹೊಂದಿದನು. ಎಲೈ ದೊರೆಯೇ! ಇಂದಿರಾವ್ರತದ ಮಹಿಮೆಯನ್ನು ನಿನಗೆ ಹೇಳಿದೆನು. ಇದನ್ನು ಕೇಳಿದರೂ ಓದಿದರೂ ಎಲ್ಲಾ ಪಾಪಗಳೂ ಹೋಗುತ್ತವೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಪತಿ ನಾರದರ ಸಂವಾದಾನ್ತರ್ಗತವಾದ ಕೃಷ್ಣ ಯುಧಿಷ್ಠಿರರ ಸಂವಾದದಲ್ಲಿ ಆಶ್ವಯುಜ ಕೃಷ್ಣ ಇಂದಿರೈಕಾದಶಿಯ ಮಹಿಮೆ ಎಂಬ ಅರವತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-x-

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಏಕಷಷ್ಟಿತಮೋಽಧ್ಯಾಯಃ ॥



॥ ಯುಧಿಷ್ಠಿರ ಉವಾಚ ॥

ಕಥಯಸ್ವ ಪ್ರಸಾದೇನ ಮಮಾಗ್ರೇ ಮಧುಸೂದನ ।
ಇಷಸ್ಯ ಶುಕ್ಲಪಕ್ಷೇ ತು ಕಿನ್ನಾಮ್ನೈಕಾದಶೀ ಭವೇತ್ ॥ ೧ ॥

॥ ಶ್ರೀಕೃಷ್ಣ ಉವಾಚ ॥

ಶೃಣು ರಾಜೇಂದ್ರ ವಕ್ಷ್ಯಾಮಿ ಮಾಹಾತ್ಮ್ಯಂ ಪಾಪನಾಶನಂ ।
ಶುಕ್ಲಪಕ್ಷೇ ಚಾಶ್ವಿನಸ್ಯ ಭವೇದೇಕಾದಶೀ ತು ಯಾ ॥ ೨ ॥

ಪಾಪಾಂಕುಶೇತಿ ವಿಖ್ಯಾತಾ ಸರ್ವಪಾಪಹರಾ ಪರಾ ।
ಪದ್ಮನಾಭಾಭಿಧಾನಂ ಮಾಂ ಪೂಜಯೇತ್ತತ್ರ ಮಾನವಃ ॥ ೩ ॥

---

## ಅರವತ್ತೊಂದನೆಯ ಅಧ್ಯಾಯವು



೧. ಯುಧಿಷ್ಠಿರನು ಹೇಳಿದನು-ಎಲೈ ಮಧುಸೂದನನೆ! ಆಶ್ವಯುಜ ಶುಕ್ಲ ಪಕ್ಷದಲ್ಲಿ ಬರುವ ಏಕಾದಶಿಯ ಹೆಸರೇನು? ಎಂಬುದನ್ನು ದಯಮಾಡಿ ಹೇಳು.

೨. ಶ್ರೀ ಕೃಷ್ಣನು ಹೇಳಿದನು-ಎಲೈ ಯುಧಿಷ್ಠಿರನೆ! ಆಶ್ವಯುಜ ಶುಕ್ಲ ಪಕ್ಷದ ಏಕಾದಶಿಯ ವಿಷಯವನ್ನು ಹೇಳುತ್ತೇನೆ. ಕೇಳು. ಅದು ಪಾಪನಾಶಕವು.

೩. ಆ ಏಕಾದಶಿಗೆ "ಪಾಪಾಂಕುಶ ಏಕಾದಶಿ" ಎಂದು ಹೆಸರು. ಅದು ಪಾಪಗಳನ್ನು ನಾಶಮಾಡತಕ್ಕದ್ದು. ಆದಿನ ಪದ್ಮನಾಭನೆಂಬ ಹೆಸರುಳ್ಳ ನನ್ನನ್ನು ಪೂಜಿಸಬೇಕು.

ಸರ್ವಾಭೀಷ್ಟಫಲಪ್ರಾಪ್ತ್ಯೈ ಸ್ವರ್ಗಮೋಕ್ಷಪ್ರದಂ ನೃಣಾಂ ।
ತಪಸ್ತಪ್ತ್ವಾ ಪುನಸ್ತೀವ್ರಂ ಚಿರಂ ಮುನಿರ್ಯತೇಂದ್ರಿಯಃ || ೪ ||

ಯತ್ಫಲಂ ಸಮವಾಪ್ನೋತಿ ತನ್ನತ್ವಾ ಗರುಡಧ್ವಜಂ ।
ಕೃತ್ವಾಪಿ ಬಹುಶಃ ಪಾಪಂ ನರೋ ಮೋಹ ಸಮನ್ವಿತಃ || ೫ ||

ನ ಯಾತಿ ನರಕಂ ನತ್ವಾ ಸರ್ವಪಾಪಹರಂ ಹರಿಂ ।
ಪೃಥಿವ್ಯಾಂ ಯಾನಿ ತೀರ್ಥಾನಿ ಪುಣ್ಯಾನ್ಯಾಯತನಾನಿ ಚ || ೬ ||

ತಾನಿ ಸರ್ವಾಣಿ ಚಾಪ್ನೋತಿ ವಿಷ್ಣೋರ್ನಾಮಾನುಕೀರ್ತನಾತ್ ।
ದೇವಂ ಶಾಂರ್ಗಧರಂ ವಿಷ್ಣುಂ ಯೇ ಪ್ರಪನ್ನಾ ಜನಾರ್ದನಂ || ೭ ||

ನ ತೇಷಾಂ ಯಮಲೋಕಸ್ಯ ಯಾತನಾ ಜಾಯತೇ ಕ್ವಚಿತ್ ।
ಉಪೋಷ್ಯೈಕಾದಶೀಮೇಕಾಂ ಪ್ರಸಂಗೇನಾಪಿ ಮಾನವಃ || ೮ ||

ನ ಯಾತಿ ಯಾತನಾಂ ಯಾಮೀಂ ಪಾಪಂ ಕೃತ್ವಾಪಿ ದಾರುಣಂ ।
ವೈಷ್ಣವಃ ಪುರುಷೋ ಭೂತ್ವಾ ಶಿವನಿಂದಾಂ ಕರೋತಿ ಯಃ || ೯ ||

---

೪-೯. ಆ ಏಕಾದಶಿಯು ಇಷ್ಟಾರ್ಥಗಳನ್ನು ಕೊಡುತ್ತದೆ. ಸ್ವರ್ಗ ಮೋಕ್ಷಗಳನ್ನೂ ಕೊಡುತ್ತದೆ. ಮುನಿಯಾದವನು ಇಂದ್ರಿಯ ನಿಗ್ರಹ ಮಾಡಿಕೊಂಡು ತೀವ್ರವಾದ ತಪಸ್ಸನ್ನು ಮಾಡಿದರೆ ಹೊಂದುವ ಫಲವನ್ನು ಗರುಡಧ್ವಜನಾದ ವಿಷ್ಣುವನ್ನು ನಮಸ್ಕರಿಸಿದರೆ ಹೊಂದುತ್ತಾನೆ. ಮನುಷ್ಯನು ಅಜ್ಞಾನಿಯಾಗಿ ಅನೇಕಬಗೆಯ ಪಾಪಗಳನ್ನು ಮಾಡಿದ್ದರೂ ಕೂಡ ಸಮಸ್ತ ಪಾಪಹಾರಕನಾದ ಹರಿಯನ್ನು ಈದಿನ ನಮಸ್ಕರಿಸಿದರೆ ನರಕವನ್ನು ಹೊಂದುವುದಿಲ್ಲ. ಆ ದಿವಸ ವಿಷ್ಣುವಿನ ನಾಮಸ್ಮರಣೆಯನ್ನು ಮಾಡಿದರೆ ಭೂಮಿಯಲ್ಲಿ ಎಷ್ಟು ತೀರ್ಥಗಳಿವೆಯೋ ಅಷ್ಟನ್ನೂ ಸೇವಿಸಿದರೆ ಯಾವ ಪುಣ್ಯವು ಬರುವುದೋ ಅಷ್ಟು ಪುಣ್ಯವನ್ನೂ ಹೊಂದುತ್ತಾನೆ. ಆದಿನ ಸ್ವಾಮಿಯಾದ ವಿಷ್ಣುವನ್ನು ಯಾರು ಸ್ತುತಿಸಿ ಮರೆ ಹೊಗುತ್ತಾರೆಯೋ ಅವರಿಗೆ ಯಮನಿಂದ ತೊಂದರೆಯೋ ಇರುವುದಿಲ್ಲ. ಆಕಸ್ಮಾತ್ತಾಗಿ ಈ ಏಕಾದಶಿಯಲ್ಲಿ ಉಪವಾಸವಿದ್ದರೆ ಬಹುಪಾಪ ಮಾಡಿದರೂ ಕೂಡ ಯಮಲೋಕವನ್ನು ಹೊಂದುವುದಿಲ್ಲ. ವೈಷ್ಣವನಾದವನು ಶಿವನಿಂದೆಯನ್ನು ಮಾಡಬಾರದು.

ನ ವಿಂದೇದ್ವೈಷ್ಣವಂ ಲೋಕಂ ಸ ಯಾತಿ ನರಕಂ ಧ್ರುವಂ ।
ಶೈವಃ ಪಾಶುಪತೋ ಭೂತ್ವಾ ವಿಷ್ಣೋರ್ನಿಂದಾಂ ಕರೋತಿ ಚೇತ್ ॥೧೦॥

ರೌರವೇ ಪಚ್ಯತೇ ಘೋರೇ ಯಾವದಿಂದ್ರಾಶ್ಚತುರ್ದಶ ।
ನೇದೃಶಂ ಪಾವನಂ ಕಿಂಚಿತ್ತ್ರಿಷು ಲೋಕೇಷು ವಿದ್ಯತೇ ॥ ೧೧ ॥

ಯಾದೃಶಂ ಪದ್ಮನಾಭಸ್ಯ ವ್ರತಂ ಪಾತಕನಾಶನಂ ।
ತಾವತ್ಪಾಪಾನಿ ದೇಹೇಸ್ಮಿಂಸ್ತಿಷ್ಠಂತಿ ಮನುಜಾಧಿಪ ॥ ೧೨ ॥

ಯಾವನ್ನೋಪವಸೇಜ್ಜಂತುಃ ಪದ್ಮನಾಭದಿನಂ ಶುಭಂ ।
ಅಶ್ವಮೇಧಸಹಸ್ರಾಣಿ ರಾಜಸೂಯಶತಾನಿ ಚ ॥ ೧೩ ॥

ಏಕಾದಶ್ಯುಪವಾಸಸ್ಯ ಕಲಾಂ ನಾರ್ಹಂತಿ ಷೋಡಶೀಂ ।
ಏಕಾದಶೀಸಮಂ ಕಿಂಚಿದ್ವ್ರತಂ ಲೋಕೇ ನ ವಿದ್ಯತೇ ॥ ೧೪ ॥

ವ್ಯಾಜೇನಾಪಿ ಕೃತಾ ಯೈಶ್ಚ ನ ತೇ ಯಾಂತಿ ಹಿ ಭಾಸ್ಕರೀಂ ।
ಸ್ವರ್ಗಮೋಕ್ಷಪ್ರದಾ ಹ್ಯೇಷಾ ಶರೀರಾರೋಗ್ಯದಾಯಿನೀ ॥ ೧೫ ॥

---

೧೦ ೧೫. ಶಿವನಿಂದೆ ಮಾಡುವವನು ವೈಷ್ಣವಲೋಕವನ್ನು ಖಂಡಿತವಾಗಿಯೂ ಹೊಂದುವುದೇ ಇಲ್ಲ. ಶಿವಭಕ್ತಿಯುಳ್ಳವನು ವಿಷ್ಣುವನ್ನು ನಿಂದಿಸಿದರೆ ಅವನು ಹದಿನಾಲ್ಕುಜನ ಇಂದ್ರರು ಇರುವವರೆಗೂ ರೌರವ ನರಕದಲ್ಲಿ ಬಿದ್ದಿರುತ್ತಾನೆ. ಈ ಪದ್ಮನಾಭನ ವ್ರತವು ಪಾಪವನ್ನು ನಾಶಮಾಡುವಂತೆ ಪಾಪನಾಶಕವಾದ ವ್ರತವು ಮೂರು ಲೋಕಗಳಲ್ಲಿಯೂ ಮತ್ತೊಂದಿಲ್ಲವು. ಪದ್ಮನಾಭನ ದಿನವಾದ ಈ ಏಕಾದಶಿಯ ದಿವಸ ಉಪವಾಸ ಮಾಡುವವರೆಗೂ ಮನುಷ್ಯನ ದೇಹದಲ್ಲಿ ಪಾಪಗಳು ವಾಸವಾಗಿರುತ್ತವೆ. ಸಾವಿರ ಅಶ್ವಮೇಧ ಯಾಗಗಳೂ ನೂರು ರಾಜಸೂಯಯಾಗಗಳೂ ಕೂಡ ಈ ಏಕಾದಶಿಯ ಹದಿನಾರನೆಯ ಒಂದು ಭಾಗವನ್ನು ಸರಿದೂಗಲಾರವು. ಏಕಾದಶಿ ವ್ರತಕ್ಕೆ ಸಮವಾದ ವ್ರತವು ಲೋಕದಲ್ಲಿ ಮತ್ತೊಂದಿಲ್ಲ. ಯಾವುದಾದರೂ ನೆವದಿಂದ ಆದಿನ ಉಪವಾಸ ವಿದ್ದರೆ ಅವರು ಯಮನ ಸಮೀಪವನ್ನು ಹೊಂದುವುದಿಲ್ಲ. ಈ ಏಕಾದಶಿಯು ಸ್ವರ್ಗ ಮೋಕ್ಷಗಳನ್ನೂ ಶರೀರಕ್ಕೆ ಆರೋಗ್ಯವನ್ನೂ ಕೊಡುತ್ತದೆ.

ಸುಕಲತ್ರಪ್ರದಾ ಹ್ಯೇಷಾ ಧನಮಿತ್ರಪ್ರದಾಯಿನೀ ।
ನ ಗಂಗಾ ನ ಗಯಾ ರಾಜನ್ನ ಕಾಶೀ ನ ಚ ಪುಷ್ಕರಂ ॥ ೧೬ ॥

ನ ಚಾಪಿ ಕೌರವಂ ಕ್ಷೇತ್ರಂ ಪುಣ್ಯಂ ಭೂಪ ಹರೇರ್ದಿನಾತ್ ॥
ರಾತ್ರೌ ಜಾಗರಣಂ ಕೃತ್ವಾ ಸಮುಪೋಷ್ಯ ಹರೇರ್ದಿನೇ ॥ ೧೭ ॥

ಅನಾಯಾಸೇನ ಭೂಪಾಲ ಪ್ರಾಪ್ಯತೇ ವೈಷ್ಣವಂ ಪದಂ ।
ದಶೈವ ಮಾತೃಕೇ ಪಕ್ಷೇ ರಾಜೇಂದ್ರ ದಶ ಪೈತೃಕೇ ॥ ೧೮ ॥

ಪ್ರಿಯಾಯಾ ದಶ ಪಕ್ಷೇ ತು ಪುರುಷಾನುದ್ಧರೇನ್ನರಃ ।
ಚತುರ್ಭುಜಾ ದಿವ್ಯರೂಪಾ ನಾಗಾರಿಕೃತಕೇತನಾಃ ॥ ೧೯ ॥

ಸ್ರಗ್ವಿಣಃ ಪೀತವಸ್ತ್ರಾಶ್ಚ ಪ್ರಯಾನ್ತಿ ಹರಿಮನ್ದಿರಂ ।
ಬಾಲತ್ವೇ ಯೌವನತ್ವೇ ಚ ವೃದ್ಧತ್ವೇ ಚ ನೃಪೋತ್ತಮ ॥ ೨೦ ॥

ಉಪೋಷ್ಯೈಕಾದಶೀಂ ನೂನಂ ನೈತಿ ಪಾಪೋಽಪಿ ದುರ್ಗತಿಂ ।
ಪಾಪಾಂಕುಶಾಮುಪೋಷ್ಯೈವ ಆಶ್ವಿನಸ್ಯ ಸಿತೇ ನರಃ ॥ ೨೧ ॥

---

೧೬-೨೧. ಈ ಏಕಾದಶಿಯು ಒಳ್ಳೆಯ ಹೆಂಡತಿಯನ್ನೂ ಧನ ಮಿತ್ರರನ್ನೂ ಕೊಡುತ್ತದೆ. ಗಂಗೆ, ಗಯೆ, ಕಾಶಿ, ಪುಷ್ಕರ, ಕುರುಕ್ಷೇತ್ರಗಳೊಂದೂ ಹರಿಯ ದಿನಕ್ಕಿಂತ ಪುಣ್ಯತಮವಾದುವಲ್ಲ. ಆ ಏಕಾದಶಿಯಲ್ಲಿ ಉಪವಾಸ ಮಾಡಿ ರಾತ್ರಿಯಲ್ಲಿ ಜಾಗರಣೆ ಮಾಡಿದರೆ ಅವನು ಅನಾಯಾಸದಿಂದ ವೈಕುಂಠವನ್ನು ಹೊಂದುತ್ತಾನೆ. ಆ ಏಕಾದಶಿಯ ಉಪವಾಸವು ತಾಯಿಯ ಕಡೆ ಹತ್ತು ತಲೆ ತಂದೆಯ ಕಡೆ ಹತ್ತು ತಲೆ ಹೆಂಡತಿಯ ಕಡೆ ಹತ್ತು ತಲೆಗಳನ್ನೂ ನರಕದಿಂದ ಉದ್ಧಾರಮಾಡುತ್ತದೆ. ಏಕಾದಶ್ಯುಪವಾಸ ಮಾಡಿದವರು ನಾಲ್ಕು ತೋಳು ಗಳನ್ನು ಹೊಂದಿ ಉತ್ತಮವಾದ ದೇಹವನ್ನು ಧರಿಸಿ ಗರುಡನ ಧ್ವಜವುಳ್ಳವರಾಗಿ ಮಾಲೆಯನ್ನು ಧರಿಸಿ ಹೊಂಬಣ್ಣದ ಬಟ್ಟೆಯನ್ನು ಹೊದೆದು ಹರಿಯ ಪದವನ್ನು ಹೊಂದುತ್ತಾರೆ. ಬಾಲ್ಯದಲ್ಲಾಗಲೀ, ಯೌವನದಲ್ಲಾಗಲೀ, ಮುಪ್ಪಿನಲ್ಲಾಗಲೀ ಈ ಏಕಾದಶಿಯಲ್ಲಿ ಉಪವಾಸ ಮಾಡಿದರೆ ಪಾಪಿಯಾದರೂ ನರಕ ಭಾಗಿಯಾಗು ವುದಿಲ್ಲ. ಈ ಆಶ್ವಯುಜದ ಶುಕ್ಲದ ಪಾಪಾಂಕುಶ ಏಕಾದಶಿಯ ದಿನ ಉಪವಾಸ ಮಾಡಬೇಕು.

**ಸರ್ವಪಾಪವಿನಿರ್ಮುಕ್ತೋ ಹರಿಲೋಕಂ ಸ ಗಚ್ಛತಿ ।**
**ದತ್ವಾ ಹೇಮತಿಲಾನ್ಭೂಮಿಂ ಗಾಮನ್ನಮುದಕಂ ತಥಾ || ೨೨ ||**

**ಉಪಾನಚ್ಛತ್ರವಸ್ತ್ರಾಣಿ ನ ಪಶ್ಯತಿ ಯಮಂ ನರಃ ।**
**ಯಸ್ಯ ಪುಣ್ಯವಿಹೀನಾನಿ ದಿನಾನ್ಯಾಯಾಂತಿ ಯಾಂತಿ ಚ || ೨೩ ||**

**ಸ ಲೋಹಕಾರಭಸ್ತ್ರೇವ ಶ್ವಸನ್ನಪಿ ನ ಜೀವತಿ ।**
**ಅವಂಧ್ಯಂ ದಿವಸಂ ಕುರ್ಯಾದ್ದರಿದ್ರೋಽಪಿ ನೃಪೋತ್ತಮ || ೨೪ ||**

**ಸಮಾಚರನ್ಯಥಾಶಕ್ತಿ ಸ್ನಾನದಾನಾದಿಕಾಃ ಕ್ರಿಯಾಃ ।**
**ಹೋಮಸ್ನಾನಜಪಧ್ಯಾನಸತ್ರಾದಿಪುಣ್ಯಕರ್ಮಣಾಂ || ೨೫ ||**

**ಕರ್ತಾರೋ ನೈವ ಪಶ್ಯಂತಿ ಘೋರಾಂ ತಾಂ ಯಮಯಾತನಾಂ ।**
**ದೀರ್ಘಾಯುಷೋ ಧನಾಢ್ಯಾಶ್ಚ ಕುಲೀನಾ ರೋಗವರ್ಜಿತಾಃ || ೨೬ ||**

**ದೃಶ್ಯಂತೇ ಮಾನವಾ ಲೋಕೇ ಪುಣ್ಯಕರ್ತಾರ ಈದೃಶಾಃ ।**
**ಕಿಮತ್ರ ಬಹುನೋಕ್ತೇನ ಯಾಂತ್ಯಧರ್ಮೇಣ ದುರ್ಗತಿಂ || ೨೭ ||**

---

೨೧-೨೬. ಹೀಗೆ ಮಾಡಿದರೆ ಎಲ್ಲಾ ಪಾಪಗಳನ್ನೂ ಕಳೆದುಕೊಂಡು ಹರಿಯ ಲೋಕವನ್ನು ಹೊಂದುತ್ತಾನೆ. ಚಿನ್ನ, ಎಳ್ಳು, ಭೂಮಿ, ಗೋವು, ಅನ್ನ, ಉದಕ, ಕೆರ, ಛತ್ರಿ, ವಸ್ತ್ರಗಳನ್ನು ಆ ದಿನ ದಾನ ಕೊಟ್ಟರೆ ಆತನು ಯಮನ ದರ್ಶನಮಾಡುವುದಿಲ್ಲ. ಯಾವನು ಈ ಪುಣ್ಯದಿನಗಳನ್ನು ಮಾಡದೆ ಕಾಲವನ್ನು ಕಳೆಯುತ್ತಾನೆಯೋ ಅವನು ತಿದಿಯಂತೆ ಉಸಿರು ತೆಗೆದುಕೊಳ್ಳುತ್ತ ಬಿಡುತ್ತಿರುವನೇ ಹೊರತು ಜೀವದಿಂದಿರುವವನಲ್ಲ. ದರಿದ್ರನಾದರೂ ಕೂಡ ದಿವಸವನ್ನು ವ್ಯರ್ಥಮಾಡಿಕೊಳ್ಳಬಾರದು. ಕೈಯಲ್ಲಿ ಆದಮಟ್ಟಿಗೆ ಸ್ನಾನ ದಾನಾದಿಗಳನ್ನು ಮಾಡಬೇಕು. ಹೋಮ ಸ್ನಾನ ಜಪ ಧ್ಯಾನ ಯಜ್ಞ ಮುಂತಾದ ಕೆಲಸಗಳನ್ನು ಮಾಡುವವರು ಘೋರವಾದ ಯಮನ ಬಾಧೆಯನ್ನು ನೋಡು ವುದಿಲ್ಲ. ಪುಣ್ಯಗಳನ್ನು ಮಾಡಿದವರು ಈ ಲೋಕದಲ್ಲಿ ದೀರ್ಘಾಯಸ್ಸನ್ನು ಹೊಂದಿದವರಾಗುವರು.

೨೭-೨೮. ಈ ಏಕಾದಶಿಯನ್ನು ಆಚರಿಸುವವರು ಧನವಂತರಾಗಿಯೂ ಕುಲೀನರಾಗಿಯೂ ರೋಗವಿಲ್ಲದವರಾಗಿಯೂ ಇರುತ್ತಾರೆ. ಬಹಳ ಮಾತಿ ನಿಂದೇನು? ಜನರು ಅಧರ್ಮದಿಂದ ನರಕವನ್ನೂ ಧರ್ಮದಿಂದ ಸ್ವರ್ಗವನ್ನೂ

ಆರೋಹಂತಿ ದಿವಂ ಧರ್ಮ್ಯೈರ್ನಾತ್ರ ಕಾರ್ಯಾ ವಿಚಾರಣಾ ।
ಇತಿ ತೇ ಕಥಿತಂ ರಾಜನ್ ಯತ್ಪೃಷ್ಟೋಽಹಂ ತ್ವಯಾನಘ ।
ಪಾಪಾಂಕುಶಾಯಾ ಮಾಹಾತ್ಮ್ಯಂ ಕಿಮನ್ಯತ್ ಶ್ರೋತುಮಿಚ್ಛಸಿ ॥ ೨೮ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಪತಿ ನಾರದ ಸಂವಾದಾನ್ತರ್ಗತ ಕೃಷ್ಣ ಯುಧಿಷ್ಠಿರ ಸಂವಾದೇ ಆಶ್ವಯುಜ ಶುಕ್ಲ ಪಾಪಾಂಕುಶೈಕಾದಶೀ ಮಾಹಾತ್ಮ್ಯಂ ನಾಮ ಏಕಷಷ್ಟಿತಮೋಽಧ್ಯಾಯಸ್ಸಮಾಪ್ತಃ

---

ಹೊಂದುತ್ತಾರೆ. ಇದರಲ್ಲಿ ವಿಚಾರಮಾಡಬೇಕಾದುದೇ ಇಲ್ಲ. ಎಲೈ ಯುಧಿಷ್ಠಿರನೆ! ನೀನು ಕೇಳಿದುದನ್ನು ಹೇಳಿದೆನು. ಈ ಪಾಪಾಂಕುಶ ಏಕಾದಶಿಯ ಮಹಿಮೆಯು ಈರೀತಿಯಾಗಿರುವುದು. ಮತ್ತೇನು ಬೇಕು? ಕೇಳು. ಹೇಳುವೆನು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಪತಿ ನಾರದರ ಸಂವಾದಾನ್ತರ್ಗತವಾದ ಕೃಷ್ಣ ಯುಧಿಷ್ಠಿರರ ಸಂವಾದದಲ್ಲಿ ಆಶ್ವಯುಜ ಶುಕ್ಲ ಪಾಪಂಕುಶೈಕಾದಶಿಯ ಮಹಿಮೆ ಎಂಬ ಅರವತ್ತೊಂದನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

+

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ

## || ದ್ವಿಷಷ್ಟಿತಮೋಽಧ್ಯಾಯಃ ||



|| ಯುಧಿಷ್ಠಿರ ಉವಾಚ ||

ಕಥಯಸ್ವ ಪ್ರಸಾದೇನ ಮಯಿ ಸ್ನೇಹಾಜ್ಜನಾರ್ದನ ।
ಕಾರ್ತಿಕಸ್ಯಾಸಿತೇ ಪಕ್ಷೇ ಕಿನ್ನಾಮ್ನ್ಯೇಕಾದಶೀ ಭವೇತ್ || ೧ ||

|| ಶ್ರೀಕೃಷ್ಣ ಉವಾಚ ||

ಶ್ರೂಯತಾಂ ನೃಪಶಾರ್ದೂಲ ಕಥಯಾಮಿ ತವಾಗ್ರತಃ ।
ಕಾರ್ತಿಕೇ ಕೃಷ್ಣಪಕ್ಷೇ ತು ರಮಾ ನಾಮ ಸುಶೋಭನಾ || ೨ ||

ಏಕಾದಶೀ ಸಮಾಖ್ಯಾತಾ ಮಹಾಪಾಪಹರಾ ಪರಾ ।
ಅಸ್ಯಾಃ ಪ್ರಸಂಗತೋ ರಾಜನ್ ಮಾಹಾತ್ಮ್ಯಂ ಪ್ರವದಾಮಿ ತೇ || ೩ ||

---

## ಅರವತ್ತೆರಡನೆಯ ಅಧ್ಯಾಯವು



೧. ಯುಧಿಷ್ಠಿರನು ಹೇಳಿದನು–ಎಲೈ ಜನಾರ್ದನನೆ! ಕಾರ್ತಿಕಮಾಸದ ಕೃಷ್ಣ ಏಕಾದಶಿಯ ಹೆಸರೇನು? ಎಂಬುದನ್ನು ನನ್ನಲ್ಲಿರುವ ಸ್ನೇಹದಿಂದ ಹೇಳು.

೨. ಶ್ರೀ ಕೃಷ್ಣನು ಹೇಳಿದನು–ಎಲೈ ಯುಧಿಷ್ಠಿರನೆ! ಕೇಳು. ಕಾರ್ತಿಕ ಕೃಷ್ಣಪಕ್ಷದ ಏಕಾದಶಿಗೆ “ರಮಾ” ಎಂದು ಹೆಸರು.

೩. ಈ ರಮಾ ಎಂಬ ಏಕಾದಶಿಯು ಮಹಾಪಾಪಗಳನ್ನೆಲ್ಲಾ ನಾಶ ಮಾಡುತ್ತದೆ. ಇದರ ಪ್ರಸಂಗದಿಂದ ಇದರ ಮಹಿಮೆಯನ್ನೂ ಹೇಳುತ್ತೇನೆ. ಕೇಳು.

ಮುಚುಕುಂದ ಇತಿ ಖ್ಯಾತೋ ಬಭೂವ ಭೂಪತಿಃ ಪುರಾ ।
ದೇವೇಂದ್ರೇಣ ಸಮಂ ತಸ್ಯ ಮಿತ್ರತ್ವಮಭವನ್ನೃಪ ॥ ೪ ॥

ಯಮೇನ ವರುಣೇನೈವಂ ಕುಬೇರೇಣ ಸಮಂ ತಥಾ ।
ವಿಭೀಷಣೇನ ಯಸ್ಯೈವಂ ಸಖಿತ್ವಮಭವತ್ಪುರಾ ॥ ೫ ॥

ವಿಷ್ಣುಭಕ್ತಸ್ಸತ್ಯಸಂಧೋ ಬಭೂವ ಸ ನೃಪತಿಃ ಪುರಾ ।
ತಸ್ಯೈವಂ ಶಾಸತೋ ರಾಜ್ಞ ರಾಜ್ಯಂ ನಿಹತಕಂಟಕಂ ॥ ೬ ॥

ಬಭೂವ ದುಹಿತಾ ಗೇಹೇ ಚಂದ್ರಭಾಗಾ ಸರಿದ್ವರಾ ।
ಶೋಭನಾಯ ಚ ಸಾ ದತ್ತಾ ಚಂದ್ರಸೇನಸುತಾಯ ವೈ ॥ ೭ ॥

ಸ ಕದಾಚಿತ್ಸಮಾಯಾತಃ ಶ್ವಶುರಸ್ಯ ಗೃಹೇ ನೃಪ ।
ಏಕಾದಶೀವ್ರತದಿನಂ ಸಮಾಯಾತಂ ಸುಪುಣ್ಯದಂ ॥ ೮ ॥

---

೪. ಹಿಂದೆ ಮುಚುಕುಂದನೆಂಬ ಒಬ್ಬ ರಾಜನಿದ್ದನು. ಅವನು ದೇವೇಂದ್ರನಿಗೆ ಸ್ನೇಹಿತನಾಗಿದ್ದನು.

೫. ಆ ಮುಚುಕುಂದನು ಯಮ, ವರುಣ, ಕುಬೇರ, ವಿಭೀಷಣರೊಡನೆಯೂ ಸ್ನೇಹಮಾಡಿಕೊಂಡಿದ್ದನು.

೬. ಆ ಮುಚುಕುಂದನು ವಿಷ್ಣುಭಕ್ತನು. ಸತ್ಯವಾದಿಯು. ಅವನು ರಾಜ್ಯವಾಳುತ್ತಿರಲಾಗಿ ರಾಜ್ಯವೆಲ್ಲವೂ ಈತಿಬಾಧೆಯಿಲ್ಲದೆ ಇದ್ದಿತು.

೭. ಆ ಮುಚುಕುಂದನಿಗೆ ನದಿಗಳಲ್ಲಿ ಪ್ರಸಿದ್ಧವಾದ ಚಂದ್ರಭಾಗೆ ಎಂಬ ಮಗಳಿದ್ದಳು. ಆಕೆಯನ್ನು ಚಂದ್ರಸೇನನ ಮಗನಾದ ಶೋಭನನಿಗೆ ಮದುವೆ ಮಾಡಿಕೊಟ್ಟಿದ್ದನು.

೮. ಆ ಶೋಭನನು ಒಂದು ಸಾರಿ ಮಾವನ ಮನೆಗೆ ಬಂದನು. ಆಗ ಈ ಹರಿಯ ಪುಣ್ಯದಿನವಾದ ಏಕಾದಶಿಯು ಬಂದಿತು.

ಸಮಾಗತೇ ವ್ರತದಿನೇ ಚಂದ್ರಭಾಗಾ ತ್ವಚಿನ್ತಯತ್ ।
ಕಿಂ ಭವಿಷ್ಯತಿ ದೇವೇಶ ಮಮ ಭರ್ತಾತಿದುರ್ಬಲಃ ॥ ೯ ॥

ಕ್ಷುಧಾಂ ನ ಕ್ಷಮತೇ ಸೋಢುಂ ಪಿತಾ ಚೈವೋಗ್ರಶಾಸನಃ ।
ಪಟಹಸ್ತಾಡ್ಯತೇ ಯಸ್ಯ ಸಂಪ್ರಾಪ್ತೇ ದಶಮೀದಿನೇ ॥ ೧೦ ॥

ನ ಭೋಕ್ತವ್ಯಂ ನ ಭೋಕ್ತವ್ಯಂ ಸಂಪ್ರಾಪ್ತೇ ತು ಹರೇರ್ದಿನೇ ।
ಶ್ರುತ್ವಾ ಪಟಹನಿರ್ಘೋಷಂ ಶೋಭನಸ್ತ್ವಬ್ರವೀತ್ಪ್ರಿಯಾಂ ॥ ೧೧ ॥

॥ ಶೋಭನ ಉವಾಚ ॥

ಕಿಂ ಕರ್ತವ್ಯಂ ಮಯಾ ಕಾನ್ತೇ ದೇಹಿ ಶಿಕ್ಷಾಂ ವರಾನನೇ ॥ ೧೨ ॥

॥ ಚಂದ್ರಭಾಗೋವಾಚ ॥

ಮತ್ಪಿತುರ್ವೇಶ್ಮನಿ ಪ್ರಭೋ ಭೋಕ್ತವ್ಯಂ ನಾದ್ಯ ಕೇನ ಚಿತ್ ।
ಗಜೈರಶ್ವೈಶ್ಚ ಕಲಭೈರನ್ಯೈಃ ಪಶುಭಿರೇವ ಚ ॥ ೧೩ ॥

---

೯–೧೧. ಈ ಏಕಾದಶಿವ್ರತ ದಿನವು ಬರಲು ಚಂದ್ರಭಾಗೆಯು ಯೋಚಿಸಿದಳು. ಎಲೈ ಸ್ವಾಮಿಯೆ! ಏನಾಗುವುದೋ ಕಾಣೆನಲ್ಲ? ನನ್ನ ಗಂಡನು ಬಹುದುರ್ಬಲನು. ಅವನು ಹಸಿವನ್ನು ತಡೆಯಲಾರನು. ನನ್ನ ತಂದೆಯಾದರೋ ಕಠಿಣವಾದ ಅಪ್ಪಣೆಯುಳ್ಳವನು ಎಂದುಕೊಳ್ಳುತ್ತಿದ್ದಳು. ಆ ಮುಚುಕುಂದನು ದಶಮಿಯದಿನವೇ "ನಾಳೆ ಏಕಾದಶಿಯು ಬರುತ್ತದೆ. ಈ ಏಕಾದಶಿಯಾದ ಹರಿಯ ದಿನದಲ್ಲಿ ಯಾರೂ ಊಟಮಾಡಕೂಡದು. ಊಟಮಾಡಕೂಡದು" ಎಂದುತಮಟೆಯನ್ನು ಬಡಿಸುತ್ತಾ ಸಾರಿಸಿದನು. ಈ ಶೋಭನನು ಆ ಡಂಗೂರವನ್ನು ಕೇಳಿ ಹೆಂಡತಿಯನ್ನು ಕುರಿತು ಇಂತೆಂದನು.

೧೨. ಶೋಭನನು ಹೇಳಿದನು–ಎಲೈ ಕಾಂತೆಯೆ! ಈಗ ಏನು ಮಾಡಬೇಕು? ನನಗೆ ಹೇಳು.

೧೩. ಚಂದ್ರಭಾಗೆಯು ಹೇಳಿದಳು–ಎಲೈ ಸ್ವಾಮಿಯೆ! ನಮ್ಮ ತಂದೆಯ ಮನೆಯಲ್ಲಿ ಒಬ್ಬರೂ ಊಟಮಾಡಕೂಡದು. ಆನೆ, ಕುದುರೆ, ಆನೆಯಮರಿ,

ತೃಣಮನ್ನಂ ತಥಾ ವಾರಿ ನ ಭೋಕ್ತವ್ಯಂ ಹರೇರ್ದಿನೇ ।
ಮಾನವೈಶ್ಚ ಕುತಃ ಕಾನ್ತ ಭುಜ್ಯತೇ ಹರಿವಾಸರೇ ॥ ೧೪ ॥

ಯದಿ ತ್ವಂ ಭೋಕ್ಷ್ಯಸೇ ಕಾನ್ತ ತತೋ ಗರ್ಹಾಂ ಪ್ರಯಾಸ್ಯಸಿ ।
ಏವಂ ವಿಚಾರ್ಯ ಮನಸಾ ಸುದೃಢಂ ಮಾನಸಂ ಕುರು ॥ ೧೫ ॥

॥ ಶೋಭನ ಉವಾಚ ॥

ಸತ್ಯಮೇತತ್ಪ್ರಿಯೇ ವಾಕ್ಯಂ ಕರಿಷ್ಯೇಽಹಮುಪೋಷಣಂ ।
ದೈವೇನ ವಿಹಿತಂ ಯದ್ಧಿ ತತ್ತಥೈವ ಭವಿಷ್ಯತಿ ॥ ೧೬ ॥

॥ ಕೃಷ್ಣ ಉವಾಚ ॥

ಇತಿ ದೃಢಾಂ ಮತಿಂ ಕೃತ್ವಾ ಚಕಾರ ನಿಯಮಂ ವ್ರತೇ ।
ಕ್ಷುಧಯಾ ಪೀಡಿತತನುಃ ಸ ಬಭೂವಾತಿದುಃಖಿತಃ ॥ ೧೭ ॥

---

ಬೇರೆ ಪಶುಗಳು ಇವುಗಳೊಂದೂ ಕೂಡ ಹರಿಯ ದಿನದಲ್ಲಿ ಆಹಾರವನ್ನು ತಿನ್ನ ಕೂಡದು. ನೀರನ್ನೂ ಕುಡಿಯಕೂಡದು. ಹೀಗಿರುವಲ್ಲಿ ಮನುಷ್ಯರು ಏಕಾದಶಿಯ ದಿನದಲ್ಲಿ ಊಟಮಾಡುವುದೆಲ್ಲಿ ಬಂದಿತು ?

೧೫. ಎಲೈ ಕಾಂತನೆ! ನೀನು ಈದಿನ ಊಟಮಾಡಿದರೆ ಅನಂತರ ನಿಂದೆಯನ್ನು ಹೊಂದುತ್ತೀಯೆ. ಇದನ್ನು ಚೆನ್ನಾಗಿ ಯೋಚಿಸಿ ಮನಸ್ಸನ್ನು ದೃಢಮಾಡಿಕೊ.

೧೬. ಶೋಭನನು ಹೇಳಿದನು-ಎಲೈ ಕಾಂತೆಯೆ! ನೀನು ಹೇಳಿದುದು ಸರಿ. ನಾನೂ ಕೂಡ ಉಪವಾಸವನ್ನು ಮಾಡುತ್ತೇನೆ. ದೇವರು ಹಣೆಯಲ್ಲಿ ಹೇಗೆ ಬರೆದಿದ್ದಾನೆಯೋ ಹಾಗೆ ಆಗಲಿ.

೧೭. ಕೃಷ್ಣನು ಹೇಳಿದನು—ಅವನು ಈ ರೀತಿಯಾಗಿ ದೃಢವಾದ ಬುದ್ಧಿಯನ್ನು ಮಾಡಿಕೊಂಡನು. ಹಸಿವಿನಿಂದ ಪೀಡಿತನಾಗಿ ದುಃಖಗೊಂಡನು.

ಇತಿ ಚಿಂತಯತಸ್ತಸ್ಯ ಆದಿತ್ಯೋಸ್ತಮಗಾದ್ಗಿರಿಂ ।
ವೈಷ್ಣವಾನಾಂ ನರಾಣಾಂ ಸಾ ನಿಶಾ ಹರ್ಷವಿವರ್ಧಿನೀ ॥ ೧೮ ॥

ಹರಿಪೂಜಾರತಾನಾಂ ಚ ಜಾಗರಾಸಕ್ತಚೇತಸಾಂ ।
ಬಭೂವ ನೃಪಶಾರ್ದೂಲ ಶೋಭನಸ್ಯಾತಿದುಃಖದಾ ॥ ೧೯ ॥

ರವೇರುದಯವೇಲಾಯಾಂ ಶೋಭನಃ ಪಂಚತಾಂ ಗತಃ ।
ದಾಹಯಾಮಾಸ ರಾಜಾ ತಂ ರಾಜಯೋಗ್ಯೈಶ್ಚ ದಾರುಭಿಃ ॥ ೨೦ ॥

ಚಂದ್ರಭಾಗಾನಾಽಽತ್ಮದೇಹಂ ದದಾಹ ಪತಿನಾ ಸಹ ।
ಕೃತ್ವೋರ್ಧ್ವದೈಹಿಕಂ ತಸ್ಯ ತಸ್ಥೌ ಜನಕವೇಶ್ಮನಿ ॥ ೨೧ ॥

ಶೋಭನಶ್ಚ ನೃಪಶ್ರೇಷ್ಠ ರಮಾವ್ರತಪ್ರಭಾವತಃ ।
ಪ್ರಾಪ್ತೋ ದೇವಪುರಂ ರಮ್ಯಂ ಮಂದರಾಚಲಸಾನುನಿ ॥ ೨೨ ॥

---

೧೮-೧೯. ಆ ಶೋಭನನು ಹೀಗೆ ಯೋಚಿಸುತ್ತಿರುವಲ್ಲಿ ಸೂರ್ಯನು ಅಸ್ತಂಗತನಾದನು. ಆ ರಾತ್ರಿಯು ವಿಷ್ಣುಭಕ್ತಿಯುಳ್ಳ ಮನುಷ್ಯರಿಗೂ ಹರಿಪೂಜೆಯಲ್ಲಿ ಮನಸ್ಸುಳ್ಳವರಿಗೂ ಜಾಗರಣೆಯನ್ನು ಮಾಡಬೇಕೆಂದಿರುವವರಿಗೂ ಹರ್ಷವನ್ನು ಹೆಚ್ಚಿಸುತ್ತಿದ್ದಿತು. ಆದರೆ ಶೋಭನನಿಗೆ ಮಾತ್ರ ಬಹು ದುಃಖವನ್ನು ಕೊಟ್ಟದ್ದಿತು.

೨೦. ಸೂರ್ಯನು ಹುಟ್ಟುವ ಹೊತ್ತಿಗೆ ಈ ಶೋಭನನು ಸತ್ತುಹೋಗಿದ್ದನು. ಇದನ್ನು ತಿಳಿದು ರಾಜನು ರಾಜಯೋಗ್ಯವಾದ ಸೌದೆಗಳಿಂದ (ಗಂಧದ ಸೌದೆ) ಅವನನ್ನು ಸುಡಿಸಿದನು.

೨೧. ಚಂದ್ರಭಾಗೆಯು ಗಂಡನೊಡನೆ ಸಹಗಮನ ಮಾಡಲಿಲ್ಲ. ಅವನಿಗೆ ಅಪರ ಕರ್ಮಗಳನ್ನು ಮಾಡಿ ತಂದೆಯ ಮನೆಯಲ್ಲಿಯೇ ಇದ್ದಳು.

೨೨. ಈ ಶೋಭನನು ರಮಾ ವ್ರತದ ಪ್ರಭಾವದಿಂದ ಮಂದರಪರ್ವತದ ತಪ್ಪಲಲ್ಲಿದ್ದ ದೇವಪುರದಲ್ಲಿ ಹುಟ್ಟಿ ದೊಡ್ಡವನಾದನು.

ಅನುಪಮಮನಾಧೃಷ್ಯಮಸಂಖ್ಯೇಯಗುಣಾನ್ವಿತಂ ।
ಹೇಮಸ್ತಂಭಮಯೈಸ್ಸೌಧೈಃ ರತ್ನವೈಡೂರ್ಯಮಂಡಿತೈಃ ॥ ೨೩ ॥

ಸ್ಫಾಟಿಕೈರ್ವಿವಿಧಾಕಾರೈರ್ವಿಚಿತ್ರೈರುಪಶೋಭಿತೈಃ ।
ಸಿಂಹಾಸನಸಮಾರೂಢಃ ಸುಶ್ವೇತಚ್ಛತ್ರಚಾಮರೈಃ ॥ ೨೪ ॥

ಕಿರೀಟಕುಂಡಲಯುತೋ ಹಾರಕೇಯೂರಭೂಷಿತಃ ।
ಸ್ತೂಯಮಾನೈಶ್ಚ ಗಂಧರ್ವೈಃ ಅಪ್ಸರೋಗಣಸೇವಿತಃ ॥ ೨೫ ॥

ಶೋಭನಶ್ಶೋಭತೇ ಯತ್ರ ರಾಜರಾಜೋಽಪರೋ ಯಥಾ ।
ಸೋಮಶರ್ಮೇತಿ ವಿಖ್ಯಾತೋ ಮುಚುಕುಂದಪುರೇಽಭವತ್ ॥ ೨೬ ॥

ತೀರ್ಥಯಾತ್ರಾಪ್ರಸಂಗೇನ ಭ್ರಮನ್ವಿಪ್ರೋ ದದರ್ಶ ತಂ ।
ನೃಪಜಾಮಾತರಂ ಜ್ಞಾತ್ವಾ ತತ್ಸಮೀಪಂ ಜಗಾಮ ಸಃ ॥ ೨೭ ॥

---

೨೩–೨೫. ಆ ದೇವಪುರವು ಉತ್ಕೃಷ್ಟವಾಗಿದ್ದಿತು. ಶತ್ರುಗಳು ತೊಂದರೆ ಪಡಿಸಲಾಗದುದಾಗಿದ್ದಿತು. ಅಧಿಕವಾದ ಗುಣಗಳಿಂದ ಕೂಡಿದ್ದಿತು. ಆ ಊರಿನಲ್ಲಿ ಒಂದು ಅರಮನೆಯಿದ್ದಿತು. ಅದು ರತ್ನ ವೈಡೂರ್ಯಗಳಿಂದ ಕೂಡಿದ ಚಿನ್ನದ ಕಂಬಗಳಿಂದ ಕೂಡಿದ್ದಿತು. ಅನೇಕವಾದ ಸ್ಫಟಿಕಶಿಲೆಗಳಲ್ಲಿ ಚಿತ್ರವನ್ನು ಕೆತ್ತಿಸಿ ಶೋಭಾಯಮಾನವಾಗಿ ಮಾಡಲ್ಪಟ್ಟಿದ್ದಿತು. ಅಲ್ಲಿ ಶೋಭನನು ರಾಜನಾಗಿ ಹುಟ್ಟಿ ಸಿಂಹಾಸನವನ್ನು ಹೊಂದಿದ್ದನು. ಅಕ್ಕಪಕ್ಕಗಳಲ್ಲಿ ಚಾಮರಗಳನ್ನು ಬೀಸುತ್ತಿದ್ದರು. ಅವನು ಉತ್ತಮವಾದ ಕಿರೀಟವನ್ನು ಹಾಕಿಕೊಂಡಿದ್ದನು. ಭುಜಕೀರ್ತಿಗಳಿಂದ ಭೂಷಿತನಾಗಿದ್ದನು. ಅವನನ್ನು ಗಂಧರ್ವರು ಹೊಗಳು ತ್ತಿದ್ದರು. ಅಪ್ಸರರು ಸೇವಿಸುತ್ತಿದ್ದರು.

೨೬. ಈ ರೀತಿಯಾಗಿ ದೇವಪುರದಲ್ಲಿ ಶೋಭನನು ಬೆಳಗುತ್ತಿದ್ದನು. ಮುಚುಕುಂದನ ಪುರದಲ್ಲಿ ಸೋಮಶರ್ಮನೆಂಬವನೊಬ್ಬನಿದ್ದನು.

೨೭. ಆ ಸೋಮಶರ್ಮನು ತೀರ್ಥಯಾತ್ರೆಗೆ ಹೋಗಿದ್ದವನು ಆ ಶೋಭ ನನನ್ನು ನೋಡಿ ಇವನು ನಮ್ಮ ದೊರೆಯ ಅಳಿಯನು. ಎಂದು ತಿಳಿದು ಅಲ್ಲಿಗೆ ಹೋದನು.

ಶೋಭನೋಽಪಿ ತದಾ ಜ್ಞಾತ್ವಾ ಸೋಮಶರ್ಮಾಣಮಾಗತಂ ।
ಆಸನಾದುತ್ಥಿತಶ್ಶೀಘ್ರಂ ನಮಶ್ಚಕ್ರೇ ದ್ವಿಜೋತ್ತಮಂ ॥ ೨೮ ॥

ಚಕಾರ ಕುಶಲಪ್ರಶ್ನಂ ಶ್ವಶುರಸ್ಯ ನೃಪಸ್ಯ ಚ ।
ಕಾಂತಾಯಾಶ್ಚಂದ್ರಭಾಗಾಯಾಸ್ತಥೈವ ನಗರಸ್ಯ ಚ ॥೨೯ ॥

॥ ಸೋಮಶರ್ಮೋವಾಚ ॥

ಕುಶಲಂ ವರ್ತತೇ ರಾಜನ್ನಾಶ್ಚರ್ಯಂ ವಿದ್ಯತೇಽದ್ಭುತಂ ।
ಪರಂ ವಿಚಿತ್ರಂ ಸುಚಿರಂ ನ ದೃಷ್ಟಂ ಕೇನ ಚಿತ್ಕ್ವಚಿತ್ ॥ ೩೦ ॥

ಏತದಾಚಕ್ಷ್ವ ನೃಪತೇ ಕುತಃ ಪ್ರಾಪ್ತಮಿದಂ ತ್ವಯಾ ।
ತತ್ತ್ವಂ ಕಥಯ ರಾಜೇಂದ್ರ ತತ್ಕರಿಷ್ಯಾಮಿ ನಾನ್ಯಥಾ ॥ ೩೧ ॥

॥ ಶೋಭನ ಉವಾಚ ॥

ಕಾರ್ತಿಕಸ್ಯಾಸಿತೇ ಪಕ್ಷೇ ಯಾ ನಾಮ್ನೈಕಾದಶೀ ರಮಾ ।
ತಾಮುಪೋಷ್ಯ ಮಯಾ ಪ್ರಾಪ್ತಂ ದ್ವಿಜೇಂದ್ರ ಪುರಮೀದೃಶಂ ॥ ೩೨ ॥

---

೨೮. ಶೋಭನನು ಸೋಮಶರ್ಮನನ್ನು ಗುರ್ತಿಸಿದನು. ಅವನು ಬರಲು ಆಸನದಿಂದೆದ್ದು ಅವನನ್ನು ನಮಸ್ಕರಿಸಿ ಸತ್ಕರಿಸಿದನು.

೨೯. ಆ ಸೋಮಶರ್ಮನನ್ನು ಕುರಿತು ತನ್ನ ಮಾವನ ಹೆಂಡತಿಯಾದ ಚಂದ್ರಭಾಗೆಯ ಅಂತೆಯೇ ಪಟ್ಟಣಿಗರೆಲ್ಲರೂ ಕುಶಲವನ್ನೂ ಕೇಳಿದನು.

೩೦. ಸೋಮಶರ್ಮನು ಹೇಳಿದನು- ಎಲೈ ರಾಜನೆ! ಕುಶಲಿಯಾಗಿದ್ದೀಯಾ? ಇದು ಬಹು ಆಶ್ಚರ್ಯಕರವಾಗಿದೆ. ಈ ಪಟ್ಟಣವು ಬಹು ಆಶ್ಚರ್ಯದಿಂದ ಕೂಡಿದೆ. ಇಂತಹ ಆಶ್ಚರ್ಯವನ್ನು ಯಾರೂ ಎಲ್ಲೂ ಕಾಣರು.

೩೧. ಎಲೈ ದೊರೆಯೆ! ಈ ಸೌಭಾಗ್ಯವೆಲ್ಲವೂ ನಿನಗೆ ಹೇಗೆ ಬಂದಿತು? ಅವೆಲ್ಲವನ್ನೂ ಸರಿಯಾಗಿ ಹೇಳು. ನಾನೂ ಹಾಗೆ ಮಾಡುತ್ತೇನೆ

೩೨. ಶೋಭನನು ಹೇಳಿದನು–ಎಲೈ ಬ್ರಾಹ್ಮಣನೆ! ಕಾರ್ತಿಕಮಾಸದ ಬಹುಳದಲ್ಲಿ ರಮಾಏಕಾದಶಿಯು ಬರುತ್ತದೆ. ಅದರಲ್ಲಿ ಉಪವಾಸಮಾಡಿದುದರಿಂದ ಇಂತಹ ಸಂಪತ್ತನ್ನು ಹೊಂದಿದೆನು.

ಮಯ್ಯೈತದ್ವಿಹಿತಂ ವಿಪ್ರ ಶ್ರದ್ಧಾಹೀನಂ ವ್ರತೋತ್ತಮಂ ।
ತೇನಾಹಮಧ್ರುವಂ ಮನ್ಯೇ ಧ್ರುವಂ ಭವತಿ ತಚ್ಛೃಣು ॥ ೩೩ ॥

ಮುಚುಕುಂದಸ್ಯ ದುಹಿತಾ ಚಂದ್ರಭಾಗಾ ಸುಶೋಭನಾ ।
ತಸ್ಯೈ ಕಥಯ ವೃತ್ತಾಂತಂ ರಾಜಕನ್ಯಾಗ್ರತೋ ದ್ವಿಜ ॥ ೩೪ ॥

॥ ಶ್ರೀಕೃಷ್ಣ ಉವಾಚ ॥

ಸ ಶ್ರುತ್ವಾ ವಚನಂ ತಸ್ಯ ಮುಚುಕುಂದಪುರಂ ಗತಃ ।
ಉವಾಚ ಸರ್ವಂ ವೃತ್ತಾಂತಂ ಚಂದ್ರಭಾಗಾಗ್ರತೋ ದ್ವಿಜಃ ॥ ೩೫ ॥

॥ ಸೋಮಶರ್ಮೋವಾಚ ॥

ಪ್ರತ್ಯಕ್ಷಂ ದಯಿತೋ ಕಾನ್ತಃ ತವ ದೃಷ್ಟೋ ಮಯಾ ಶುಭೇ ।
ಇಂದ್ರತುಲ್ಯಮನಾಧೃಷ್ಯಂ ದೃಷ್ಟಂ ತಸ್ಯ ಪುರಂ ಮಯಾ ॥
ಅಧ್ರುವಂ ತೇನ ತತ್ಪ್ರೋಕ್ತಂ ಧ್ರುವಂ ಭವತಿ ತತ್ಕುರು ॥ ೩೬ ॥

---

೩೩. ಎಲೈ ವಿಪ್ರನೆ ! ನಾನುಭಕ್ತಿಯಿಲ್ಲದವನಾಗಿಯೇ ಆ ಏಕಾದಶಿಯನ್ನು ಆಚರಿಸಿದೆನು. ಅದರಿಂದ ಇದು ಬಂದಿತು. ಇದನ್ನು ಶಾಶ್ವತವಲ್ಲವೆಂದು ತಿಳಿದಿದ್ದೇನೆ.

೩೪. ಮುಚುಕುಂದನ ಮಗಳಾದ ಚಂದ್ರಭಾಗೆಯು ಇರುವಳಲ್ಲ ! ಆಕೆಯ ಮುಂದೆ ಈ ಕಥೆಯನ್ನು ತಿಳಿಸು.

೩೫. ಶ್ರೀ ಕೃಷ್ಣನು ಹೇಳಿದನು–ಸೋಮಶರ್ಮನು ಮುಚುಕುಂದನ ಪಟ್ಟಣಕ್ಕೆ ಹೋಗಿ ಆ ಚಂದ್ರಭಾಗೆಗೆ ಈ ಸಮಾಚಾರಗಳೆಲ್ಲವನ್ನೂ ತಿಳಿಸಿದನು.

೩೬. ಸೋಮಶರ್ಮನು ಹೇಳಿದನು–ಎಲೈ ರಾಜಪುತ್ರಿಯೇ ! ನಿನ್ನ ಗಂಡನನ್ನು ನಾನು ಪ್ರತ್ಯಕ್ಷವಾಗಿ ನೋಡಿದೆನು. ಅವನು ಇಂದ್ರನಿಗೆ ಸಮನಾಗಿದ್ದನು. ಅವನು ಪರಾಕ್ರಮಿಯಾಗಿದ್ದಾನೆ. ಅವನ ಪಟ್ಟಣವನ್ನು ನೋಡಿದೆನು. ಅವನು ಅದೆಲ್ಲವೂ ಶಾಶ್ವತವಲ್ಲವೆಂದು ಹೇಳಿದನು. ಅದು ಶಾಶ್ವತವಾಗುವಂತೆ ಮಾಡು.

॥ ಚಂದ್ರಭಾಗೋವಾಚ ॥

ತತ್ರ ಮಾಂ ನಯ ವಿಪ್ರರ್ಷೇ ಪತಿದರ್ಶನಲಾಲಸಾಂ ।
ಆತ್ಮನೋ ವ್ರತಪುಣ್ಯೇನ ಕರಿಷ್ಯಾಮಿ ಪುರಂ ಧ್ರುವಂ ॥ ೩೭ ॥

ಅವಯೋರ್ದ್ವಿಜ ಸಂಯೋಗೋ ಯಥಾ ಭವತಿ ತತ್ಕುರು ।
ಪ್ರಾಪ್ಯತೇ ಹಿ ಮಹತ್ಪುಣ್ಯಂ ಕೃತ್ವಾ ಯೋಗಂ ವಿಯುಕ್ತಯೋಃ ॥ ೩೮ ॥

॥ ಶ್ರೀಕೃಷ್ಣ ಉವಾಚ ॥

ಇತಿ ಶ್ರುತ್ವಾ ಸಹ ತಯಾ ಸೋಮಶರ್ಮಾ ಜಗಾಮ ಹ ।
ಆಶ್ರಮಂ ವಾಮದೇವಸ್ಯ ಮಂದರಾಚಲಸನ್ನಿಧೌ ॥ ೩೯ ॥

ಋಷಿಮಂತ್ರಪ್ರಭಾವೇಣ ವಿಷ್ಣುವಾಸರಸೇವನಾತ್ ।
ದಿವ್ಯದೇಹಾ ಬಭೂವಾಸೌ ದಿವ್ಯಾಂ ಗತಿಮವಾಪ ಹ ॥ ೪೦ ॥

ಪತ್ಯುಸ್ಸಮೀಪಮಗಮತ್ ಪ್ರಹರ್ಷೋತ್ಫುಲ್ಲಲೋಚನಾ ।
ಜಹರ್ಷ ಶೋಭನೋತೀವ ದೃಷ್ಟ್ವಾ ಕಾನ್ತಾಂ ಸಮಾಗತಾಂ ॥ ೪೧ ॥

---

೩೭. ಚಂದ್ರಭಾಗೆಯು ಹೇಳಿದಳು–ಎಲೈ ವಿಪ್ರನೆ! ಅಲ್ಲಿಗೆ ನನ್ನನ್ನು ಕರೆದುಕೊಂಡು ಹೋಗು. ಗಂಡನನ್ನು ನೋಡಬೇಕೆಂಬ ಆಸೆ ಬಲವಾಗಿದೆ. ನನ್ನ ವ್ರತದ ಪುಣ್ಯಗಳಿಂದ ಆ ಪಟ್ಟಣವನ್ನು ಶಾಶ್ವತವಾಗುವಂತೆ ಮಾಡುತ್ತೇನೆ.

೩೮. ಎಲೈ ಬ್ರಾಹ್ಮಣನೆ! ನಮ್ಮಿಬ್ಬರಿಗೂ ಸೇರುವಿಕೆಯನ್ನು ಮಾಡು. ಅಗಲಿರುವ ನಮ್ಮನ್ನು ಸೇರಿಸಿದರೆ ನಿನಗೆ ಬಹು ಪುಣ್ಯವು ಬರುತ್ತದೆ.

೩೯. ಶ್ರೀ ಕೃಷ್ಣನು ಹೇಳಿದನು–ಇದನ್ನು ಕೇಳಿ ಆ ಸೋಮಶರ್ಮನು ಆಕೆಯನ್ನು ಕರೆದುಕೊಂಡು ಮಂದರಪರ್ವತದ ಬಳಿಯಲ್ಲಿರುವ ವಾಮದೇವನ ಆಶ್ರಮಕ್ಕೆ ಹೋದನು.

೪೦. ಅಲ್ಲಿ ಆ ಋಷಿಯ ಮಂತ್ರದ ಪ್ರಭಾವದಿಂದಲೂ ಹರಿವಾಸರವನ್ನು ಸೇವಿಸಿದ್ದರಿಂದಲೂ ಆಕೆಯು ದಿವ್ಯದೇಹವನ್ನು ಹೊಂದಿ ಉತ್ತಮ ಗತಿಯನ್ನು ಹೊಂದಿದಳು.

೪೧. ಸಂತೋಷಪಟ್ಟುಕೊಂಡು ಗಂಡನ ಸಮೀಪಕ್ಕೆ ಹೋದಳು. ಆಗ ಆಕೆಯನ್ನು ನೋಡಿ ಶೋಭನನು ಬಹು ಸಂತೋಷಪಟ್ಟನು.

ಸಮಾಹೂಯ ಸ್ವಕೇ ವಾಮೇ ಪಾರ್ಶ್ವೇ ತಾಂ ಸ ನ್ಯವೇಶಯತ್ ।
ಅಥೋವಾಚ ಪ್ರಿಯಂ ಹರ್ಷಾಚ್ಚಂದ್ರಭಾಗಾ ಪ್ರಿಯಂ ವಚಃ ॥ ೪೨ ॥

॥ ಚಂದ್ರಭಾಗೋವಾಚ ॥

ಶೃಣು ಕಾನ್ತ ಹಿತಂ ವಾಕ್ಯಂ ಯತ್ಪುಣ್ಯಂ ವಿದ್ಯತೇ ಮಯಿ ।
ಅಷ್ಟವರ್ಷಾಧಿಕಾ ಜಾತಾ ಯದಾಹಂ ಪಿತೃವೇಶ್ಮನಿ ॥ ೪೩ ॥

ತತಃ ಪ್ರಭೃತಿ ಯಚ್ಚೀರ್ಣಂ ಮಯಾ ಚೈಕಾದಶೀವ್ರತಂ ।
ತೇನ ಪುಣ್ಯಪ್ರಭಾವೇಣ ಭವಿಷ್ಯತಿ ಪುರಂ ಧ್ರುವಂ ॥
ಸರ್ವಕಾಮಸಮೃದ್ಧಂ ಚ ಯಾವದಾಭೂತಸಂಪ್ಲವಂ ॥ ೪೪ ॥

॥ ಶ್ರೀಕೃಷ್ಣ ಉವಾಚ ॥

ಏವಂ ಸಾ ನೃಪಶಾರ್ದೂಲ ರಮತೇ ಪತಿನಾ ಸಹ ।
ದಿವ್ಯಭೋಗಾ ದಿವ್ಯರೂಪಾ ದಿವ್ಯಾಭರಣಭೂಷಿತಾ ॥ ೪೫ ॥

---

೪೨. ಶೋಭನನು ಆಕೆಯನ್ನು ಕರೆದು ತನ್ನ ಎಡಭಾಗದಲ್ಲಿ ಕೂರಿಸಿಕೊಂಡನು. ಅನಂತರ ಸಂತೋಷದಿಂದ ಆಕೆಯು ಪ್ರಿಯನನ್ನು ಕುರಿತು ಇಂತೆಂದಳು.

೪೩. ಚಂದ್ರಭಾಗೆಯು ಹೇಳಿದಳು— ಎಲೈ ಗಂಡನೇ ಕೇಳು ! ನನ್ನಲ್ಲಿರುವ ಪುಣ್ಯವನ್ನು ಹೇಳುತ್ತೇನೆ. ನಾನು ನನ್ನ ತಂದೆಯ ಮನೆಯಲ್ಲಿ ಎಂಟು ವರ್ಷಗಳಾದ ಮೇಲೆ ಇದುವರೆಗೂ ಮಾಡಿರುವ ಪುಣ್ಯವು ನನ್ನಲ್ಲಿದೆ.

೪೪ ಆ ಎಂಟು ವರ್ಷಗಳಾದ ಮೇಲಿನಿಂದ ಇದುವರೆಗೂ ಏಕಾದಶಿಯ ವ್ರತವನ್ನು ಆಚರಿಸಿದ ಪುಣ್ಯವು ನನ್ನಲ್ಲಿರುವುದರಿಂದ ಆ ಪುಣ್ಯದ ಪ್ರಭಾವದಿಂದ ಈ ಪಟ್ಟಣವನ್ನು ಶಾಶ್ವತವನ್ನಾಗಿ ಮಾಡುತ್ತೇನೆ. ಅದರಲ್ಲಿಯೂ ಸರ್ವಕಾಮಗಳಿಂದ ಕೂಡಿದುದನ್ನಾಗಿ ಪ್ರಳಯಕಾಲದವರೆಗೂ ಇರುವಂತೆ ಮಾಡುತ್ತೇನೆ.

೪೫. ಶ್ರೀ ಕೃಷ್ಣನು ಹೇಳಿದನು—ಈ ರೀತಿಯಾಗಿ ಹೇಳಿ ಅದರಂತೆ ಮಾಡಿ ದಿವ್ಯ ಭೋಗವುಳ್ಳವಳಾಗಿ ದಿವ್ಯವಾದ ಆಭರಣಗಳಿಂದ ಶೋಭಿತಳಾಗಿ ಗಂಡನ ಜೊತೆಯಲ್ಲಿ ರಮಿಸುತ್ತಿದ್ದಳು.

ಶೋಭನೋಽಪಿ ತಯಾ ಸಾರ್ಧಂ ರಮ್ಯತೇ ದಿವ್ಯವಿಗ್ರಹಃ ॥
ರಮಾವ್ರತಪ್ರಭಾವೇಣ ಮಂದರಾಚಲಸಾನುನಿ ॥ ೪೬ ॥

ಚಿಂತಾಮಣಿಸಮಾ ಹ್ಯೇಷಾ ಕಾಮಧೇನುಸಮಾಥವಾ ।
ರಮಾಭಿಧಾನಾ ನೃಪತೇ ತವಾಗ್ರೇ ಕಥಿತಾ ಮಯಾ ॥ ೪೭ ॥

ತಸ್ಯಾ ಮಾಹಾತ್ಮ್ಯಮನಘಂ ಶ್ರುತಂ ಸರ್ವಂ ತ್ವಯಾ ನೃಪ ।
ಮಯಾ ತವಾಗ್ರೇ ಕಥಿತಂ ಮಾಹಾತ್ಮ್ಯಂ ಪಾಪನಾಶನಂ ॥ ೪೮ ॥

ಏಕಾದಶೀವ್ರತಾನಾಂ ಚ ಪಕ್ಷಯೋರುಭಯೋರಪಿ ।
ಯಥಾ ಕೃಷ್ಣಾ ತಥಾ ಶುಕ್ಲಾ ವಿಭೇದಂ ನೈವ ಕಾರಯೇತ್ ॥ ೪೯ ॥

ಸೇವಿತೈಕಾದಶೀ ನೃಣಾಂ ಭುಕ್ತಿಮುಕ್ತಿಪ್ರದಾಯಿನೀ ।
ಧೇನುಃ ಶ್ವೇತಾ ಯಥಾ ಕೃಷ್ಣಾ ಉಭಯೋಸ್ಸದೃಶಂ ಪಯಃ ॥ ೫೦ ॥

---

೪೬. ಶೋಭನನೂ ಕೂಡ ದಿವ್ಯವಾದ ದೇಹವನ್ನು ಹೊಂದಿ ಆ ರಮಾ ವ್ರತ ಪ್ರಭಾವದಿಂದ ಚಂದ್ರಭಾಗೆಯೊಡನೆ ಮಂದರಾಚಲದ ತಪ್ಪಲಿನಲ್ಲಿ ರಮಿಸುತ್ತಿದ್ದನು.

೪೭. ಈ ರಮಾ ಏಕಾದಶಿಯು ಚಿಂತಾಮಣಿಯಂತೆಯೂ ಕಾಮಧೇನುವಿನಂತೆಯೂ ಕೇಳಿದುದನ್ನು ಕೊಡುತ್ತದೆ. ಈ ವ್ರತವನ್ನು ನಿನಗೆ ಹೇಳಿದ್ದೇನೆ.

೪೮. ಎಲೈ ಯುಧಿಷ್ಠಿರನೆ! ಆ ರಮಾ ಏಕಾದಶಿಯ ಉತ್ತಮವಾದ ಮಹಿಮೆಯೆಲ್ಲವನ್ನೂ ಹೇಳಿದ್ದೇನೆ. ಅದು ಪಾಪನಾಶಕವೂ ಪುಣ್ಯಪ್ರದವೂ ಆಗಿದೆ.

೪೯. ಎರಡು ಪಕ್ಷಗಳಲ್ಲಿನ ಏಕಾದಶಿಯಲ್ಲಿಯೂ ಯಾವ ಭೇದವನ್ನೂ ತೋರಿಸಕೂಡದು. ಕೃಷ್ಣೈಕಾದಶಿಯಂತೆಯೇ ಶುಕ್ಲೈಕಾದಶಿಯೂ ಇರುವುದು. ವ್ಯತ್ಯಾಸವನ್ನು ಮಾಡಲೇಬಾರದು.

೫೦. ಈ ಏಕಾದಶಿಗಳನ್ನು ಸೇವಿಸಿದರೆ ಭುಕ್ತಿ ಮುಕ್ತಿಗಳನ್ನು ಕೊಡುತ್ತವೆ. ಕರಿಯ ಹಸು ಬಿಳಿಯ ಹಸು ಬಣ್ಣಗಳಲ್ಲಿ ವ್ಯತ್ಯಾಸವಿದ್ದರೂ ಹಾಲು ಮಾತ್ರ ಒಂದೇ ಬಗೆಯಾದುದು.

ತಥೈವ ತುಲ್ಯಫಲದಂ ಸ್ಮೃತಮೇಕಾದಶೀದ್ವಯಂ ।
ಏಕಾದಶೀವ್ರತಾನಾಂ ಯೋ ಮಾಹಾತ್ಮ್ಯಂ ಶೃಣುತೇ ನರಃ ॥
ಸರ್ವಪಾಪವಿನಿರ್ಮುಕ್ತೋ ವಿಷ್ಣುಲೋಕೇ ಮಹೀಯತೇ ॥ ೫೧ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಪತಿ ನಾರದ
ಸಂವಾದಾಂತರ್ಗತ ಶ್ರೀ ಕೃಷ್ಣ ಯುಧಿಷ್ಠಿರ ಸಂವಾದೇ
ಕಾರ್ತಿಕ ಕೃಷ್ಣ ರಮ್ಯೈಕಾದಶೀ ವರ್ಣನಂ ನಾಮ
ದ್ವಿಷಷ್ಟಿತಮೋಽಧ್ಯಾಯಸ್ಸಮಾಪ್ತಃ

---

೫೧. ಆ ಹಸುವಿನ ಹಾಲಿನಂತೆಯೇ ಎರಡು ಏಕಾದಶಿಗಳೂ ಸಮವಾದ ಫಲವನ್ನು ಕೊಡುತ್ತವೆ. ಏಕಾದಶೀ ವ್ರತಗಳ ಮಹಿಮೆಯನ್ನು ಕೇಳಿದವನು ಎಲ್ಲಾ ಪಾಪಗಳನ್ನೂ ಕಳೆದುಕೊಂಡು ವೈಕುಂಠವನ್ನು ಹೊಂದುವನು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಪತಿ
ನಾರದರ ಸಂವಾದದೊಳಗಿನ ಕೃಷ್ಣ ಯುಧಿಷ್ಠಿರರ ಸಂವಾದದಲ್ಲಿ
ಕಾರ್ತಿಕ ಕೃಷ್ಣ ರಮ್ಯೈಕಾದಶಿಯ ವರ್ಣನೆ ಎಂಬ
ಅರವತ್ತೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ತ್ರಿಷಷ್ಟಿತಮೋಽಧ್ಯಾಯಃ ॥



॥ ಯುಧಿಷ್ಠಿರ ಉವಾಚ ॥

ಶ್ರುತಂ ರಮಾಯಾ ಮಾಹಾತ್ಮ್ಯಂ ತ್ವತ್ತಃ ಕೃಷ್ಣ ಯಥಾತಥಂ ।
ಕಾರ್ತಿಕೇ ಶುಕ್ಲಪಕ್ಷೇ ಯಾ ತಾಂ ಮೇ ಕಥಯ ಮಾನದ ॥ ೧ ॥

॥ ಕೃಷ್ಣ ಉವಾಚ ॥

ಶೃಣು ರಾಜನ್ ಪ್ರವಕ್ಷ್ಯಾಮಿ ಶುಕ್ಲೇ ಚೋರ್ಜದಳೇ ತು ಯಾ ।
ಸಾ ಯಥಾ ನಾರದಾಯೋಕ್ತಾ ಬ್ರಹ್ಮಣಾ ಲೋಕಕಾರಿಣಾ ॥ ೨ ॥

---

## ಅರವತ್ತಮೂರನೆಯ ಅಧ್ಯಾಯವು ॥



೧. ಯುಧಿಷ್ಠಿರನು ಹೇಳಿದನು- ಎಲೈ ಕೃಷ್ಣನೇ ! ನೀನು ಹೇಳಿದ ಈ ರಮಾಏಕಾದಶಿಯ ಮಹಿಮೆಯನ್ನು ಕೇಳಿದೆನು. ಕಾರ್ತಿಕ ಶುಕ್ಲಪಕ್ಷದಲ್ಲಿ ಬರುವ ಏಕಾದಶಿಯ ಹೆಸರೇನು ? ಅದನ್ನು ಹೇಳು.

೨. ಕೃಷ್ಣನು ಹೇಳಿದನು- ಎಲೈ ದೊರೆಯೇ ! ಕಾರ್ತಿಕ ಶುಕ್ಲಪಕ್ಷದಲ್ಲಿ ಬರುವ ಏಕಾದಶಿಯನ್ನು ಹೇಳುತ್ತೇನೆ ಕೇಳು. ಅದನ್ನು ಬ್ರಹ್ಮನು ನಾರದನಿಗೆ ಹೇಳಿರುವನು.

॥ ನಾರದ ಉವಾಚ ॥

ಪ್ರಬೋಧಿನ್ಯಾಶ್ಚ ಮಾಹಾತ್ಮ್ಯಂ ವದ ವಿಸ್ತರತೋ ಮಮ ।
ಯಸ್ಯಾಂ ಜಾಗರ್ತಿ ಗೋವಿಂದೋ ಧರ್ಮಕರ್ಮಪ್ರವರ್ತಕಃ ॥ ೩ ॥

॥ ಬ್ರಹ್ಮೋವಾಚ ॥

ಪ್ರಬೋಧಿನ್ಯಾಶ್ಚ ಮಾಹಾತ್ಮ್ಯಂ ಪಾಪಘ್ನಂ ಪುಣ್ಯವರ್ಧನಂ ।
ಮುಕ್ತಿಪ್ರದಂ ಸುಬುದ್ಧೀನಾಂ ಶೃಣುಷ್ವ ಮುನಿಸತ್ತಮ ॥ ೪ ॥

ತಾವ ಗರ್ಜಂತಿ ತೀರ್ಥಾನಿ ಆಸಮುದ್ರಸರಾಂಸಿ ಚ ।
ಯಾವತ್ಪ್ರಬೋಧಿನೀ ವಿಷ್ಣೋಸ್ತಿಥಿರ್ನಾಯಾತಿ ಕಾರ್ತಿಕೇ ॥ ೫ ॥

ತಾವದ್ಗರ್ಜಂತಿ ವಿಪ್ರೇಂದ್ರ ಗಂಗಾಭಾಗೀರಥೀ ಕ್ಷಿತೌ ।
ಯಾವನ್ನಾಯಾತಿ ಪಾಪಘ್ನೀ ಕಾರ್ತಿಕೇ ಹರಿಬೋಧಿನೀ ॥ ೬ ॥

ಅಶ್ವಮೇಧಸಹಸ್ರಾಣಿ ರಾಜಸೂಯಶತಾನಿ ಚ ।
ಏಕೇನೈವೋಪವಾಸೇನ ಪ್ರಬೋಧಿನ್ಯಾಂ ಲಭೇನ್ನರಃ ॥ ೭ ॥

---

೩. ನಾರದನು ಹೇಳಿದನು- ಪ್ರಬೋಧಿನಿ ಏಕಾದಶಿಯ ಮಹಿಮೆಯನ್ನು ನನಗೆ ವಿಸ್ತಾರವಾಗಿ ಹೇಳು. ಧರ್ಮ ಕರ್ಮ ಪ್ರವರ್ತಕನಾದ ಗೋವಿಂದನು ಆ ಏಕಾದಶಿಯಲ್ಲಿ ಎಚ್ಚೆತ್ತಿರುವನಷ್ಟೆ !

೪. ಬ್ರಹ್ಮನು ಹೇಳಿದನು—ಎಲೈ ನಾರದನೆ! ಪ್ರಬೋಧಿನಿಯ ಮಹಿಮೆಯನ್ನು ಹೇಳುತ್ತೇನೆ. ಅದು ಪಾಪನಾಶಕವು. ಪುಣ್ಯವರ್ಧನವು. ಮುಕ್ತಿಯನ್ನು ಕೊಡುತ್ತದೆ.

೫. ಕಾರ್ತಿಕಮಾಸದ ಪ್ರಬೋಧಿನೀ ಏಕಾದಶಿಯು ಬರುವವರೆಗೂ ಸಮುದ್ರವೇ ಮುಂತಾದ ತೀರ್ಥಗಳು ನಾನು ಹೆಚ್ಚು ತಾನು ಹೆಚ್ಚೆಂದು ಗರ್ಜಿಸುತ್ತವೆ.

೬. ಪಾಪನಾಶಕವಾದ ಹರಿಬೋಧಿನ್ಯೇಕಾದಶಿಯು ಕಾರ್ತಿಕದಲ್ಲಿರುವ ವರೆಗೂ ಭೂಮಿಯಲ್ಲಿ ಗಂಗಾ ನರ್ಮದೆಗಳು ತಾವೇ ಹೆಚ್ಚೆಂದು ಕೂಗುತ್ತವೆ.

೭. ಸಾವಿರ ಅಶ್ವಮೇಧಗಳ, ನೂರು ರಾಜಸೂಯಗಳ ಫಲವನ್ನು ಪ್ರಬೋಧಿನ್ಯೇಕಾದಶಿಯೊಂದರ ಉಪವಾಸದಿಂದಲೇ ಹೊಂದುತ್ತಾನೆ.

ಯದ್ದುರ್ಲಭಂ ಯದಪ್ರಾಪ್ಯಂ ತ್ರೈಲೋಕ್ಯಸ್ಯ ನ ಗೋಚರಂ ।
ತದಪಿ ಪ್ರಾರ್ಥಿತಂ ಪುತ್ರ ದಧಾತಿ ಹರಿಬೋಧಿನೀ ॥ ೮ ॥

ಐಶ್ವರ್ಯಂ ಸಂಪದಂ ಪ್ರಜ್ಞಾಂ ರಾಜ್ಯಂ ಚ ಸುಖಮೇವ ಹಿ ।
ದದಾತ್ಯುಪೋಷಿತಾ ಭಕ್ತ್ಯಾ ಜನೇಭ್ಯೋ ಹರಿಬೋಧಿನೀ ॥ ೯ ॥

ಮೇರುಮಂದರಗಾತ್ರಾಣಿ ಪಾಪಾನ್ಯುಚ್ಚಾನಿ ಯಾನಿ ಚ ।
ಏಕೇನೈವೋಪವಾಸೇನ ದಹತೇ ಪಾಪನಾಶಿನೀ ॥ ೧೦ ॥

ಪೂರ್ವಜನ್ಮಸಹಸ್ರೇಷು ಯತ್ಪಾಪಂ ಸಮುಪಾರ್ಜಿತಂ ।
ನಿಶಿ ಜಾಗರಣಂ ಚಾಸ್ಯಾ ದಹತೇ ತೂಲರಾಶಿವತ್ ॥ ೧೧ ॥

ಉಪವಾಸಂ ಪ್ರಬೋಧಿನ್ಯಾಂ ಯಃ ಕರೋತಿ ಸ್ವಭಾವತಃ ।
ವಿಧಿವನ್ಮುನಿಶಾರ್ದೂಲ ಯಥೋಕ್ತಂ ಲಭತೇ ಫಲಂ ॥ ೧೨ ॥

---

೮. ಪ್ರಪಂಚದಲ್ಲಿ ಹೊಂದಲಸಾಧ್ಯವಾದ, ಸಿಕ್ಕುವುದೇ ಇಲ್ಲವೆಂಬ, ಕೊನೆಗೆ ಮೂರು ಲೋಕದಲ್ಲಿ ಯಾವುದು ಬೇಕೆನ್ನುತ್ತಾನೆಯೋ ಅದು ಸಿಕ್ಕದಿದ್ದುದಾದರೂ ಅಂತಹುದನ್ನೂ ಈ ಪ್ರಬೋಧಿನೀ ಏಕಾದಶೀ ವ್ರತದಿಂದ ಹೊಂದುತ್ತಾನೆ.

೯. ಈ ಹರಿಬೋಧಿನಿಯು ತನ್ನ ದಿನ ಉಪವಾಸ ಮಾಡಿದವರಿಗೆ ಐಶ್ವರ್ಯ, ಬುದ್ಧಿ, ರಾಜ್ಯ, ಸುಖಗಳನ್ನು ಕೊಡುತ್ತದೆ.

೧೦. ಪಾಪಗಳು ಮೇರು ಮಂದರ ಪರ್ವತಗಳಷ್ಟು ದೊಡ್ಡದಾಗಿದ್ದರೂ ಅವು ಹರಿಬೋಧಿನೀ ಏಕಾದಶಿಯ ಒಂದು ಉಪವಾಸದಿಂದಲೇ ನಾಶವಾಗುತ್ತದೆ

೧೧. ಈ ಪ್ರಬೋಧಿನಿಯ ರಾತ್ರಿ ಜಾಗರಣ ಮಾಡುವುದರಿಂದ ಹಿಂದಿನ ಸಾವಿರ ಜನ್ಮಗಳ ಪಾಪಗಳನ್ನು ಹತ್ತಿಯ ರಾಶಿಯನ್ನು ಬೆಂಕಿಯು ಹಾಳುಮಾಡು ವಂತೆ ಹಾಳುಮಾಡುತ್ತದೆ.

೧೨. ಪ್ರಬೋಧಿನಿಯ ದಿನ ಉಪವಾಸ ಮಾಡಿದವನು ಶಾಸ್ತ್ರೋಕ್ತವಾದ ಫಲವನ್ನು ಹೊಂದುತ್ತಾನೆ.

ಯಥೋಕ್ತಂ ಕುರುತೇ ಯಸ್ತು ವಿಧಿವತ್ಸುಕೃತಂ ನರಃ ।
ಸ್ವಲ್ಪಂ ಮುನಿವರಶ್ರೇಷ್ಠ ಮೇರುತುಲ್ಯಂ ಭವೇತ್ಫಲಂ ॥ ೧೩ ॥

ವಿಧಿಹೀನಂ ತು ಯಃ ಕುರ್ಯಾತ್ ಸುಕೃತಂ ಮೇರುಮಾತ್ರಕಂ ।
ಅಣುಮಾತ್ರಂ ತದಾಪ್ನೋತಿ ಫಲಂ ಧರ್ಮಸ್ಯ ನಾರದ ॥ ೧೪ ॥

ಯೇ ಧ್ಯಾಯಂತಿ ಮನೋವೃತ್ತ್ಯಾ ಯೇ ಕರಿಷ್ಯಂತಿ ಬೋಧಿನೀಂ ।
ವಸಂತಿ ಪಿತರೋ ಹೃಷ್ಟಾ ವಿಷ್ಣುಲೋಕೇ ಚ ತಸ್ಯ ವೈ ॥ ೧೫ ॥

ವಿಮುಕ್ತಾ ನಾರಕೈರ್ದುಃಖೈರ್ಯಾಂತಿ ವಿಷ್ಣೋಃ ಪರಂ ಪದಂ ।
ಕೃತ್ವಾ ತು ಪಾತಕಂ ಘೋರಂ ಬ್ರಹ್ಮಹತ್ಯಾದಿಕಂ ನರಃ ॥ ೧೬ ॥

ಕೃತ್ವಾ ತು ಜಾಗರಂ ವಿಷ್ಣೋರ್ಧೌತಪಾಪೋ ಭವೇನ್ನರಃ ।
ದುಷ್ಪ್ರಾಪ್ಯಂ ಯತ್ಫಲಂ ವಿಪ್ರ ಹ್ಯಶ್ವಮೇಧಾದಿಕೈರ್ಮಖೈಃ ॥ ೧೭ ॥

---

೧೩. ಆ ಪ್ರಬೋಧಿನಿಯ ದಿನ ಯಾವನು ವಿಧಿವತ್ತಾಗಿ ಸ್ವಲ್ಪವಾದರೂ ಪುಣ್ಯ ಬರುವ ಕೆಲಸವನ್ನು ಮಾಡುತ್ತಾನೆಯೋ ಅವನಿಗೆ ಅದು ಮೇರು ಪರ್ವತದಷ್ಟು ದೊಡ್ಡದಾಗುತ್ತದೆ.

೧೪. ಯಾರು ಆದಿನ ನಿಯಮವನ್ನು ಅನುಸರಿಸದೆ ಮೇರುವಿನಷ್ಟು ಪುಣ್ಯವನ್ನು ಮಾಡಿದರೂ ಕೂಡ ಅದು ಸ್ವಲ್ಪವೇ ಫಲವನ್ನು ಕೊಡುತ್ತದೆ.

೧೫. ಯಾರು ಈ ಪ್ರಬೋಧಿನಿಯನ್ನು ಧ್ಯಾನ ಮಾಡಿ ಆಚರಿಸುತ್ತಾರೆಯೋ ಅವರ ಪಿತೃಗಳು ಸಂತೋಷದಿಂದ ವೈಕುಂಠದಲ್ಲಿ ವಾಸಮಾಡುತ್ತಾರೆ.

೧೬. ಬ್ರಹ್ಮಹತ್ಯಾದಿ ಪಾಪಗಳನ್ನು ಮಾಡಿದ್ದರೂ ಕೂಡ ಯಾವನು ಈ ಪ್ರಬೋಧಿನಿಯನ್ನು ಆಚರಿಸುವನೋ ಅವನು ವಿಷ್ಣುಲೋಕವನ್ನು ಹೊಂದುತ್ತಾರೆ.

೧೭--೨೦. ಪ್ರಬೋಧಿನಿಯ ದಿನ ಜಾಗರಣ ಮಾಡಿದರೆ ಮನುಷ್ಯನು ತನ್ನ ಪಾಪಗಳನ್ನೆಲ್ಲಾ ಕಳೆದುಕೊಳ್ಳುತ್ತಾನೆ. ಬಹು ಕಷ್ಟದಿಂದ ಸಾಧಿಸುವ ಅಶ್ವಮೇಧಾದಿ ಯಾಗಗಳನ್ನು ಮಾಡಿದರೆ ಯಾವ ಫಲವು ಬರುತ್ತದೋ ಆ ಫಲವನ್ನು

ಪ್ರಾಪ್ಯತೇ ತತ್ಸುಖೇನೈವ ಪ್ರಬೋಧಿನ್ಯಾಸ್ತು ಜಾಗರೇ ।
ಆಪ್ಲುತ್ಯ ಸರ್ವತೀರ್ಥೇಷು ಪ್ರದತ್ವಾ ಕಾಂಚನಂ ಮಹೀಂ ॥ ೧೮ ॥

ತತ್ಫಲಂ ಸಮವಾಪ್ನೋತಿ ಯತ್ಕೃತ್ವಾ ಜಾಗರಂ ಹರೇಃ ।
ಜಾತಸ್ಸ ಏವ ಸುಕೃತೀ ಕುಲಂ ತೇನೈವ ಪಾವಿತಂ ॥ ೧೯ ॥

ಕಾರ್ತಿಕೇ ಮುನಿಶಾರ್ದೂಲ ಕೃತಾ ಯೇನ ಪ್ರಬೋಧಿನೀ ।
ಯಥಾಧ್ರುವಂ ನೃಣಾಂ ಮೃತ್ಯುಃ ಧನಮಾತ್ರಂ ತಥಾಧ್ರುವಂ ॥ ೨೦ ॥

ಇತಿ ಜ್ಞಾತ್ವಾ ಮುನಿಶ್ರೇಷ್ಠ ಕರ್ತವ್ಯಂ ವೈಷ್ಣವಂ ದಿನಂ ।
ಯಾನಿ ಕಾನಿ ಚ ತೀರ್ಥಾನಿ ತ್ರೈಲೋಕ್ಯೇ ಸಂಭವಂತಿ ಚ ॥ ೨೧ ॥

ತಾನಿ ತಸ್ಯ ಗೃಹೇ ಸಮ್ಯಗ್ಯಃ ಕರೋತಿ ಪ್ರಬೋಧಿನೀಂ ।
ಕಿಂ ತಸ್ಯ ಬಹುಭಿಃ ಪುಣ್ಯೈಃ ಕೃತಾ ಯೇನ ಪ್ರಬೋಧಿನೀ ॥ ೨೨ ॥

---

ಈ ಪ್ರಬೋಧಿನಿಯ ಏಕಾದಶಿಯ ಉಪವಾಸವೊಂದರಿಂದಲೇ ಸುಖವಾಗಿ ಹೊಂದುತ್ತಾನೆ. ಆ ಪ್ರಬೋಧಿನಿಯ ದಿನ ಜಾಗರಣವನ್ನು ಮಾಡಿದರೆ ಸರ್ವ ತೀರ್ಥದಲ್ಲಿಯೂ ಸ್ನಾನ ಮಾಡಿದ ಫಲವನ್ನೂ ಅನೇಕ ಚಿನ್ನವನ್ನು ದಾನಮಾಡಿದ ಫಲವನ್ನೂ ಹೊಂದುತ್ತಾನೆ. ಕಾರ್ತಿಕ ಮಾಸದಲ್ಲಿ ಪ್ರಬೋಧಿನೀ ಏಕಾದಶಿಯನ್ನು ಮಾಡಿದವನೇ ಪ್ರಪಂಚದಲ್ಲಿ ಜನ್ಮಸಾರ್ಥಕವನ್ನುಂಟುಮಾಡಿಕೊಂಡು ಹುಟ್ಟಿದ ಮನುಷ್ಯನು. ಅವನೇ ಪುಣ್ಯಶಾಲಿಯು. ಅವನಿಂದಲೇ ಕುಲವು ಪವಿತ್ರವಾಗುವುದು. ಮನುಷ್ಯನಿಗೆ ಸಾವು ಹೇಗೆ ಶಾಶ್ವತವೋ ಹಾಗೆ ಹಣ ಮುಂತಾದುವು ಶಾಶ್ವತವಾದುವುಗಳಲ್ಲ.

೨೧–೨೨. ಇದನ್ನು ತಿಳಿದುಕೊಂಡು ಪ್ರಬೋಧಿನೀ ಏಕಾದಶಿಯನ್ನು ಮಾಡಬೇಕು. ಪ್ರಬೋಧಿನೀ ಏಕಾದಶಿಯನ್ನು ಆಚರಿಸಿದವನ ಮನೆಯಲ್ಲಿ ತೀರ್ಥಗಳೂ ವ್ರತಗಳೂ ಇರುತ್ತವೆ. ಪ್ರಬೋಧಿನಿಯನ್ನು ಆಚರಿಸಿದವನು ಮತ್ತಾವ ಪುಣ್ಯವನ್ನೂ ಆಚರಿಸಬೇಕಾದ ಅವಶ್ಯಕತೆಯೇ ಇಲ್ಲವು.

ಪುತ್ರಪೌತ್ರಪ್ರದಾಹ್ಯೇಷಾ ಕಾರ್ತಿಕೇ ಹರಿಬೋಧಿನೀ ।
ಸ ಜ್ಞಾನೀ ಸ ಚ ಯೋಗೀ ಚ ಸ ತಪಸ್ವೀ ಜಿತೇಂದ್ರಿಯಃ ॥ ೨೩ ॥

ಭೋಗೋ ಮೋಕ್ಷಶ್ಚ ತಸ್ಯಾಸ್ತಿ ಯ ಉಪಾಸ್ತೇ ಪ್ರಬೋಧಿನೀಂ ।
ವಿಷ್ಣೋಃ ಪ್ರಿಯತರಾ ಹ್ಯೇಷಾ ಧರ್ಮಸಾರಸಹಾಯಿನೀ ॥ ೨೪ ॥

ಯಃ ಕರೋತಿ ನರೋ ಭಕ್ತ್ಯಾ ಮುಕ್ತಿಭಾಕ್ಸಭವೇನ್ನರಃ ।
ಪ್ರಬೋಧಿನೀಮುಪೋಷಿತ್ವಾ ಗರ್ಭೇ ನ ವಿಶತೇ ನರಃ ॥ ೨೫ ॥

ಸರ್ವಧರ್ಮಾನ್ಪರಿತ್ಯಜ್ಯ ತಸ್ಮಾತ್ಕುರ್ವೀತ ನಾರದ ।
ಕರ್ಮಣಾ ಮನಸಾ ವಾಚಾ ಪಾಪಂ ಯತ್ಸಮುಪಾರ್ಜಿತಂ ॥ ೨೬ ॥

ತತ್ ಕ್ಷಾಳಯತಿ ಗೋವಿಂದಃ ಪ್ರಬೋಧಿನ್ಯಾಂ ತು ಜಾಗರೇ ।
ಸ್ನಾನಂ ದಾನಂ ಜಪೋ ಹೋಮಃ ಸಮುದ್ದಿಶ್ಯ ಜನಾರ್ದನಂ ॥ ೨೭ ॥

---

೨೩–೨೪. ಪ್ರಬೋಧಿನೀ ವ್ರತವು ಮಕ್ಕಳು ಮೊಮ್ಮಕ್ಕಳನ್ನೂ ಕೊಡುತ್ತದೆ. ಯಾವನು ಪ್ರಬೋಧಿನಿಯನ್ನು ಆಚರಿಸುತ್ತಾನೆಯೋ ಅವನೇ ಜ್ಞಾನಿಯು. ಅವನೇ ಯೋಗಿಯು. ಅವನೇ ತಪಸ್ವಿಯು. ಅವನೇ ಜಿತೇಂದ್ರಿಯನು. ಭೋಗಗಳೂ ಮೋಕ್ಷಗಳೂ ಅವನಿಗೇ ಸಿಕ್ಕುತ್ತವೆ. ಈ ಪ್ರಬೋಧಿನಿಯು ವಿಷ್ಣುವಿಗೆ ಪ್ರಿಯವಾದುದು. ಧರ್ಮಕ್ಕೆ ಸಹಾಯಕವಾದುದು.

೨೫. ಈ ಪ್ರಬೋಧಿನೀ ವ್ರತವನ್ನು ಮಾಡಿದವನು ಮುಕ್ತಿಯನ್ನು ಹೊಂದುತ್ತಾನೆ. ಪ್ರಬೋಧಿನಿಯನ್ನಾಚರಿಸಿದರೆ ಅವನು ಮತ್ತೆ ಜನ್ಮವನ್ನು ತಾಳುವುದಿಲ್ಲ.

೨೬–೨೭. ಮನುಷ್ಯನು ಮಿಕ್ಕ ಧರ್ಮಗಳೆಲ್ಲವನ್ನೂ ಬಿಟ್ಟು ಈ ಪ್ರಬೋಧಿನಿಯನ್ನಾಚರಿಸಬೇಕು. ಮನೋವಾಕ್ಕಾಯಗಳಿಂದ ಮಾಡಿದ ಪಾಪವನ್ನು ಈ ಪ್ರಬೋಧಿನಿಯ ಆಚರಣೆಯಿಂದ ಗೋವಿಂದನು ನಾಶಮಾಡುತ್ತಾನೆ. ಮನುಷ್ಯನು ಪ್ರಬೋಧಿನಿಯ ದಿನ ಮಾಡಿದ ಸ್ನಾನ, ದಾನ, ಜಪ, ಹೋಮಗಳು

ನರೋ ಯತ್ಕುರುತೇ ವತ್ಸ ಪ್ರಬೋಧಿನ್ಯಾಂ ತದಕ್ಷಯಂ ।
ಯೇಽರ್ಚಯಂತಿ ನರಾಸ್ತಸ್ಯಾಂ ಭಕ್ತ್ಯಾ ದೇವಂ ತು ಮಾಧವಂ ॥ ೨೮ ॥

ಸಮುಪೋಷ್ಯ ಪ್ರಮುಚ್ಯಂತೇ ಪಾಪೈಸ್ತೇ ಶತಜನ್ಮಜೈಃ ।
ಮಹಾವ್ರತಮಿದಂ ಪುತ್ರ ಮಹಾಪಾಪೌಘನಾಶನಂ ॥ ೨೯ ॥

ಪ್ರಬೋಧವಾಸರೇ ವಿಷ್ಣೋರ್ವಿಧಿವತ್ಸಮುಪೋಷಯೇತ್ ।
ವ್ರತೇನಾನೇನ ದೇವೇಶಂ ಪರಿತೋಷ್ಯ ಜನಾರ್ದನಂ ॥ ೩೦ ॥

ವಿರಾಜಯನ್ ದಿಶಸ್ಸರ್ವಾಃ ಪ್ರಯಾತಿ ಹರಿಮಂದಿರಂ ।
ಕರ್ತವ್ಯೈಷಾ ಪ್ರಯತ್ನೇನ ನರೈಃ ಕಾನ್ತಿಧನಾರ್ಥಿಭಿಃ ॥ ೩೧ ॥

ಬಾಲ್ಯೇ ಯತ್ಸಂಚಿತಂ ಪಾಪಂ ಯೌವನೇ ವಾರ್ಧಕೇ ತಥಾ ।
ಶತಜನ್ಮಕೃತಂ ಪಾಪಂ ಸ್ವಲ್ಪಂ ವಾ ಯದಿ ವಾ ಬಹು ॥ ೩೨ ॥

ತತ್ ಕ್ಷಾಳಯತಿ ಗೋವಿಂದಃ ಚಾಸ್ಯಾಮಭ್ಯರ್ಚಿತೋ ನೃಣಾಂ ।
ಧನಧಾನ್ಯವಹಾಪುಣ್ಯಾ ಸರ್ವಪಾಪಹರಾಪರಾ ॥ ೩೩ ॥

---

ಅಕ್ಷಯವಾಗುತ್ತವೆ. ಆ ಪ್ರಬೋಧಿನಿಯ ದಿನ ಭಕ್ತಿಯಿಂದ ಯಾರು ಮಾಧವನನ್ನು ಪೂಜಿಸುತ್ತಾರೆಯೋ ಮತ್ತು ಉಪವಾಸವಿರುತ್ತಾರೆಯೋ ಅವರ ಪಾಪಗಳೆಲ್ಲವೂ ಹೋಗುತ್ತವೆ. ಎಲೈ ನಾರದನೇ ! ಇದು ಮಹಾವ್ರತವು. ಪಾಪನಾಶಕವಾದುದು.

೩೦–೩೩. ಈ ಪ್ರಬೋಧಿನಿಯ ವ್ರತವನ್ನು ವಿಧಿವತ್ತಾಗಿ ಮಾಡಬೇಕು. ಈ ವ್ರತದಿಂದ ಜನಾರ್ದನನನ್ನು ಸಂತೋಷಪಡಿಸಿದರೆ ಎಲ್ಲಾ ದಿಕ್ಕುಗಳನ್ನೂ ಪ್ರಕಾಶಪಡಿಸುತ್ತ ವೈಕುಂಠಕ್ಕೆ ಹೋಗುವನು. ಆದುದರಿಂದ ಕಾಂತಿ ಧನಗಳನ್ನು ಅಪೇಕ್ಷಿಸುವವರು ಪ್ರಯತ್ನದಿಂದ ಇದನ್ನು ಮಾಡಬೇಕು. ಬಾಲ್ಯ, ಯೌವನ ಕೌಮಾರಗಳಲ್ಲಿ ನೂರು ಜನ್ಮಗಳಲ್ಲಿ ಮಾಡಿದ್ದ ಪಾಪಗಳೂ ಕೂಡ ಎಷ್ಟಿದ್ದರೂ ಅವನ್ನು ಈ ಪ್ರಬೋಧಿನಿಯಲ್ಲಿ ಪೂಜಿತನಾದ ಗೋವಿಂದನು ನಾಶಮಾಡುತ್ತಾನೆ. ಇದು ಧನಧಾನ್ಯಗಳನ್ನು ಕೊಡುತ್ತದೆ. ಸರ್ವಪಾಪಗಳನ್ನೂ ನಾಶಮಾಡುತ್ತದೆ. ಆ ದಿನ ಉಪವಾಸವಿದ್ದರೆ ದುರ್ಲಭವಾದುವುಗಳೆಲ್ಲವೂ ಸಿಕ್ಕುತ್ತವೆ.

ತಾಮುಪೋಷ್ಯ ಹರೇರ್ಭಕ್ತ್ಯಾ ದುರ್ಲಭಂ ನ ಭವೇತ್ಕ್ವಚಿತ್ ।
ಚಂದ್ರಸೂರ್ಯೋಪರಾಗೇ ಚ ಯತ್ಫಲಂ ಪರಿಕೀರ್ತಿತಂ ॥ ೩೪ ॥

ತತ್ಸಹಸ್ರಗುಣಂ ಪ್ರೋಕ್ತಂ ಪ್ರಬೋಧಿನ್ಯಾಂ ಚ ಜಾಗರೇ ।
ಸ್ನಾನಂ ದಾನಂ ಜಪೋ ಹೋಮಃ ಸ್ವಾಧ್ಯಾಯೋಽಭ್ಯರ್ಚನಂ ಹರೇಃ ॥ ೩೫ ॥

ತತ್ಸರ್ವಂ ಕೋಟಿಗುಣಿತಂ ಪ್ರಬೋಧಿನ್ಯಾಂ ತು ಯತ್ಕೃತಂ ।
ಜನ್ಮಪ್ರಭೃತಿಯತ್ಪುಣ್ಯಂ ನರೇಣೋಪಾರ್ಜಿತಂ ಭವೇತ್ ॥ ೩೬ ॥

ವೃಥಾ ಭವತಿ ತತ್ಸರ್ವಮಕೃತ್ವಾ ಕಾರ್ತಿಕೇ ವ್ರತಂ ।
ಅಕೃತ್ವಾ ನಿಯಮಂ ವಿಷ್ಣೋಃ ಕಾರ್ತಿಕೇ ಯಃ ಕ್ಷಿಪೇನ್ನರಃ ॥ ೩೭ ॥

ಜನ್ಮಾರ್ಜಿತಸ್ಯ ಪುಣ್ಯಸ್ಯ ಫಲಂ ನಾಪ್ನೋತಿ ನಾರದ ।
ತಸ್ಮಾತ್ಸರ್ವಪ್ರಯತ್ನೇನ ದೇವದೇವಂ ಜನಾರ್ದನಂ ॥ ೩೮ ॥

ಉಪವಾಸೇನ ವಿಪ್ರೇಂದ್ರ ಸರ್ವಕಾಮಫಲಪ್ರದಂ ।
ಪರಾನ್ನಂ ವರ್ಜಯೇದ್ಯಸ್ತು ಕಾರ್ತಿಕೇ ವಿಷ್ಣುತತ್ಪರಃ ॥ ೩೯ ॥

---

೩೪–೩೮. ಪ್ರಬೋಧಿನಿಯ ದಿನ ಜಾಗರಣಮಾಡಿದರೆ ಚಂದ್ರ ಸೂರ್ಯರ ಗ್ರಹಣದಲ್ಲಿ ಬರುವ ಫಲಕ್ಕಿಂತಲೂ ಸಾವಿರದಷ್ಟು ಹೆಚ್ಚು ಬರುವುದೆಂದು ಹೇಳಲ್ಪಟ್ಟಿದೆ. ಪ್ರಬೋಧಿನಿಯ ದಿನ ಮಾಡಿದ ಸ್ನಾನ, ದಾನ, ಜಪ, ಹೋಮ ಅಧ್ಯಯನ ಪೂಜೆಗಳೆಲ್ಲವೂ ಕೋಟಿಯಷ್ಟು ಹೆಚ್ಚಿರುತ್ತವೆ. ಈ ಪ್ರಬೋಧಿನಿಯನ್ನಾಚರಿಸದಿದ್ದರೆ ಹುಟ್ಟಿದ ಮೊದಲಿನಿಂದಲೂ ಮಾಡಿದ ಪುಣ್ಯಗಳೆಲ್ಲವೂ ನಾಶವಾಗುತ್ತವೆ. ಈ ಪ್ರಬೋಧಿನಿಯನ್ನು ಆಚರಿಸದೆ ಯಾವನು ತಿರಸ್ಕರಿಸುವನೋ ಅವನು ಜನ್ಮಾಂತರದಿಂದ ಮಾಡಿದ ಪುಣ್ಯಗಳನ್ನು ಹೊಂದುವುದಿಲ್ಲ. ಆದುದರಿಂದ ಸರ್ವಪ್ರಯತ್ನದಿಂದಲೂ ಆ ದಿವಸ ಉಪವಾಸಮಾಡಿ ದೇವದೇವನಾದ ಜನಾರ್ದನನನ್ನು ಪೂಜಿಸಬೇಕು.

೩೯–೪೧. ಕಾರ್ತಿಕದಲ್ಲಿ ವಿಷ್ಣುವಿನಲ್ಲಿ ಭಕ್ತಿಯಿಂದ ಪರರ ಮನೆಯ ಅನ್ನವನ್ನು ಊಟಮಾಡದಿರಬೇಕು. ಹಾಗೆ ಊಟಮಾಡದಿದ್ದರೆ ಚಾಂದ್ರಾಯಣ ವ್ರತವನ್ನು ಮಾಡಿದ ಫಲವು ಬರುತ್ತದೆ. ಆ ಕಾರ್ತಿಕದಲ್ಲಿ ಯಾವನು ಶಾಸ್ತ್ರಾರ್ಥ

ಪರಾನ್ನವರ್ಜನಾದ್ವತ್ಸ ಚಾಂದ್ರಾಯಣಫಲಂ ಲಭೇತ್ ।
ನಿತ್ಯಂ ಶಾಸ್ತ್ರವಿನೋದೇನ ಕಾರ್ತಿಕಂ ಯಃ ಕ್ಷಿಪೇನ್ನರಃ ॥ ೪೦ ॥

ಸ ದಹೇತ್ಸರ್ವಪಾಪಾನಿ ಯಜ್ಞಾಯುತಫಲಂ ಲಭೇತ್ ।
ನ ತಥಾ ತುಷ್ಯತೇ ಯಜ್ಞೈರ್ನದಾನೈರ್ವಾ ಜಪಾದಿಭಿಃ ॥
ಯಥಾ ಶಾಸ್ತ್ರಕಥಾಲಾಪೈಃ ಕಾರ್ತಿಕೇ ಮಧುಸೂದನಃ ॥ ೪೧ ॥

ಯೇ ಕುರ್ವಂತಿ ಕಥಾಂ ವಿಷ್ಣೋಃ ಯೇ ಶೃಣ್ವಂತಿ ಶುಭಾನ್ವಿತಾಃ ।
ಶ್ಲೋಕಾರ್ಧಂ ಶ್ಲೋಕಪಾದಂ ವಾ ಕಾರ್ತಿಕೇ ಗೋಶತಂ ಫಲಂ ॥ ೪೨ ॥

ಸರ್ವಾನ್ಧರ್ಮಾನ್ಪರಿತ್ಯಜ್ಯ ಕಾರ್ತಿಕೇ ಕೇಶವಾಗ್ರತಃ ।
ಶಾಸ್ತ್ರಾವಧಾರಣಂ ಕಾರ್ಯಂ ಶ್ರೋತವ್ಯಂ ಚ ಮಹಾಮುನೇ ॥ ೪೩ ॥

ಶ್ರೇಯಸಾಂ ಲೋಭಬುದ್ಧ್ಯಾ ಚ ಯಃ ಕರೋತಿ ಹರೇಃ ಕಥಾಃ ।
ಕಾರ್ತಿಕೇ ಮುನಿಶಾರ್ದೂಲ ಕುಲಾನಾಂ ತಾರಯೇಚ್ಛತಂ ॥ ೪೪ ॥

---

ಗಳಿಂದಲೇ ಕಾಲವನ್ನು ಕಳೆಯುತ್ತಾನೆಯೋ ಅವನು ಪಾಪಗಳನ್ನು ಕಳೆದು ಕೊಂಡು ಸಾವಿರಯಜ್ಞಗಳ ಫಲವನ್ನು ಹೊಂದುತ್ತಾನೆ. ಕಾರ್ತಿಕದಲ್ಲಿ ಜನಾರ್ದನನು ಶಾಸ್ತ್ರಾಲಾಪದಿಂದ ಸಂತೋಷಗೊಳ್ಳುವಂತೆ ಯಜ್ಞಗಳಿಂದಾಗಲೀ, ದಾನಗಳಿಂದಾಗಲಿ, ಜಪಗಳಿಂದಾಗಲಿ ಸಂತೋಷಗೊಳ್ಳುವುದಿಲ್ಲ.

೪೨. ಕಾರ್ತಿಕಮಾಸದಲ್ಲಿ ಪುರಾಣದ ಕಥೆಯನ್ನು ಯಾರು ಕೇಳುತ್ತಾರೆಯೋ ಅವರೂ ಕೊನೆಗೆ ಒಂದು ಶ್ಲೋಕಕೇಳಿದವರೂ ಅದೂ ಆಗದಿದ್ದರೆ ಶ್ಲೋಕದ ಒಂದು ಪಾದವನ್ನಾಗಲಿ ಕೇಳಿದವರೂ ಕೂಡ ನೂರು ಗೋವುಗಳನ್ನು ದಾನ ಮಾಡಿದ ಫಲವನ್ನು ಹೊಂದುತ್ತಾರೆ.

೪೩. ಆದುದರಿಂದ ಕಾರ್ತಿಕಮಾಸದಲ್ಲಿ ಎಲ್ಲವನ್ನೂ ಬಿಟ್ಟು ಕೇಶವನ ಮುಂದೆ ಶಾಸ್ತ್ರವನ್ನು ಓದಬೇಕು. ಇಲ್ಲವೇ ಕೇಳಬೇಕು.

೪೪. ಯಾವನು ಶ್ರೇಯಸ್ಸಾಗಬೇಕೆಂದು ಹರಿಯ ಕಥೆಯನ್ನು ಹೇಳುತ್ತಾನೆಯೋ ಅಥವಾ ಕೇಳುತ್ತಾನೆಯೋ ಅವನು ನೂರು ಕುಲಗಳನ್ನು ಉದ್ಧಾರ ಮಾಡಿಕೊಳ್ಳುತ್ತಾನೆ.

ನಿಯಮೇನ ನರೋ ಯಸ್ತು ಶೃಣುತೇ ವೈಷ್ಣವೀಂ ಕಥಾಂ ।
ಕಾರ್ತಿಕೇ ತು ವಿಶೇಷೇಣ ಗೋಸಹಸ್ರಫಲಂ ಲಭೇತ್ || ೪೫ ||

ಪ್ರಬೋಧವಾಸರೇ ವಿಷ್ಣೋಃ ಶೃಣುತೇ ಯೋ ಹರೇಃ ಕಥಾಂ ।
ಸಪ್ತದ್ವೀಪವತೀದಾನೇ ಯತ್ಫಲಂ ತಲ್ಲಭೇನ್ಮುನೇ || ೪೬ ||

ಶ್ರುತ್ವಾ ವಿಷ್ಣುಕಥಾಂ ವಿಷ್ಣೋರ್ಯೇಽರ್ಚಯಂತಿ ಕಥಾವಿದಂ ।
ಸ್ವಶಕ್ತ್ಯಾ ಮುನಿಶಾರ್ದೂಲ ತೇಷಾಂ ಲೋಕೋಽಕ್ಷಯಃ ಸ್ಮೃತಃ || ೪೭ ||

ಗೀತಶಾಸ್ತ್ರವಿನೋದೇನ ಕಾರ್ತಿಕೇ ಯೋ ಭವೇನ್ನರಃ ।
ನ ತಸ್ಯ ಪುನರಾವೃತ್ತಿರ್ಮಯಾ ದೃಷ್ಟಾ ಕಲಿಪ್ರಿಯ || ೪೮ ||

ಗೀತಂ ನೃತ್ಯಂ ಚ ವಾದ್ಯಂ ಚ ತಥಾವಿಷ್ಣುಕಥಾಂ ಮುನೇ ।
ಯಃ ಕರೋತಿ ಸ ಪುಣ್ಯಾತ್ಮಾ ತ್ರೈಲೋಕ್ಯೋಪರಿಸಂಸ್ಥಿತಃ || ೪೯ ||

---

೪೫. ಕಾರ್ತಿಕಮಾಸದಲ್ಲಿ ನಿಯಮದಿಂದ ಯಾವನು ವಿಷ್ಣುಕಥೆಗಳನ್ನು ಕೇಳುತ್ತಾನೆಯೋ ಅವನು ಸಾವಿರ ಗೋದಾನಗಳ ಫಲವನ್ನು ಹೊಂದುತ್ತಾನೆ.

೪೬. ಪ್ರಬೋಧಿನೀ ಏಕಾದಶಿಯ ದಿವಸ ಹರಿಕಥೆಯನ್ನು ಕೇಳಿದರೆ ಸಪ್ತದೀಪಗಳಿಂದ ಕೂಡಿದ ಭೂಮಿಯನ್ನು ದಾನಮಾಡಿದ ಫಲವು ಬರುತ್ತದೆ.

೪೭. ವಿಷ್ಣುಕಥೆಯನ್ನು ಕೇಳಿ ಯಾರು ಆ ಕಥೆ ಹೇಳಿದವನನ್ನು ಶಕ್ತ್ಯಾನುಗುಣವಾಗಿ ಪೂಜಿಸುವರೋ ಅವರು ಅಕ್ಷಯವಾದ ಲೋಕವನ್ನು ಹೊಂದುತ್ತಾರೆ.

೪೮. ಎಲೈ ನಾರದನೆ ! ಗೀತಶಾಸ್ತ್ರಗಳ ವಿನೋದದಿಂದ ಯಾವನು ಕಾರ್ತಿಕಮಾಸದಲ್ಲಿ ವಿಷ್ಣುವನ್ನು ತೃಪ್ತಿಪಡಿಸುವನೋ ಅವನಿಗೆ ಪುನರಾವೃತ್ತಿಯಾದ ಜನ್ಮವೆಂಬುದೇ ಇಲ್ಲ.

೪೯. ಯಾವನು ಆ ಪ್ರಬೋಧಿನಿಯ ದಿನ ಗೀತ ನೃತ್ಯ ವಾದ್ಯಗಳನ್ನು ಮಾಡುತ್ತಾನೆಯೋ ಅವನು ಮೂರು ಲೋಕಕ್ಕಿಂತಲೂ ಮೇಲಿರುವನು.

ಬಹುಪುಷ್ಪೈರ್ಬಹುಫಲೈಃ ಕರ್ಪೂರಾಗರುಕುಂಕುಮೈಃ ।
ಹರೇಃ ಪೂಜಾ ವಿಧಾತವ್ಯಾ ಕಾರ್ತಿಕೇ ಬೋಧವಾಸರೇ ॥ ೫೦ ॥

ವಿತ್ತ ಶಾಠ್ಯಂ ನ ಕರ್ತವ್ಯಂ ಸಂಪ್ರಾಪ್ತೇ ಹರಿವಾಸರೇ ।
ಯಸ್ಮಾತ್ಪುಣ್ಯಮಸಂಖ್ಯಾತಂ ಪ್ರಾಪ್ಯತೇ ಮುನಿಸತ್ತಮ ॥ ೫೧ ॥

ಫಲೈರ್ನಾನಾವಿಧೈರ್ದ್ರವ್ಯೈಃ ಪ್ರಬೋಧಿನ್ಯಾಂ ತು ಜಾಗರೇ ।
ಶಂಖತೋಯಂ ಸಮಾದಾಯ ಅರ್ಘ್ಯೋ ದೇಯೋ ಜನಾರ್ದನೇ ॥೫೨॥

ಯತ್ಫಲಂ ಸರ್ವತೀರ್ಥೇಷು ಸರ್ವದಾನೇಷು ಯತ್ಫಲಂ ।
ತತ್ಫಲಂ ಕೋಟಿಗುಣಂ ದತ್ವಾರ್ಘ್ಯಂ ಬೋಧವಾಸರೇ ॥ ೫೩ ॥

ಗುರುಪೂಜಾ ತತಃ ಕಾರ್ಯಾ ಭೋಜನಾಚ್ಛಾದನಾದಿಭಿಃ ।
ದಕ್ಷಿಣಾಭಿಶ್ಚ ದೇವರ್ಷೇ ತುಷ್ಟ್ಯರ್ಥಂ ಚಕ್ರಪಾಣಿನಃ ॥ ೫೪ ॥

---

೫೦. ಈ ಕಾರ್ತಿಕ ಮಾಸದಲ್ಲಿ ಬಹು ಪುಷ್ಪಗಳಿಂದಲೂ ಬಹು ಫಲಗಳಿಂದಲೂ ಕರ್ಪೂರ ಅಗರು ಕುಂಕುಮಗಳಿಂದಲೂ ಹರಿಯ ಪೂಜೆಯನ್ನು ಮಾಡಬೇಕು.

೫೧. ಆ ಹರಿವಾಸರದಲ್ಲಿ ಲೋಭವನ್ನು ಮಾಡಕೂಡದು. ಅದರಿಂದ ಬಹು ಪುಣ್ಯವು ಬರುವುದು.

೫೨. ಶಂಖದಲ್ಲಿ ನೀರನ್ನು ಇಟ್ಟುಕೊಂಡು ಅದರಮೇಲೆ ಬಗೆಬಗೆಯಾದ ದ್ರವ್ಯವನ್ನಿಟ್ಟುಕೊಂಡು ಅರ್ಘ್ಯವನ್ನು ಕೊಡಬೇಕು.

೫೩. ಆ ಬೋಧಿನಿಯದಿವಸ ಅರ್ಘ್ಯವನ್ನು ಕೊಟ್ಟರೆ ಸರ್ವತೀರ್ಥಗಳಲ್ಲೂ ಎಲ್ಲಾ ದಾನಗಳನ್ನೂ ಮಾಡಿದರೆ ಬರುವ ಫಲವು ಬರುತ್ತದೆ.

೫೪. ಜನಾರ್ದನನ ಪ್ರೀತಿಗೋಸ್ಕರ ಊಟ ಬಟ್ಟೆ ದಕ್ಷಿಣೆಗಳಿಂದ ಗುರುಪೂಜೆಯನ್ನು ಮಾಡಬೇಕು.

ಭಾಗವತಂ ಶೃಣುತೇ ಯಸ್ತು ಪುರಾಣಂ ಚ ಪಠೇನ್ನರಃ ।
ಪ್ರತ್ಯಕ್ಷರಂ ಭವೇತ್ತಸ್ಯ ಕಪಿಲಾದಾನಜಂ ಫಲಂ || ೫೫ ||

ಕಾರ್ತಿಕೇ ಮುನಿಶಾರ್ದೂಲ ಸ್ವಶಕ್ತ್ಯಾ ವೈಷ್ಣವಂ ವ್ರತಂ ।
ಯಃ ಕರೋತಿ ಯಥೋಕ್ತಂ ತು ಮುಕ್ತಿಸ್ತಸ್ಯ ಸುನಿಶ್ಚಲಾ || ೫೬ ||

ಕೇತಕ್ಯಾ ಏಕಪತ್ರೇಣ ಪೂಜಿತೋ ಗರುಡಧ್ವಜಃ ।
ಸಮಾಸ್ಸಹಸ್ರಂ ಸುಪ್ರೀತೋ ಭವತಿ ಮಧುಸೂದನಃ || ೫೭ ||

ಅಗಸ್ತಿಕುಸುಮೈರ್ದೇವಂ ಪೂಜಯೇದ್ಯೋ ಜನಾರ್ದನಂ ।
ದರ್ಶನಾತ್ತಸ್ಯ ದೇವರ್ಷೇ ನರಕಾಗ್ನಿಃ ಪ್ರಣಶ್ಯತಿ || ೫೮ ||

ಮುನಿಪುಷ್ಪಾರ್ಚಿತೋ ವಿಷ್ಣುಃ ಕಾರ್ತಿಕೇ ಪುರುಷೋತ್ತಮಃ ।
ದದಾತ್ಯಭಿಮತಾನ್ಕಾಮಾನ್ ಶಶಿಸೂರ್ಯಗ್ರಹೌ ಯಥಾ || ೫೯ ||

ವಿಹಾಯ ಸರ್ವಪುಷ್ಪಾಣಿ ಮುನಿಪುಷ್ಪೇಣ ಕೇಶವಂ ।
ಕಾರ್ತಿಕೇ ಯೋಽರ್ಚಯೇದ್ಭಕ್ತ್ಯಾ ವಾಜಿಮೇಧಫಲಂ ಲಭೇತ್ || ೬೦ ||

---

೫೫. ಆ ಪ್ರಬೋಧಿನಿಯ ದಿನ ಭಾಗವತ ಪುರಾಣವನ್ನು ಓದಿದರೆ ಅಥವಾ ಕೇಳಿದರೆ ಆ ಪುರಾಣದ ಒಂದೊಂದು ಅಕ್ಷರಕ್ಕೂ ಕಪಿಲಾ ಗೋದಾನ ಮಾಡಿದ ಫಲವು ಬರುತ್ತದೆ.

೫೬. ಕಾರ್ತಿಕಮಾಸದಲ್ಲಿ ಶಕ್ತ್ಯನುಗುಣವಾಗಿ ಪ್ರಬೋಧಿನೀ ಅಥವಾ ವೈಷ್ಣವವ್ರತವನ್ನು ಮಾಡಿದರೆ ಅವನಿಗೆ ಮುಕ್ತಿಯೆಂಬುದು ಖಂಡಿತ.

೫೭. ಆ ದಿನ ಜನಾರ್ದನನನ್ನು ತಾಳೆಯ ಒಂದು ಹೂಎಸಳಿನಿಂದ ಪೂಜಿಸಿದರೂ ಸಾವಿರ ವರ್ಷಗಳವರೆಗೂ ಅವನು ಪ್ರೀತಿಯುಳ್ಳವನಾಗುತ್ತಾನೆ.

೫೮. ಆ ದಿನ ಅಗಸೆಯ ಹೂಗಳಿಂದ ಆ ಸ್ವಾಮಿಯನ್ನು ಪೂಜಿಸಿದರೆ ನರಕದ ಅಗ್ನಿಯು ನಾಶವಾಗುತ್ತದೆ.

೫೯. ಆ ಅಗಸೆಯ ಹೂವಿನಿಂದ ವಿಷ್ಣುವನ್ನು ಕಾರ್ತಿಕಮಾಸದಲ್ಲಿ ಪೂಜಿಸಿದರೆ ಸೂರ್ಯಚಂದ್ರರು ಫಲಕೊಡುವಂತೆ ಬೇಕಾದ ಫಲಗಳನ್ನು ಕೊಡುವನು.

೬೦. ಮಿಕ್ಕ ಎಲ್ಲಾ ಪುಷ್ಪಗಳನ್ನೂ ಬಿಟ್ಟು ಈ ಅಗಸೆಯ ಹೂವಿನಿಂದಲೇ ಕಾರ್ತಿಕದಲ್ಲಿ ಕೇಶವನನ್ನು ಪೂಜಿಸೆದರೆ ಅಶ್ವಮೇಧ ಫಲವು ಬರುತ್ತದೆ.

ತುಲಸೀದಳಪುಷ್ಪಾಣಿ ಯೇ ಯಚ್ಛಂತಿ ಜನಾರ್ದನೇ ।
ಕಾರ್ತಿಕೇ ಸಕಲಂ ವತ್ಸ ಪಾಪಂ ಜನ್ಮಾರ್ಜಿತಂ ದಹೇತ್ ॥ ೬೧ ॥

ದೃಷ್ಟ್ವಾ ಸ್ಪೃಷ್ಟ್ವಾಥವಾ ಧ್ಯಾತಾ ಕೀರ್ತಿತಾ ನಾಮತಸ್ತುತಾ ।
ರೋಪಿತಾ ಸೇಚಿತಾ ನಿತ್ಯಂ ಪೂಜಿತಾ ತುಲಸೀ ಸತಾ ॥ ೬೨ ॥

ನವಧಾ ತುಲಸೀಭಕ್ತಿಂ ಯೇ ಕುರ್ವಂತಿ ದಿನೇ ದಿನೇ ।
ಯುಗಕೋಟಿಸಹಸ್ರಾಣಿ ತನ್ವಂತಿ ಸುಕೃತಂ ಮುನೇ ॥ ೬೩ ॥

ಯಾವಚ್ಛಾಖಾಪ್ರಶಾಖಾಭಿಃ ಬೀಜಪುಷ್ಪದಳೈರ್ಮುನೇ ।
ರೋಪಿತಾ ತುಲಸೀ ಪುಂಭಿಃ ವರ್ಧತೇ ವಸುಧಾತಳೇ ॥ ೬೪ ॥

ತೇಷಾಂ ವಂಶೇ ತು ಯೇ ಜಾತಾ ಯೇ ಭವಿಷ್ಯಂತಿ ಯೇ ಗತಾಃ ।
ತೇಷಾಮಾಕಲ್ಪ ಸಾಹಸ್ರಂ ಭವೇದ್ವಾಸೋ ಹರೇರ್ಗೃಹೇ ॥ ೬೫ ॥

---

೬೧. ಆ ಪ್ರಬೋಧಿನಿಯಲ್ಲಿ ತುಳಸಿಯ ದಳದಿಂದ ಜನಾರ್ದನನನ್ನು ಪೂಜಿಸಿದರೆ ಜನ್ಮಾಂತರಗಳ ಪಾಪಗಳೂ ಹೋಗುತ್ತವೆ.

೬೨. ನಿತ್ಯವೂ ತುಳಸಿಯನ್ನು ನೋಡಬೇಕು. ಮುಟ್ಟಬೇಕು. ಧ್ಯಾನಿಸಬೇಕು. ಹೊಗಳಬೇಕು. ಬೆಳೆಸಬೇಕು. ನೀರು ಹಾಕಬೇಕು. ಪೂಜಿಸಬೇಕು. ನಮಸ್ಕರಿಸಬೇಕು. ಸ್ತೋತ್ರಮಾಡಬೇಕು.

೬೩. ಈ ರೀತಿಯಾಗಿ ದಿನವೂ ಒಂಭತ್ತು ಬಗೆಯಲ್ಲಿ ಯಾರು ತುಳಸಿಯ ಭಕ್ತಿಯನ್ನು ಮಾಡುತ್ತಾರೆಯೋ ಅವರು ಕೋಟಿ ಸಾವಿರ ಯುಗಗಳವರೆಗೂ ಪುಣ್ಯವಂತರಾಗಿರುತ್ತಾರೆ.

೬೪. ತುಳಸಿಯನ್ನು ಶಾಖೋಪಶಾಖೆಗಳಾಗಿಯೂ ಬೀಜ ಹೂವುದಳಗಳುಳ್ಳದಾಗಿಯೂ ಆಗುವಂತೆ ಮನುಷ್ಯನು ಬೆಳಸುತ್ತಾನೆಯೋ ಅವನು ಧನ್ಯನು.

೬೫. ಅವರ ವಂಶದಲ್ಲಿ ಹುಟ್ಟಿದ, ಹುಟ್ಟಿರುವ, ಹುಟ್ಟುವವರಿಗೆ ಸಾವಿರ ಕಲ್ಪಗಳವರೆಗೂ ಹರಿಯ ಮನೆ ( ವೈಕುಂಠದಲ್ಲಿ ) ಯಲ್ಲಿಯೇ ವಾಸವು ಲಭಿಸುತ್ತದೆ.

ಯತ್ಫಲಂ ಸರ್ವಪುಷ್ಪೇಷು ಸರ್ವಪತ್ರೇಷು ನಾರದ ।
ತುಲಸೀದಳೇನ ಚೈಕೇನ ಕಾರ್ತಿಕೇ ಪ್ರಾಪ್ಯತೇ ತು ತತ್ ॥ ೬೬ ॥

ಸಂಪ್ರಾಪ್ತಂ ಕಾರ್ತಿಕಂ ದೃಷ್ಟ್ವಾ ನಿಯಮೇನ ಜನಾರ್ದನಃ ।
ಪೂಜನೀಯೋ ಮಹಾವಿಷ್ಣುಃ ತುಳಸೀದಳಕೋಮಲೈಃ ॥ ೬೭ ॥

ಇಷ್ಟ್ವಾ ಕ್ರತುಶತೈರ್ದೇವಾ ದತ್ವಾ ದಾನಾನ್ಯನೇಕಶಃ ।
ತುಳಸೀದಳೈಸ್ತು ತತ್ಪುಣ್ಯಂ ಕಾರ್ತಿಕೇ ಕೇಶವಾರ್ಚನೇ ॥ ೬೮ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಪತಿ ನಾರದ ಸಂವಾದಾನ್ತರ್ಗತ ಕೃಷ್ಣ ಯುಧಿಷ್ಠಿರ ಸಂವಾದೇ ಕಾರ್ತಿಕ ಶುಕ್ಲ ಪ್ರಬೋಧಿನ್ಯೈಕಾದಶೀ ಮಾಹಾತ್ಮ್ಯಂ ನಾಮ ತ್ರಿಷಷ್ಟಿತಮೋಽಧ್ಯಾಯಸ್ಸಮಾಪ್ತಃ

---

೬೬. ಎಲ್ಲಾ ಹೂವುಗಳನ್ನೂ, ಪತ್ರೆಗಳನ್ನೂ ಪೂಜೆಮಾಡಿದ ಫಲವು ಒಂದು ತುಳಸಿಯ ದಳವನ್ನು ಕಾರ್ತಿಕದಲ್ಲಿ ಪೂಜೆಮಾಡುವುದರಿಂದ ಬರುತ್ತದೆ.

೬೭. ಕಾರ್ತಿಕ ಮಾಸವು ಬಂದುದನ್ನು ತಿಳಿದು ಜನಾರ್ದನನನ್ನು ನಿಯಮದಿಂದ ತುಳಸಿಯ ದಳಗಳಿಂದ ಪೂಜಿಸಬೇಕು.

೬೮. ಅನೇಕ ಯಾಗಗಳನ್ನು ಅನೇಕಬಾರಿ ಮಾಡಿದರೆ ಬರುವ ಪುಣ್ಯವು ಕಾರ್ತಿಕದಲ್ಲಿ ತುಳಸಿಯ ದಳಗಳಿಂದ ಕೇಶವನನ್ನು ಪೂಜಿಸಿದರೆ ಬರುತ್ತದೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಪತಿ ನಾರದರ ಸಂವಾದಾನ್ತರ್ಗತವಾದ ಕೃಷ್ಣ ಯುಧಿಷ್ಠಿರರ ಸಂವಾದದಲ್ಲಿ ಕಾರ್ತಿಕ ಶುಕ್ಲ ಪ್ರಬೋಧಿನ್ಯೈಕಾದಶಿಯ ಮಹಿಮೆ ಎಂಬ ಅರವತ್ತಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-x-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಚತುಷ್ಷಷ್ಟಿತಮೋಽಧ್ಯಾಯಃ ॥



॥ ಯುಧಿಷ್ಠಿರ ಉವಾಚ ॥

ಭಗವನ್ ಶ್ರೋತುಮಿಚ್ಛಾಮಿ ವ್ರತಾನಾಂ ವ್ರತಮುತ್ತಮಂ ।
ಸರ್ವಪಾಪಹರಂ ವಿಷ್ಣೋಃ ಫಲದಂ ವ್ರತಿನಾಂ ಚ ಯತ್ ॥ ೧ ॥

ಪುರುಷೋತ್ತಮಮಾಸಸ್ಯ ಕಥಾಂ ಬ್ರೂಹಿ ಜನಾರ್ದನ ।
ಕೋ ವಿಧಿಃ ಕಿಂ ಫಲಂ ತಸ್ಯ ಕೋ ದೇವಸ್ತತ್ರ ಪೂಜ್ಯತೇ ॥ ೨ ॥

ಅಧಿಮಾಸೇ ಚ ಸಂಪ್ರಾಪ್ತೇ ವ್ರತಂ ಬ್ರೂಹಿ ಜನಾರ್ದನ ।
ಕಸ್ಯ ದಾನಸ್ಯ ಕಿಂ ಪುಣ್ಯಂ ಕಿಂ ಕರ್ತವ್ಯಂ ನೃಭಿಃ ಪ್ರಭೋ ॥ ೩ ॥

---

## ಅರವತ್ತನಾಲ್ಕನೆಯ ಅಧ್ಯಾಯವು



೧. ಯುಧಿಷ್ಠಿರನು ಹೇಳಿದನು– ಎಲೈ ಭಗವಂತನೆ ! ಸರ್ವಪಾಪಗಳನ್ನೂ ನಾಶಮಾಡುವ ವ್ರತಮಾಡಿದವರಿಗೆ ಫಲಗಳನ್ನು ಕೊಡುವ ಉತ್ತಮವಾದ ವ್ರತ ವಾವುದು ? ಅದನ್ನು ಕೇಳಬೇಕೆಂದಿದ್ದೇನೆ.

೨. ಎಲೈ ಜನಾರ್ದನನೆ! ಅಧಿಕ ಮಾಸಗಳು ಬಂದರೇನು ಮಾಡಬೇಕು? ಆಗ ವಿಧಿಯೇನು ? ಅದರ ಫಲವೇನು? ಆಗ ಪೂಜಿಸಬೇಕಾದ ದೇವರಾವುದು? ಇವನ್ನು ದಯುವಿಟ್ಟು ಹೇಳು.

೩–೪. ಎಲೈ ಜನಾರ್ದನನೇ ! ಅಧಿಕಮಾಸ ಬಂದಾಗ ಮಾಡಬೇಕಾದು ದನ್ನು ಹೇಳು. ಯಾವ ದಾನ ಮಾಡಿದರೆ ಯಾವ ಪುಣ್ಯ ಬರುತ್ತದೆ? ಅವನ್ನು

**ಕಥಂ ಸ್ನಾನಂ ಚ ಕಿಂ ಜಾಪ್ಯಂ ಕಥಂ ಪೂಜಾವಿಧಿಃ ಸ್ಮೃತಃ ।**
**ಕಿಂ ಭೋಜ್ಯಮುತ್ತಮಂ ಚಾನ್ನಂ ಮಾಸ್ಯಸ್ಮಿನ್ಪುರುಷೋತ್ತಮ　　॥ ೪ ॥**

**॥ ಕೃಷ್ಣ ಉವಾಚ ॥**

**ಕಥಯಿಷ್ಯಾಮಿ ರಾಜೇಂದ್ರ ಭವತಸ್ಸ್ನೇಹಕಾರಣಾತ್ ।**
**ಪುರುಷೋತ್ತಮಮಾಸಸ್ಯ ಮಾಹಾತ್ಮ್ಯಂ ಪಾಪನಾಶನಂ　　॥ ೫ ॥**

**ಅಧಿಮಾಸೇ ತು ಸಂಪ್ರಾಪ್ತೇ ಭವೇದೇಕಾದಶೀ ತು ಯಾ ।**
**ಕಮಲಾ ನಾಮ ಸಾ ನಾಮ್ನಾತಿಥೀನಾಮುತ್ತಮಾ ತಿಥಿಃ　　॥ ೬ ॥**

**ತಸ್ಯಾ ವ್ರತಪ್ರಭಾವೇಣ ಕಮಲಾಭಿಮುಖೀ ಭವೇತ್ ।**
**ಬ್ರಾಹ್ಮೇ ಮುಹೂರ್ತೇ ಚೋತ್ಥಾಯ ಸಂಸ್ಮೃತ್ಯ ಪುರುಷೋತ್ತಮಂ ॥೭॥**

**ಸ್ನಾತ್ವಾ ಚೈವ ವಿಧಾನೇನ ನಿಯಮಂ ಕಾರಯೇದ್ವ್ರತೀ ।**
**ಗೃಹೇ ತ್ವೇಕಗುಣಂ ಜಾಪ್ಯಂ ನದ್ಯಾಂ ತು ದ್ವಿಗುಣಂ ಸ್ಮೃತಂ　　॥ ೮ ॥**

---

ಹೇಗೆ ಮಾಡಬೇಕು ? ಸ್ನಾನದ ವಿಧಿಯೇನು ? ಜಪವೇನು ಪೂಜೆಯ ವಿಧಾನ ವೇನು ? ಯಾವುದನ್ನು ತಿನ್ನಬಹುದು ? ಈ ಮಾಸದಲ್ಲಿ ಉತ್ತಮವಾದ ಪದಾರ್ಥ ಗಳು ಯಾವುವು ?

೫. ಕೃಷ್ಣನು ಹೇಳಿದನು–ಎಲೈ ದೊರೆಯೆ ! ನಿನ್ನಲ್ಲಿರುವ ಸ್ನೇಹದಿಂದ ಪಾಪನಾಶಕವಾದ ಆ ಅಧಿಮಾಸದ ಮಹಿಮೆಯನ್ನು ಹೇಳುತ್ತೇನೆ. ಕೇಳು.

೬. ಅಧಿಕಮಾಸ ಬಂದಾಗ ಬರತಕ್ಕ ಏಕಾದಶಿಗೆ "ಕಮಲಾ" ಏಕಾದಶಿ ಯೆಂದು ಹೆಸರು. ಅದು ಉತ್ತಮವಾದ ತಿಥಿಯು.

೭. ಆ ವ್ರತವನ್ನು ಮಾಡುವುದರಿಂದ ಲಕ್ಷ್ಮಿಯು ಪ್ರಸನ್ನಳಾಗುತ್ತಾಳೆ. ಆದಿನ ಬ್ರಾಹ್ಮಮುಹೂರ್ತದಲ್ಲಿ ಎದ್ದು ವಾಸುದೇವನನ್ನು ಸ್ಮರಿಸಬೇಕು. ಮತ್ತು ವಿಧಿಯಿಂದ ಸ್ನಾನಮಾಡಿ ನಿಯಮವನ್ನು ಕೈಗೊಳ್ಳಬೇಕು.

೮–೧೩. ಮನೆಯಲ್ಲಿ ಜಪಮಾಡಿದರೆ ಎಷ್ಟು ಹೇಳಿದೆಯೋ ಅಷ್ಟೇ ಫಲವೂ ನದಿಯಲ್ಲಿ ಜಪಿಸಿದರೆ ಅದಕ್ಕೆ ಎರಡರಷ್ಟೂ ದನಗಳ ಕೊಟ್ಟಿಗೆಯಲ್ಲಿ ಜಪಿಸಿದರೆ

ಗವಾಂ ಗೋಷ್ಠೇ ಸಹಸ್ರೋರ್ಧ್ವಮಗ್ನ್ಯಗಾರೇ ಶತಾನ್ವಿತಂ ।
ಶಿವಕ್ಷೇತ್ರೇಷು ತೀರ್ಥೇಷು ದೇವತಾನಾಂ ಚ ಸನ್ನಿಧೌ ॥ ೯ ॥

ಲಕ್ಷಂ ತುಲಸ್ಯಾಸ್ಸಾನ್ನಿಧ್ಯೇ ಹ್ಯನಂತಂ ವಿಷ್ಣುಸನ್ನಿಧೌ ।
ಅವನ್ತ್ಯಾಮಭವತ್ಕಶ್ಚಿಚ್ಛಿವಶರ್ಮಾ ದ್ವಿಜೋತ್ತಮಃ ॥ ೧೦ ॥

ತಸ್ಯಾತ್ಮಜಾಸ್ತು ಪಂಚಾಸರ್ನ್ ಕನಿಷ್ಠೋ ದೋಷವಾನಭೂತ್ ।
ತದಾ ಪಿತ್ರಾ ಪರಿತ್ಯಕ್ತಃ ತ್ಯಕ್ತಸ್ಸ್ವಜನಬಾಂಧವೈಃ ॥ ೧೧ ॥

ವಿಕರ್ಮಣಃ ಪ್ರಭಾವೇಣ ಗತೋ ದೂರತರಂ ವನಂ ।
ಏಕದಾ ದೈವಯೋಗೇನ ತೀರ್ಥರಾಜಂ ಸಮಾಗಮತ್ ॥ ೧೨ ॥

ಕ್ಷುತ್ ಕ್ಷಾಮೋ ದೀನವದನಸ್ತ್ರಿವೇಣ್ಯಾಂ ಸ್ನಾನಮಾಚರತ್ ।
ಮುನೀನಾಮಾಶ್ರಮಾಂಸ್ತತ್ರ ವಿಚಿನ್ವನ್ ಕ್ಷುಧಯಾರ್ದಿತಃ ॥ ೧೩ ॥

ಹರಿಮಿತ್ರಮುನೇಸ್ತತ್ರ ದದರ್ಶಾಶ್ರಮಮುತ್ತಮಂ ।
ಪುರುಷೋತ್ತಮಮಾಸೇ ವೈ ಜನಾನಾಂ ಚ ಸಮಾಗಮೇ ॥ ೧೪ ॥

---

ಸಾವಿರದಷ್ಟೂ ಔಪಾಸನದ ಅಗ್ನಿಯಿಟ್ಟಿರುವ ಬಳಿಯಲ್ಲಿ ಜಪಿಸಿದರೆ ನೂರು ಸಾವಿರದಷ್ಟೂ ಶಿವಕ್ಷೇತ್ರ ತೀರ್ಥಗಳು ತುಳಸಿ ದೇವತೆಗಳ ಸನ್ನಿಧಿಗಳಲ್ಲಿ ಜಪಿಸಿದರೆ ಲಕ್ಷದಷ್ಟೂ ವಿಷ್ಣುವಿನ ಸನ್ನಿಧಿಯಲ್ಲಿ ಜಪಿಸಿದರೆ ಅನಂತ ಫಲವೂ ಬರುತ್ತದೆ. ಅವನ್ತಿಯಲ್ಲಿ ಶಿವಶರ್ಮನೆಂಬ ಒಬ್ಬ ಬ್ರಾಹ್ಮಣನಿದ್ದನು. ಅವನಿಗೆ ಐದುಜನ ಮಕ್ಕಳಿದ್ದರು. ಕೊನೆಯವನು ಬಹು ಕೆಟ್ಟವನಾದನು. ಅವನ ಕೆಟ್ಟ ನಡತೆಯಿಂದ ಅವನನ್ನು ಜನಗಳೂ ಬಂಧುಗಳೂ ತಂದೆಯೂ ಬಿಟ್ಟುಬಿಟ್ಟರು. ಇದರಿಂದ ಆಶ್ರಯವಿಲ್ಲದೆ ದೂರವಾದ ಕಾಡಿಗೆ ಹೋದನು. ಹೀಗೆ ಸಂಚರಿಸುತ್ತಾ ಕಂಗೆಟ್ಟು ಪ್ರಯಾಗಕ್ಕೆ ಹೋಗಿ ಅಲ್ಲದ್ದ ತ್ರಿವೇಣಿಯಲ್ಲಿ ಸ್ನಾನಮಾಡಿ ಆ ಕಾಡಿನಲ್ಲಿ ಮುನಿಗಳ ಆಶ್ರಮವನ್ನು ಹುಡುಕುತ್ತಾ ಹಸಿವಿನಿಂದ ಬಳಲಿ ಬೆಂಡಾದನು.

೧೪–೧೭. ಹೀಗೆ ಓಡಾಡುತ್ತ ಹುಡುಕುತ್ತಿರಲು ಹರಿಮಿತ್ರನೆಂಬ ಋಷಿಯ ಆಶ್ರಮವು ಸಿಕ್ಕಿತು. ಆಗ ಅಧಿಕಮಾಸವಾಗಿದ್ದಿತು. ಜನಗಳೆಲ್ಲರೂ ಅಲ್ಲಿಗೆ

ತತ್ರಾಶ್ರಮೇ ಕಥಯತಾಂ ಕಥಾಂ ಕಲ್ಮಷನಾಶಿನೀಂ ।
ಬ್ರಾಹ್ಮಣಾನಾಂ ಮುಖಾತ್ತೇನ ಶ್ರದ್ಧಯಾ ಕಮಲಾ ಶ್ರುತಾ ॥ ೧೫ ॥

ಏಕಾದಶೀ ಪುಣ್ಯತಮಾ ಭುಕ್ತಿಮುಕ್ತಿಪ್ರದಾಯಿನೀ ।
ಜಯಶರ್ಮ ವಿಧಾನೇನ ಶ್ರುತ್ವಾ ತಾಂ ಕಮಲಾಕಥಾಂ ॥ ೧೬ ॥

ವ್ರತಂ ಚೈಕ್ಯತವಾನ್ಸಾರ್ಥಂ ಸ್ಥಿತ್ವಾ ಮುನ್ಯಾಲಯೇ ತದಾ ।
ನಿಶೀಥೇ ಸಮನುಪ್ರಾಪ್ತೇ ಲಕ್ಷ್ಮೀಸ್ತತ್ರ ಸಮಾಗತಾ ॥ ೧೭ ॥

॥ ಲಕ್ಷ್ಮೀರುವಾಚ ॥

ವರಂ ದದಾಮಿ ಭೋ ವಿಪ್ರ ಕಮಲಾಯಾಃ ಪ್ರಭಾವತಃ ॥ ೧೮ ॥

॥ ಜಯಶರ್ಮೋವಾಚ ॥

ಕಾ ತ್ವಂ ಕಸ್ಯಾಸಿ ರಂಭೋರು ಪ್ರಸನ್ನಾ ಚ ಕಥಂ ಮಮ ।
ಇಂದ್ರಾಣೀ ಸುರನಾಥಸ್ಯ ಭವಾನೀ ಶಂಕರಸ್ಯ ವಾ ॥ ೧೯ ॥

---

ಸೇರಿದ್ದರು. ಅಲ್ಲಿ ಪಾಪಹಾರಕವಾದ ಕಮಲಾ ಏಕಾದಶಿಯ ಕಥೆಗಳನ್ನು ಬ್ರಾಹ್ಮಣರು ಹೇಳಿಕೊಳ್ಳುತ್ತಲಿದ್ದರು ಅದನ್ನು ಇವನು ಕೇಳಿದನು. ಆದಿನ ಈ ಕಮಲೈಕಾದಶಿಯಾಗಿದ್ದಿತು. ಅದು ಭುಕ್ತಿ ಮುಕ್ತಿಗಳನ್ನು ಕೊಡುವಂಥದು. ಇವನ ಹೆಸರು ಜಯಶರ್ಮನು. ಈ ಜಯಶರ್ಮನು ಆ ಕಥೆಯನ್ನು ಕೇಳಿ ಕೊಂಡಿರಲು ಅಲ್ಲಿಯೇ ಸಾಯಂಕಾಲವಾಯಿತು. ಆ ರಾತ್ರಿಯು ಅಲ್ಲಿಯೇ ಇದ್ದು ಆ ವ್ರತವನ್ನು ಮಾಡಲು ಅಲ್ಲಿಗೆ ಲಕ್ಷ್ಮಿಯೂ ಬಂದಳು.

೧೮. ಲಕ್ಷ್ಮಿಯು ಹೇಳಿದಳು– ಎಲೈ ಬ್ರಾಹ್ಮಣನೆ! ನೀನು ಕಮಲೈಕಾ ದಶಿ ವ್ರತವನ್ನು ಮಾಡಿದ್ದೀಯೆ. ಅದರ ಪ್ರಭಾವದಿಂದ ವರವನ್ನು ಕೊಡಲು ಬಂದಿದ್ದೇನೆ.

೧೯–೨೦. ಜಯಶರ್ಮನು ಹೇಳಿದನು– ಅಮ್ಮಾ ನೀನಾರು? ಯಾರ ಮಗಳು? ನನಗೇಕೆ ಪ್ರಸನ್ನಳಾಗಿ ಬಂದಿದ್ದೀಯೆ? ಇಂದ್ರನ ಹೆಂಡತಿಯಾದ ಶಚಿದೇವಿಯೆ? ಶಂಕರನ ಹೆಂಡತಿಯಾದ ಪಾರ್ವತಿಯೇ? ಗಂಧರ್ವ ಸ್ತ್ರೀಯೆ?

ಗಂಧರ್ವೀ ಕಿನ್ನರೀ ವಾಥ ವಧೂರ್ವಾ ಚಂದ್ರಸೂರ್ಯಯೋಃ ।
ತ್ವತ್ಸದೃಕ್ಷಾ ನ ದೃಷ್ಟಾ ಚ ನ ಶ್ರುತಾ ಚ ಶುಭಾನನೇ ॥ ೨೦ ॥

॥ ಲಕ್ಷ್ಮೀರುವಾಚ ॥

ಪ್ರಸನ್ನಾ ಸಾಂಪ್ರತಂ ಜಾತಾ ವೈಕುಂಠಾದಹಮಾಗತಾ ।
ಪ್ರೇರಿತಾ ದೇವದೇವೇನ ಕಮಲಾಯಾಃ ಪ್ರಭಾವತಃ ॥ ೨೧ ॥

ಪುರುಷೋತ್ತಮಮಾಸಸ್ಯ ಕೃಷ್ಣಪಕ್ಷಸ್ಯ ಯಾ ಭವೇತ್ ।
ಕಮಲಾಯಾ ವ್ರತಾತ್ತಸ್ಯಾಃ ಕಮಲಾ ದಾತುಮಾಗತಾ ॥ ೨೨ ॥

ಪುರುಷೋತ್ತಮಮಾಸಸ್ಯ ಯಾ ಪಕ್ಷೇ ಪ್ರಥಮೇ ಭವೇತ್ ।
ತಸ್ಯಾ ವ್ರತಂ ತ್ವಯಾ ಚೀರ್ಣಂ ಪ್ರಯಾಗೇ ಮುನಿಸನ್ನಿಧೌ ॥ ೨೩ ॥

---

ಇಲ್ಲವೆ ಚಂದ್ರ ಸೂರ್ಯರ ಹೆಂಡತಿಯಾದರೂ ಆಗಿರುವೆಯಾ ? ನೀನಾರು ? ನಿನ್ನಂತಹವರನ್ನು ನಾನು ನೋಡಲಿಲ್ಲ. ಕಡೆಗೆ ಕೇಳಿಯೂ ಇಲ್ಲ.

೨೧. ಲಕ್ಷ್ಮಿಯು ಹೇಳಿದಳು ಅಯ್ಯಾ ನಾನು ವೈಕುಂಠದಿಂದ ಬಂದಿದ್ದೇನೆ. ನಿನಗೆ ಪ್ರಸನ್ನಳಾಗಿದ್ದೇನೆ. ವಿಷ್ಣುವು ನನ್ನನ್ನು ಕಳುಹಿಸಿರುವನು. ನೀನು ಈ ಕಮಲಾ ಏಕಾದಶಿಯನ್ನು ಮಾಡಿದ ಪ್ರಭಾವದಿಂದ ನಿನ್ನ ಬಳಿಗೆ ಬಂದಿರುವೆನು.

೨೨. ಅಧಿಕಮಾಸದಲ್ಲಿ ಕೃಷ್ಣಪಕ್ಷದಲ್ಲಿ ಬರುವ ಏಕಾದಶಿಗೆ ಕಮಲೈಕಾದಶಿಯೆಂದು ಹೆಸರು ಆ ವ್ರತವನ್ನು ನೀನು ಮಾಡಿದ್ದೀಯೆ. ಆದರಿಂದ ಪ್ರಸನ್ನಳಾದ ನಾನು ನಿನಗೆ ವರವನ್ನು ಕೊಡಲು ಬಂದಿದ್ದೇನೆ. ನಾನು ಲಕ್ಷ್ಮಿಯು.

೨೩. ಅಧಿಕಮಾಸವೆನಿಸಿದ ಪುರುಷೋತ್ತಮ ಮಾಸದಲ್ಲಿ ಮೊದಲು ಬರುವ ಕಮಲೈಕಾದಶಿಯನ್ನು ನೀನು ಮಾಡಿದ್ದೀಯೆ. ಅದು ಪ್ರಯಾಗದಲ್ಲಿ ಒಳ್ಳೆಫಲವನ್ನು ಕೊಡುತ್ತದೆ. ಅಲ್ಲದೆ ಋಷಿಗಳ ಸನ್ನಿಧಿಯಲ್ಲಂತೂ ಇನ್ನೂ ಹೆಚ್ಚಾದ ಫಲವನ್ನು ಕೊಡುತ್ತದೆ.

ವ್ರತಸ್ಯಾಸ್ಯ ಪ್ರಭಾವೇಣ ವಶಗಾಹಂ ನ ಸಂಶಯಃ ।
ತವ ವಂಶೇ ಭವಿಷ್ಯಂತಿ ಮಾನವಾ ದ್ವಿಜಸತ್ತಮಾಃ ॥
ಮತ್ಪ್ರಸಾದಾದವಾಪ್ಸ್ಯಂತಿ ಸತ್ಯಂ ತೇ ವ್ಯಾಹೃತಂ ಮಯಾ ॥ ೨೪ ॥

॥ ಬ್ರಾಹ್ಮಣ ಉವಾಚ ॥

ಪ್ರಸನ್ನಾ ಯದಿ ಮೇ ಪದ್ಮೇ ವ್ರತಂ ವಿಸ್ತರತೋ ವದ ।
ಯತ್ಕಥಾಸು ಪ್ರವರ್ತಂತೇ ಸಾಧವೋ ಯೇ ಜನಾ ದ್ವಿಜಾಃ ॥ ೨೫ ॥

॥ ಲಕ್ಷ್ಮೀರುವಾಚ ॥

ಶ್ರೋತ್ರಾಣಾಂ ಪರಮಂ ಶ್ರಾವ್ಯಂ ಪವಿತ್ರಾಣಾಮನುತ್ತಮಂ ।
ದುಸ್ಸ್ವಪ್ನನಾಶನಂ ಪುಣ್ಯಂ ಶ್ರೋತವ್ಯಂ ಯತ್ನತಸ್ತತಃ ॥ ೨೬ ॥

ಉತ್ತಮಶ್ರದ್ಧಯಾ ಯುಕ್ತಃ ಶ್ಲೋಕಂ ಶ್ಲೋಕಾರ್ಧಮೇವ ಚ ।
ಪಠಿತ್ವಾ ಮುಚ್ಯತೇ ಸದ್ಯೋ ಮಹಾಪಾತಕಕೋಟಿಭಿಃ ॥ ೨೭ ॥

---

೨೪. ಈ ವ್ರತದ ಮಹಿಮೆಯಿಂದ ನಾನು ನಿನಗೆ ವಶಳಾಗಿದ್ದೇನೆ. ಸಂಶಯವಿಲ್ಲ. ನಿನ್ನ ವಂಶದಲ್ಲಿ ಉತ್ತಮರಾದ ಬ್ರಾಹ್ಮಣರು ಹುಟ್ಟುತ್ತಾರೆ. ಮತ್ತು ಅವರು ಈ ವ್ರತದ ಮಹಿಮೆಯಿಂದ ಐಶ್ವರ್ಯವನ್ನು ಹೊಂದುತ್ತಾರೆ. ಸಂಶಯವಿಲ್ಲ. ಸತ್ಯವು.

೨೫. ಬ್ರಾಹ್ಮಣನು ಹೇಳಿದನು–ಎಲೈ ಲಕ್ಷ್ಮಿಯೆ! ನೀನು ಪ್ರಸನ್ನಳಾಗಿದ್ದರೆ ಆ ಕಮಲಾ ವ್ರತವನ್ನು ವಿಸ್ತಾರವಾಗಿ ಹೇಳು. ಆ ಕಥೆಯನ್ನು ಸಾಧುಗಳಾದ ಜನರೆಲ್ಲರೂ ಹೇಳುತ್ತಿರುವರಲ್ಲ!

೨೬. ಲಕ್ಷ್ಮಿಯು ಹೇಳಿದಳು–ಆ ಕಥೆಯು ಕೇಳತಕ್ಕವರಿಗೆ ಆನಂದವನ್ನುಂಟುಮಾಡುತ್ತದೆ. ಪವಿತ್ರವಾದುವುಗಳೊಳಗಿಲ್ಲಾ ಪವಿತ್ರವಾದುದು. ದುಸ್ಸ್ವಪ್ನವನ್ನು ನಾಶಮಾಡುತ್ತದೆ. ಪುಣ್ಯವನ್ನು ಉಂಟುಮಾಡುತ್ತದೆ. ಆದುದರಿಂದ ಪ್ರಯತ್ನಪಟ್ಟು ಕೇಳಬೇಕು.

೨೭. ಯೋಗ್ಯನಾಗಿ ಶ್ರದ್ಧೆಯಿಂದ ಆ ಕಥೆಯನ್ನಾಗಲಿ ಅಥವಾ ಅದರಲ್ಲಿ ಒಂದು ಶ್ಲೋಕವನ್ನಾಗಲಿ ಕೊನೆಗೆ ಶ್ಲೋಕದಲ್ಲಿ ಅರ್ಧವನ್ನಾಗಲಿ ಓದಿದರೂ ಕೇಳಿದರೂ ಅನೇಕ ಕೋಟಿ ಪಾಪಗಳನ್ನು ಮಾಡಿದ್ದರೂ ಅದರಿಂದ ಮುಕ್ತನಾಗುತ್ತಾನೆ.

ಮಾಸಾನಾಂ ಪರಮೋ ಮಾಸಃ ಪಕ್ಷಿಣಾಂ ಗರುಡೋ ಯಥಾ ।
ನದೀನಾಂ ಚ ಯಥಾ ಗಂಗಾ ತಿಥೀನಾಂ ದ್ವಾದಶೀ ತಿಥಿಃ || ೨೮ ||

ಅದ್ಯಾಪಿ ನಿರ್ಜರಾಸ್ಸರ್ವೇ ಭಾರತೇ ಜನ್ಮಲಿಪ್ಸವಃ ।
ತಮರ್ಚಯನ್ತಿ ವಿಬುಧಾ ನಾರಾಯಣಮನಾಮಯಂ || ೨೯ ||

ಯೇ ಜಪಂತಿ ಸದಾ ಭಕ್ತ್ಯಾ ದೇವಂ ನಾರಾಯಣಂ ಪ್ರಭುಂ ।
ತಾನರ್ಚಯಂತಿ ಸತತಂ ಬ್ರಹ್ಮಾದ್ಯಾ ದೇವತಾಗಣಾಃ || ೩೦ ||

ಯೇಽಪಿ ನಾಮಪರಾ ಯೇ ಚ ಹರಿಕೀರ್ತನತತ್ಪರಾಃ ।
ಹರಿಪೂಜಾ ಪರಾ ಯೇ ಚ ತೇ ಕೃತಾರ್ಥಾಃ ಕಲೌ ಯುಗೇ || ೩೧ ||

ಶುಕ್ಲೇ ವಾ ಯದಿ ವಾ ಕೃಷ್ಣೇ ಭವೇದೇಕಾದಶೀ ದ್ವಯಂ ।
ಗೃಹಸ್ಥಾನಾಂ ಭವೇತ್ಪೂರ್ವಾ ಯತೀನಾಮುತ್ತರಾಸ್ಮೃತಾ || ೩೨ ||

---

೨೮. ಪಕ್ಷಿಗಳಲ್ಲಿ ಗರುಡನಂತೆಯೂ ನದಿಗಳಲ್ಲಿ ಗಂಗೆಯಂತೆಯೂ ತಿಥಿಗಳಲ್ಲಿ ದ್ವಾದಶಿಯ ತಿಥಿಯಂತೆಯೂ ಈ ಅಧಿಕಮಾಸವು ಮಾಸಗಳಲ್ಲಿ ಉತ್ತಮವಾದ ಮಾಸವು.

೨೯. ಈ ವ್ರತಾದಿಗಳನ್ನು ಆಚರಿಸಲು ದೇವತೆಗಳೂ ಕೂಡ ಈಗಲೂ ಭಾರತದಲ್ಲಿ ಜನ್ಮವೆತ್ತಬೇಕೆನ್ನುತ್ತಾರೆ. ಆದ್ದರಿಂದಲೇ ವಿದ್ವಾಂಸರೂ ನಾರಾಯಣನನ್ನು ಪುಜಿಸುತ್ತಾರೆ.

೩೦. ಯಾರು ನಾರಾಯಣನನ್ನು ಭಕ್ತಿಯಿಂದ ಪೂಜಿಸುವರೋ ಅವರನ್ನು ಬ್ರಹ್ಮನೇ ಮುಂತಾದ ದೇವತಾ ಗಣಗಳೂ ಕೂಡ ಪೂಜಿಸುತ್ತಾರೆ.

೩೧. ಯಾರು ಹರಿನಾಮವನ್ನು ಭಜಿಸುವರೋ ಯಾರು ಕೀರ್ತಿಸುವರೋ ಯಾರು ಆ ಹರಿಯನ್ನು ಪೂಜಿಸುವರೋ ಅವರೇನೆ ಈ ಕಲಿಯುಗದಲ್ಲಿ ಕೃತಾರ್ಥರು

೩೨. ಶುಕ್ಲಪಕ್ಷದಲ್ಲಾಗಲೀ ಕೃಷ್ಣಪಕ್ಷದಲ್ಲಾಗಲೀ ಬರುವ ಏಕಾದಶಿಗಳು ಎರಡು ದಿನಗಳಲ್ಲಿದ್ದರೆ ಮೊದಲನೆಯದರಲ್ಲಿ ಗೃಹಸ್ಥರೂ ಎರಡನೆಯದರಲ್ಲಿ ಯತಿಗಳೂ ಉಪವಾಸವಿರಬೇಕು.

ಏಕಾದಶೀ ದ್ವಾದಶೀ ಚ ರಾತ್ರಿಶೇಷೇ ತ್ರಯೋದಶೀ ।
ತತ್ರ ಕ್ರತುಶತಂ ಪುಣ್ಯಂ ತ್ರಯೋದಶ್ಯಾಂ ತು ಪಾರಣೇ ॥ ೩೩ ॥

ಏಕಾದಶ್ಯಾಂ ನಿರಾಹಾರಃ ಸ್ಥಿತ್ವಾಹಮಪರೇಽಹನಿ ।
ಭೋಕ್ಷ್ಯಾಮಿ ಪುಂಡರೀಕಾಕ್ಷ ಶರಣಂ ಮೇ ಭವಾಚ್ಯುತ ॥ ೩೪ ॥

ಅಮುಂ ಮಂತ್ರಂ ಸಮುಚ್ಚಾರ್ಯ ದೇವದೇವಸ್ಯ ಚಕ್ರಿಣಃ ।
ಭಕ್ತಿಭಾವೇನ ತುಷ್ಟಾತ್ಮಾ ಉಪವಾಸಂ ಸಮಾಚರೇತ್ ॥ ೩೫ ॥

ಕುರ್ಯಾದ್ದೇವಸ್ಯ ಪುರತೋ ಜಾಗರಂ ನಿಯತೋ ವ್ರತೀ ।
ಗೀತೈರ್ವಾದ್ಯೈಶ್ಚ ನೃತ್ಯೈಶ್ಚ ಪುರಾಣಪಠನಾದಿಭಿಃ ॥ ೩೬ ॥

ತತಃ ಪ್ರಾತಸ್ಸಮುತ್ಥಾಯ ದ್ವಾದಶೀದಿವಸೇ ವ್ರತೀ ।
ಸ್ನಾತ್ವಾ ವಿಷ್ಣುಂ ಸಮಭ್ಯರ್ಚ್ಯ ವಿಧಿವತ್ಪ್ರಯತೇಂದ್ರಿಯಃ ॥ ೩೭ ॥

---

೩೩. ಬೆಳಗ್ಗೆ ಏಕಾದಶಿ ಸ್ವಲ್ಪವಿದ್ದು ಆ ದಿನವೆಲ್ಲಾ ದ್ವಾದಶಿಯಿದ್ದು ಮಾರನೆಯ ದಿನ ಪಾರಣೆಯ ವೇಳೆಗೆ ತ್ರಯೋದಶಿಯು ಸಿಕ್ಕಿದರೆ ಆ ತ್ರಯೋದಶಿಯಲ್ಲಿ ಪಾರಣ ಮಾಡಿದರೆ ನೂರು ಯಾಗಗಳನ್ನು ಮಾಡಿದ ಪುಣ್ಯವು ಬರುವುದು.

೩೪. "ಏಕಾದಶಿಯದಿನ ಆಹಾರವಿಲ್ಲದೆ ಇದ್ದು ಮಾರನೆಯ ದಿನದಲ್ಲಿ ಭೋಜನವನ್ನು ಮಾಡುತ್ತೇನೆ. ಎಲೈ ಅಚ್ಯುತನೆ! ನೀನು ನನಗೆ ರಕ್ಷಕನಾಗು" ಎಂದು ಹೇಳಿ ನಿಯಮದಿಂದ ಇರಬೇಕು.

೩೫. ಹಿಂದೆ ಹೇಳಿದ ಮಂತ್ರವನ್ನು ಹೇಳಿ ಆ ಸ್ವಾಮಿಯಾದ ವಿಷ್ಣುವಿನಲ್ಲಿ ಭಕ್ತಿಯಿಟ್ಟು ಸಂತೋಷದಿಂದ ಉಪವಾಸವಿರಬೇಕು.

೩೬. ಅನಂತರ ರಾತ್ರಿಯೆಲ್ಲವೂ ದೇವರ ಎದುರಿನಲ್ಲಿ ನಿಯಮದಿಂದ ಗಾನ ವಾದ್ಯ ನರ್ತನ ಪುರಾಣವನ್ನು ಓದುವುದು ಇವುಗಳನ್ನುಮಾಡುತ್ತ ಜಾಗರಣೆಯನ್ನು ಮಾಡಬೇಕು.

೩೭–೩೮. ಅನಂತರ ದ್ವಾದಶಿಯ ದಿನ ಬೆಳಗ್ಗೆ ಎದ್ದು ಆ ವ್ರತಿಯು ಸ್ನಾನಮಾಡಿ ನಿಯಮದಿಂದ ವಿಷ್ಣುವನ್ನು ಪೂಜಿಸಬೇಕು. ಏಕಾದಶಿಯ ದಿವಸ

ಪಂಚಾಮೃತೇನ ಸಂಸ್ನಾಪ್ಯ ಏಕಾದಶ್ಯಾಂ ಜನಾರ್ದನಂ ।
ದ್ವಾದಶ್ಯಾಂ ಚ ಪಯಸ್ಸ್ನಾನಾತ್ ಹರೇಸ್ಸಾಯುಜ್ಯಮಶ್ನುತೇ ॥ ೩೮ ॥

ಅಜ್ಞಾನತಿಮಿರಾಂಧಸ್ಯ ವ್ರತೇನಾನೇನ ಕೇಶವ ।
ಪ್ರಸೀದ ಸಮ್ಮುಖೋ ಭೂತ್ವಾ ಜ್ಞಾನದೃಷ್ಟಿಪ್ರದೋ ಭವ ॥ ೩೯ ॥

ಏವಂ ವಿಜ್ಞಾಪ್ಯ ದೇವೇಶಂ ದೇವದೇವಂ ಗದಾಧರಂ ।
ಬ್ರಾಹ್ಮಣಾನ್ ಭೋಜಯೇದ್ಭಕ್ತ್ಯಾ ತೇಭ್ಯೋ ದದ್ಯಾಚ್ಚ ದಕ್ಷಿಣಾಂ ॥ ೪೦ ॥

ತತಸ್ಸ್ವಬಂಧುಭಿಸ್ಸಾರ್ಧಂ ನಾರಾಯಣಪರಾಯಣಃ ।
ಕೃತ್ವಾ ಪಂಚಮಹಾಯಜ್ಞಾನ್ ಸ್ವಯಂ ಭುಂಜೀತ ವಾಗ್ಯತಃ ॥ ೪೧ ॥

ಏವಂ ಯಃ ಪ್ರಯತಃ ಕುರ್ಯಾತ್ ಪುಣ್ಯಮೇಕಾದಶೀವ್ರತಂ ।
ಸ ಯಾತಿ ವಿಷ್ಣುಭವನಂ ಪುನರಾವೃತ್ತಿದುರ್ಲಭಂ ॥ ೪೨ ॥

---

ಪಂಚಾಮೃತದಿಂದ ಸ್ನಾನಮಾಡಿಸಿ ದ್ವಾದಶಿಯ ದಿವಸ ಹಾಲಿನ ಅಭಿಷೇಕವನ್ನು ವಿಷ್ಣುವಿಗೆ ಮಾಡಬೇಕು. ಹಾಗೆ ಮಾಡಿದರೆ ಹರಿಯ ಸಾಯುಜ್ಯವನ್ನು ಹೊಂದುತ್ತಾನೆ.

೩೯-೪೦. ಎಲೈ ಕೇಶವನೆ! ಅಜ್ಞಾನವೆಂಬ ಕತ್ತಲೆಯಲ್ಲಿ ಕಣ್ಣುಕಾಣಿಸದ ನನಗೆ ಈ ವ್ರತದಿಂದ ಪ್ರಸನ್ನನಾಗಿ ಜ್ಞಾನದೃಷ್ಟಿಯನ್ನು ಕೊಡು ಎಂದು ವಿಷ್ಣುವನ್ನು ಕೇಳಿಕೊಂಡು ಅನಂತರ ಬ್ರಾಹ್ಮಣರಿಗೆ ಭೋಜನಮಾಡಿಸಿ ಅವರಿಗೆ ಭಕ್ತಿಯಿಂದ ದಕ್ಷಿಣೆಯನ್ನು ಕೊಡಬೇಕು.

೪೧. ಅನಂತರ ಈ ವ್ರತ ಮಾಡುವವನು ಪಂಚ ಮಹಾಯಜ್ಞಗಳನ್ನು ಮಾಡಿ ಬಂಧುಗಳೊಡನೆ ಸೇರಿಕೊಂಡು ತಾನೂ ನಿಯಮದಿಂದ ಊಟ ಮಾಡಬೇಕು.

೪೨. ಈ ರೀತಿಯಾಗಿ ಯಾವನು ಪುಣ್ಯವಾದ ಏಕಾದಶಿಯ ವ್ರತವನ್ನು ಮಾಡುತ್ತಾನೆಯೋ ಅವನು ಪುನರಾವೃತ್ತಿಯಿಲ್ಲದ ವೈಕುಂಠವನ್ನು ಹೊಂದುವನು.

॥ ಶ್ರೀಕೃಷ್ಣ ಉವಾಚ ॥

ಇತ್ಯುಕ್ತ್ವಾ ಕಮಲಾ ತಸ್ಮೈ ವರಂ ದತ್ವಾ ತಿರೋದಧೇ ।
ಸೋಽಪಿ ವಿಪ್ರೋ ಧನೀಭೂತ್ವಾ ಪಿತುರ್ಗೇಹಂ ಸಮಾಗತಃ ॥ ೬೩ ॥

ಏವಂ ಯಃ ಕುರುತೇ ರಾಜನ್ ಕಮಲಾವ್ರತಮುತ್ತಮಂ ।
ಶೃಣುಯಾದ್ವಾಸರೇ ವಿಷ್ಣೋಃ ಸರ್ವಪಾಪೈಃ ಪ್ರಮುಚ್ಯತೇ ॥ ೬೪ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಪತಿ ನಾರದ ಸಂವಾದಾಂತರ್ಗತ ಶ್ರೀ ಕೃಷ್ಣ ಯುಧಿಷ್ಠಿರ ಸಂವಾದೇ ಪುರುಷೋತ್ತಮ ಮಾಸಸ್ಯ ಕೃಷ್ಣ ಕಮಲೈಕಾದಶೀ ವರ್ಣನಂ ನಾಮ ಚತುಷ್ಷಷ್ಟಿತಮೋಽಧ್ಯಾಯಸ್ಸಮಾಪ್ತಃ

---

೬೩. ಶ್ರೀ ಕೃಷ್ಣನು ಹೇಳಿದನು– ಕಮಲೆಯು ಆ ಜಯಶರ್ಮನಿಗೆ ಹೀಗೆ ಹೇಳಿ ವರವನ್ನು ಕೊಟ್ಟು ಹೊರಟುಹೋದಳು. ಆ ಬ್ರಾಹ್ಮಣನೂ ಧನಿಕನಾಗಿ ಮತ್ತೆ ತಂದೆಯ ಮನೆಗೆ ಬಂದನು.

೬೪. ಈ ರೀತಿಯಾಗಿ ಯಾವನು ಕಮಲಾ ವ್ರತವನ್ನು ಮಾಡುತ್ತಾನೆಯೋ, ಆ ವಿಷ್ಣುವಿನ ಪುಣ್ಯದಿನದಲ್ಲಿ ಯಾವನು ಕಥೆಗಳನ್ನು ಕೇಳುತ್ತಾನೆಯೋ ಅವರು ಎಲ್ಲಾ ಪಾಪಗಳನ್ನೂ ಕಳೆದುಕೊಂಡು ಮುಕ್ತಿಯನ್ನು ಹೊಂದುತ್ತಾರೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಪತಿ ನಾರದರ ಸಂವಾದದೊಳಗಿನ ಕೃಷ್ಣ ಯುಧಿಷ್ಠಿರರ ಸಂವಾದದಲ್ಲಿ ಪುರುಷೋತ್ತಮ (ಅಧಿಕ) ಮಾಸದ ಕೃಷ್ಣ ಕಮಲೈಕಾದಶಿಯ ವರ್ಣನೆ ಎಂಬ ಅರವತ್ತನಾಲ್ಕನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

+

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ

## || ಪಂಚಷಷ್ಟಿತಮೋಽಧ್ಯಾಯಃ ||



॥ ಯುಧಿಷ್ಠಿರ ಉವಾಚ ॥

ಶ್ರುತಾನಿ ಬಹುಧರ್ಮಾಣಿ ವ್ರತಾನಿ ಚ ಜಗತ್ಪ್ರಭೋ ।
ಏಕಾದಶೀಸಮಂ ಕಿಂಚಿಚ್ಛ್ರುತಂ ನೈವ ಜನಾರ್ದನ || ೧ ||

ಪುನಸ್ತ್ವೇಕಾದಶೀಂ ಬ್ರೂಹಿ ಪಾಪಘ್ನೀಂ ಪುಣ್ಯದಾಯಿನೀಂ ।
ಯಾಂ ಕೃತ್ವಾ ಮನುಜೋ ಲೋಕೇ ಪ್ರಾಪ್ನುಯಾತ್ಪರಮಂ ಪದಂ || ೨ ||

---

## ಅರವತ್ತೈದನೆಯ ಅಧ್ಯಾಯವು



೧. ಯುಧಿಷ್ಠಿರನು ಹೇಳಿದನು–ಎಲೈ ಪ್ರಭುವಾದ ಕೃಷ್ಣನೇ! ನಾನು ಅನೇಕವಾದ ವ್ರತಗಳನ್ನೂ ಧರ್ಮಗಳನ್ನೂ ಕೇಳಿದ್ದೇನೆ. ಆದರೆ ಏಕಾದಶಿಗೆ ಸಮವಾದುದೊಂದನ್ನೂ ಕೇಳಿಯೇ ಇಲ್ಲ.

೨. ಮತ್ತೆ ಮತ್ತೆ ಆ ಪಾಪನಾಶವಾದ ಪುಣ್ಯಪ್ರದವಾದ ಏಕಾದಶಿಯ ವಿಷಯವನ್ನೇ ಹೇಳು. ಆ ಏಕಾದಶಿಯನ್ನು ಲೋಕದಲ್ಲಿ ಆಚರಿಸುವುದರಿಂದ ಮನುಷ್ಯನು ಮುಕ್ತಿಯನ್ನು ಹೊಂದುತ್ತಾನೆ.

|| ಶ್ರೀಕೃಷ್ಣ ಉವಾಚ ||

ಶುಕ್ಲೇ ವಾ ಯದಿ ವಾ ಕೃಷ್ಣೇ ಯದಾ ಚೈಕಾದಶೀ ಭವೇತ್ ।
ನ ತ್ಯಾಜ್ಯಾ ಜಗತೀಪಾಲ ಮೋಕ್ಷಸೌಖ್ಯವಿವರ್ಧಿನೀ || ೩ ||

ಏಕಾದಶೀ ಕಲೌ ರಾಜನ್ ಭವಬಂಧನಮೋಚನೀ ।
ಕಾಮದಾ ಸರ್ವಕಾಮಾನಾಂ ಪಾಪಾನಾಂ ಪಾಪಹಾ ಭುವಿ || ೪ ||

ರವಿವಾರೇಥ ಮಾಂಗಲ್ಯೇ ಸಂಕ್ರಮೇ ವಾ ನೃಪೋತ್ತಮ ।
ಏಕಾದಶೀ ಸದೋಪೋಷ್ಯಾ ಪುತ್ರಪೌತ್ರವಿವರ್ಧಿನೀ || ೫ ||

ಏಕಾದಶೀವ್ರತಂ ಕ್ವಾಪಿ ನ ತ್ಯಾಜ್ಯಂ ವಿಷ್ಣುವಲ್ಲಭೈಃ ।
ಆಯುಷ್ಕೀರ್ತಿಪ್ರದಂ ನಿತ್ಯಂ ಸಂತಾನಾರೋಗ್ಯವಿತ್ತದಂ || ೬ ||

---

೩. ಶ್ರೀ ಕೃಷ್ಣನು ಹೇಳಿದನು–ಎಲೈ ಧರ್ಮಜನೇ! ಶುಕ್ಲಪಕ್ಷದಲ್ಲಾಗಲೀ ಕೃಷ್ಣಪಕ್ಷದಲ್ಲಾಗಲೀ ಏಕಾದಶಿಯು ಬಂದರೆ ಬಿಡಬಾರದು. ಅದನ್ನೂ ಮಾಡಬೇಕು. ಅದು ಮೋಕ್ಷವನ್ನೂ ಸೌಖ್ಯವನ್ನೂ ಕೊಡುತ್ತದೆ.

೪. ಎಲೈ ರಾಜನೇ! ಈ ಏಕಾದಶಿಯು ಕಲಿಯುಗದಲ್ಲಿ ಸಂಸಾರ ಬಂಧನವನ್ನು (ಜನನ ಮರಣಗಳನ್ನು) ಬಿಡಿಸುತ್ತದೆ ಭೂಮಿಯಲ್ಲಿರುವ ಇಚ್ಛೆಗಳೆಲ್ಲವನ್ನೂ ಒದಗಿಸಿಕೊಡುತ್ತದೆ. ಪಾಪಿಗಳ ಪಾಪವೆಲ್ಲವನ್ನೂ ನಾಶಮಾಡುತ್ತದೆ.

೫. ಭಾನುವಾರದ ಏಕಾದಶಿ, ಮಂಗಳವಾರದ ಏಕಾದಶಿ, ಸಂಕ್ರಮಣದ ಏಕಾದಶಿ, ಇವನ್ನು ಯಾವಾಗಲೂ ಬಿಡದೆ ಉಪವಾಸ ಮಾಡಬೇಕು. ಪುತ್ರಪೌತ್ರರನ್ನು ಕೊಟ್ಟು ಹೆಚ್ಚಿಸುತ್ತದೆ.

೬–೭. ಎಲೈ ಧರ್ಮಜನೇ! ವೈಷ್ಣವರಾದವರು ಏಕಾದಶೀ ವ್ರತವನ್ನು ಬಿಡಲೇಬಾರದು. ಯಾರು ಹೆಚ್ಚಾದ ಶ್ರದ್ಧೆಯಿಂದ ಮಾಡುವರೋ ಅವರಿಗೆ

ಮೋಕ್ಷದಂ ರೂಪದಂ ರಾಜನ್ನಿತ್ಯಮೇಕಾದಶೀ ವ್ರತಂ ।
ಯೇ ಕುರ್ವಂತಿ ಮಹೀಪಾಲ ಶ್ರದ್ಧಯಾ ಪರಯಾ ಯುತಾಃ ॥ ೭ ॥

ಯಥೋಕ್ತವಿಧಿನಾ ಲೋಕೇ ತೇ ನರಾ ವಿಷ್ಣುರೂಪಿಣಃ ।
ಜೀವನ್ಮುಕ್ತಾಸ್ತು ಭೂಪಾಲ ದೃಶ್ಯಂತೇ ನಾತ್ರ ಸಂಶಯಃ ॥ ೮ ॥

॥ ಯುಧಿಷ್ಠಿರ ಉವಾಚ ॥

ಜೀವನ್ಮುಕ್ತಾಃ ಕಥಂ ಕೃಷ್ಣ ವಿಷ್ಣುರೂಪಾಃ ಕಥಂ ಪುನಃ ।
ಕಾಮರೂಪಾಶ್ಚ ದೃಶ್ಯಂತೇ ಪರಂ ಕೌತೂಹಲಂ ಹಿ ಮೇ ॥ ೯ ॥

॥ ಶ್ರೀಕೃಷ್ಣ ಉವಾಚ ॥

ಯೇ ಚ ರಾಜನ್ಕಲೌ ಭಕ್ತ್ಯಾ ನಿರ್ಜಲಂ ವ್ರತಮುತ್ತಮಂ ।
ಏಕಾದಶ್ಯಾಃ ಪ್ರಕುರ್ವಂತಿ ವಿಧಿದೃಷ್ಟೇನ ಕರ್ಮಣಾ ॥ ೧೦ ॥

---

ಆಯುಸ್ಸು, ಕೀರ್ತಿ, ಸಂತಾನ, ಹಣ, ಮೋಕ್ಷ, ಸೌಂದರ್ಯ ಇವನ್ನು ಕೊಡುತ್ತದೆ.

೮. ಯಾರು ಹೆಚ್ಚು ಶ್ರದ್ಧೆಯಿಂದ ಲೋಕದಲ್ಲಿ ವಿಧಿವತ್ತಾಗಿ ಏಕಾದಶೀ ವ್ರತವನ್ನು ಮಾಡುತ್ತಾರೆಯೋ ಅವರು ವಿಷ್ಣುರೂಪಿಗಳು. ಅವರೇ ಲೋಕದಲ್ಲಿ ಜೀವನ್ಮುಕ್ತರಾಗಿ ಕಾಣಿಸುತ್ತಿರುತ್ತಾರೆ.

೯. ಯುಧಿಷ್ಠಿರನು ಹೇಳಿದನು– ಎಲೈ ಕೃಷ್ಣನೇ! ಅವರು ಹೇಗೆ ಜೀವನ್ಮುಕ್ತರು? ವಿಷ್ಣುರೂಪಿಗಳೂ ತಾನೆ ಹೇಗೆ? ಅವರನ್ನು ನೋಡಿದರೆ ಪಾಪಿಗಳಂತೆಯೇ ಕಾಣುತ್ತಾರೆ. ಇದನ್ನು ನೋಡಿ ನನಗೆ ಬಹು ಆಶ್ಚರ್ಯ ಉಂಟಾಗುತ್ತದೆ.

೧೦–೧೧. ಶ್ರೀಕೃಷ್ಣನು ಹೇಳಿದನು– ಎಲೈ ಧರ್ಮಜನೇ! ಯಾರು ಕಲಿಯುಗದಲ್ಲಿ ಏಕಾದಶಿಯನ್ನು ವಿಧಿವತ್ತಾಗಿ ಆಚರಿಸಿ ನೀರನ್ನೂ ಕುಡಿಯದೆ

ನ ಕಥಂವಿಷ್ಣುರೂಪಾಸ್ತೇ ಜೀವನ್ಮುಕ್ತಾಃ ಕಥಂ ನ ಹಿ ।
ಸರ್ವಪಾಪಹರಂ ಪುಣ್ಯಂ ವ್ರತಮೇಕಾದಶೀಸಮಂ ॥ ೧೧ ॥

ನ ಕಿಂಚಿದ್ವಿದ್ಯತೇ ರಾಜನ್ ಸರ್ವಕಾಮಪ್ರದಂ ನೃಣಾಂ ।
ಏಕಾಶನಂ ದಶಮ್ಯಾಂ ತು ನಂದಾಯಾಂ ನಿರ್ಜಲಂ ವ್ರತಂ ॥ ೧೨ ॥

ಪಾರಣಂ ಚೈವ ಭದ್ರಾಯಾಂ ಕೃತ್ವಾ ವಿಷ್ಣುಸಮಾ ನರಾಃ ।
ಶ್ರದ್ಧಾವಾನ್ಯಸ್ತು ಕುರುತೇ ಕಾಮದಾಯಾ ವ್ರತಂ ಶುಭಂ ॥ ೧೩ ॥

ವಾಂಛಿತಂ ಲಭತೇ ಸೋಽಪಿ ಇಹ ಲೋಕೇ ಪರತ್ರ ಚ ।
ಪವಿತ್ರಾ ಪಾವನೀ ಹ್ಯೇಷಾ ಮಹಾಪಾತಕನಾಶಿನೀ ॥ ೧೪ ॥

ಭುಕ್ತಿಮುಕ್ತಿಪ್ರದಾ ಚೈವ ಕರ್ತೄಣಾಂ ನೃಪಸತ್ತಮ ।
ಕಾಮದಾಯಾಂ ವಿಧಾನೇನ ಪೂಜಯೇತ್ಪುರುಷೋತ್ತಮಂ ॥ ೧೫ ॥

---

ಇರುವರೋ ಅವರು ಹೇಗೆತಾನೇ ವಿಷ್ಣುರೂಪರಲ್ಲ! ಜೀವನ್ಮುಕ್ತರೂ ತಾನೇ ಅಲ್ಲ! ಏಕಾದಶಿಯು ಎಲ್ಲಾ ಪಾಪಗಳನ್ನೂ ಹಾಳುಮಾಡುತ್ತದೆ.

೧೨–೧೪. ಈ ಏಕಾದಶಿಗೆ ಸಮವಾದ ವ್ರತವು ಯಾವುದೂ ಇಲ್ಲವೇಇಲ್ಲ. ಎಲ್ಲಾ ಇಷ್ಟಾರ್ಥಗಳನ್ನೂ ಕೊಡುತ್ತದೆ. ದಶಮಿಯ ದಿನ ಒಪ್ಪತ್ತು ಊಟಮಾಡಿ ಏಕಾದಶಿಯ ದಿನ ನೀರನ್ನು ಕುಡಿಯದೆ ವ್ರತವನ್ನು ಮಾಡಿ ದ್ವಾದಶಿಯ ದಿವಸ ಪಾರಣೆಯನ್ನು ಮಾಡಿದವನು ಹೇಗೆತಾನೇ ವಿಷ್ಣುವಿಗೆ ಸಮಾನನಾಗುವುದಿಲ್ಲ! ಶ್ರದ್ಧೆಯಿಂದ ಈ ಏಕಾದಶಿಯನ್ನು ಮಾಡಿದವನು ಈ ಲೋಕದಲ್ಲಿ ಇಷ್ಟಕಾಮ ವನ್ನೆಲ್ಲಾ ಹೊಂದಿ ಪರಲೋಕದಲ್ಲಿ ಉತ್ತಮ ಪದವನ್ನು ಹೊಂದುತ್ತಾನೆ. ಈ ಕಾಮದೈಕಾದಶಿಯು ಪಾವನವಾದುದು. ಪಾಪನಾಶಕವಾದುದು.

೧೫–೧೭. ಈ ಕಾಮದೈಕಾದಶಿಯನ್ನು ಮಾಡತಕ್ಕವರಿಗೆ ಭುಕ್ತಿ ಮುಕ್ತಿ ಗಳನ್ನು ಕೊಟ್ಟು ಸಕಲ ಇಷ್ಟಾರ್ಥಗಳನ್ನೂ ಕೊಡುತ್ತದೆ. ಕಾಮದೆಯನ್ನು

ಪುಷ್ಪಧೂಪಾದಿಭಿಶ್ಚೈವ ನೈವೇದ್ಯೈಶ್ಚ ಫಲಪ್ರದಾ ।
ಕಾಂಸ್ಯಂ ಮಾಂಸಂ ಮಸೂರಾಂಶ್ಚ ಚಣಕಾನ್ಕೋದ್ರವಾಂಸ್ತಥಾ ॥ ೧೬ ॥

ಶಾಕಂ ಮಧು ಪರಾನ್ನಂ ಚ ಪುನರ್ಭೋಜನಮೈಥುನೇ ।
ವೈಷ್ಣವೋ ವ್ರತಕರ್ತಾ ಚ ದಶಮ್ಯಾಂ ದಶ ವರ್ಜಯೇತ್ ॥ ೧೭ ॥

ದ್ಯೂತಂ ಕ್ರೀಡಾಂ ತಥಾ ನಿದ್ರಾಂ ತಾಂಬೂಲಂ ದಂತಧಾವನಂ ।
ಪರಾಪವಾದಂ ಪೈಶುನ್ಯಂ ಸ್ತೇಯಂ ಹಿಂಸಾಂ ತಥಾ ರತಿಂ ॥ ೧೮ ॥

ಕ್ರೋಧಂ ಚ ವಿತಥಂ ವಾಕ್ಯಮೇಕಾದಶ್ಯಾಂ ವಿವರ್ಜಯೇತ್ ।
ಕಾಂಸ್ಯಂ ಮಾಂಸಂ ಮಸೂರಾಂಶ್ಚ ತೈಲಂ ವಿತಥಭಾಷಣಂ ॥ ೧೯ ॥

ವ್ಯಾಯಾಮಂ ಚ ಪ್ರವಾಸಂ ಚ ಪುನರ್ಭೋಜನಮೈಥುನೇ ।
ವೃಷಪೃಷ್ಠಂ ಪರಾನ್ನಂ ಚ ಶಾಕಂ ಚ ದ್ವಾದಶೀದಿನೇ ॥ ೨೦ ॥

ಅನೇನ ವಿಧಿನಾ ರಾಜನ್ ವಿಹಿತಾ ಯೈಶ್ಚ ಕಾಮದಾ ।
ರಾತ್ರೌ ಜಾಗರಣಂ ಕೃತ್ವಾ ಪೂಜಿತಃ ಪುರುಷೋತ್ತಮಃ ॥ ೨೧ ॥

---

ವಿಧಿವತ್ತಾಗಿ ಮಾಡಿ ಪುರುಷೋತ್ತಮನನ್ನು ಹೂವು, ಧೂಪ, ದೀಪ, ನೈವೇದ್ಯಗಳಿಂದ ಪೂಜಿಸಿದರೆ ಇಷ್ಟಾರ್ಥಗಳನ್ನು ಕೊಡುತ್ತದೆ- ಕಂಚು, ಮಾಂಸ, ನವಣೆ ಕಡಲೆ, ಹಾರಕ, ಕಾಯಿಪಲ್ಯಗಳು, ಜೇನು, ಪರಾನ್ನ, ಮತ್ತೆ ಊಟಮಾಡುವುದು, ಹೆಂಗಸರನ್ನು ರಮಿಸುವುದು. ದಶಮಿಯ ದಿವಸ ಈ ಹತ್ತನ್ನೂ ಬಿಟ್ಟು ಬಿಡಬೇಕು.

೧೮–೨೦. ಕಂಚು, ಮಾಂಸ, ನವಣೆ, ಎಳ್ಳೆಣ್ಣೆ ಸುಳ್ಳು ಹೇಳುವುದು. ಸಾಧನೆ, ಪ್ರಯಾಣ, ಮತ್ತೆ ಊಟಮಾಡುವುದು. ಮೈಥುನ, ಎತ್ತಿನ ಮೇಲೆ ಕೂರುವುದು, ಪರಾನ್ನ, ಕಾಯಿಪಲ್ಯಗಳು ಇವನ್ನು ದ್ವಾದಶಿಯ ದಿವಸ ಬಿಟ್ಟು ಬಿಡಬೇಕು.

೨೧-೨೨. ಈ ರೀತಿಯಲ್ಲಿ ಕಾಮದೈಕಾದಶಿಯನ್ನು ಆಚರಿಸಿ ರಾತ್ರಿಯಲ್ಲಿ ಪುರುಷೋತ್ತಮನನ್ನು ಪೂಜಿಸುತ್ತಾ ಜಾಗರಣೆಮಾಡಿದವರು ಪಾಪಗಳೆಲ್ಲವನ್ನೂ

**ಸರ್ವಪಾಪವಿನಿರ್ಮುಕ್ತಾಸ್ತೇ ಯಾಂತಿ ಪರಮಾಂ ಗತಿಂ ।**
**ಪಠನಾಚ್ಛ್ರವಣಾದ್ರಾಜನ್ ಗೋಸಹಸ್ರಫಲಂ ಲಭೇತ್ ॥ ೨೨ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಪತಿ ನಾರದ ಸಂವಾದಾನ್ತರ್ಗತ ಕೃಷ್ಣ ಯುಧಿಷ್ಠಿರ ಸಂವಾದೇ ಪುರುಷೋತ್ತಮ ಮಾಸಸ್ಯ ಶುಕ್ಲ ಕಾಮದ್ಯೈಕಾದಶೀ ಮಾಹಾತ್ಮ್ಯಂ ಪಂಚಷಷ್ಟಿತಮೋಽಧ್ಯಾಯಸ್ಸಮಾಪ್ತಃ**

---

ಕಳೆದುಕೊಂಡು ಉತ್ತಮಗತಿಯನ್ನು ಹೊಂದುತ್ತಾರೆ. ಈ ಕಾಮದೆಯ ವ್ರತ ವನ್ನು ಓದಿದವರೂ ಕೇಳಿದವರೂ ಸಾವಿರಗೋದಾನ ಮಾಡಿದ ಫಲವನ್ನು ಹೊಂದುತ್ತಾರೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಪತಿ ನಾರದರ ಸಂವಾದಾಂತರ್ಗತವಾದ ಕೃಷ್ಣ ಯುಧಿಷ್ಠಿರರ ಸಂವಾದದಲ್ಲಿ ಪುರುಷೋತ್ತಮ (ಅಧಿಕ) ಮಾಸದ ಶುಕ್ಲ ಕಾವದ್ಯೈಕಾದಶೀ ಮಹಿಮೆ ಎಂಬ ಅರವತ್ತೈದನೆಯ ಅಧ್ಯಾಯವು ಮುಗಿದುದು.





ಏಕಾದಶಿ ಮಾಹಾತ್ಮ್ಯಂ ಸಮಾಪ್ತಂ.

